## ಬರಲಿರುವ ಕಾದಂಬರಿಗಳು

ಸ್ವಯಂವರ — ಮ. ನ. ಮೂರ್ತಿ

ಚುಂಬನ — ತ. ರಾ. ಸು.

ಕನಕಾಂಬರ — ಚದುರಂಗ

ಸಮಾಗಮ — ತ. ರಾ. ಸು.

⋆

ಸುದರ್ಶನ ಪ್ರಕಾಶನ

"ತಾರಾನಿವಾಸ" : : ತಿಪಟೂರು

Mr. K. Srinivasa Rao
Sundar Cafe Boarding H
Hosa

# ಅಭಯ

ನಿರಂಜನ

ಶ್ರೀನಿವಾಸ ಪುಸ್ತಕ ಭಂಡಾರ,
ಶಿವಮೊಗ್ಗ.

ಸುದರ್ಶನ ಪ್ರಕಾಶನ, ತಿಪಟೂರು

ಮೊದಲನೆಯ ಮುದ್ರಣ : ಏಪ್ರಿಲ್, ೧೯೫೪.

ಎಲ್ಲ ಹಕ್ಕುಗಳೂ ಲೇಖಕರವು

S 022056

ಮುಖಚಿತ್ರ:

ಎಸ್. ರಮೇಶ್

8K3.6
KUL a

ಬೆಲೆ ರೂ. ೧—೮—೦

ಮುಖಚಿತ್ರದ ಮುದ್ರಣ :

ಚಿತ್ರ ಪ್ರಿಂಟರಿ, ಬೆಂಗಳೂರು

ಮುದ್ರಕರು :

ವಿಶ್ವವಾಣಿ ಮುದ್ರಣಾಲಯ

೧ನೇ ಬೀದಿ, ಚಾಮರಾಜಪೇಟೆ, ಬೆಂಗಳೂರು ೨.

# ಪ್ರಕಾಶನದ ಪರವಾಗಿ

ಜನತೆಗೆ ಉತ್ತಮ ದರ್ಜೆಯ ಸಾಹಿತ್ಯವನ್ನು ಕೊಡಬೇಕೆಂಬ ಸಂಕಲ್ಪದಿಂದ, ಕಡಿಮೆ ಬೆಲೆಯ ಹೊತ್ತಗೆಗಳನ್ನು ಹೊರತರಲು ಯೋಚಿಸಿದ ಮೊದಲ ಘಟ್ಟದಲ್ಲಿ, ತ. ರಾ. ಸು. ರವರು ತಮ್ಮ "ಮೊದಲ ನೋಟ" ದಿಂದ ಹರಸಿದರು. ಅದು ನಿಮ್ಮ ಕೈಸೇರಿದ ಕೆಲದಿನಗಳಲ್ಲೇ ಈಗ ನಿಮ್ಮ ಕೈಸೇರುತ್ತಿರುವ ಈ ಕಾದಂಬರಿ, "ಕಡಿಮೆ ಬೆಲೆಯ ಕೈ ಹೊತ್ತಿಗೆಗಳನ್ನು ತರಲಿರುವ ನನ್ನ ಉದ್ಯಮದಲ್ಲಿ ಒಂದು ಕೃತಿಯಿತ್ತು ನೆರವೀಯಬೇಕು" ಎಂದು ನಿರಂಜನರನ್ನು, ಕೇಳಿದಾಗ ಅವರು ಅಭಯಹಸ್ತ ನೀಡಿ ಇತ್ತಿರುವ ಕೃತಿ "ಅಭಯ."

ಇದು ನಿಮ್ಮೆಲ್ಲರ ಮೆಚ್ಚುಗೆ ಪಡೆಯುತ್ತದೆಂಬುದರ ಬಗ್ಗೆ ನನಗೆ ನಂಬಿಕೆಯಿದೆ. ಕೃತಿಯ ಬಗ್ಗೆ ನಾನು ಹೇಳುವುದಕ್ಕೆಬದಲು, ಓದಿದ ನೀವೇ ಬರೆದು ತಿಳಿಸಬೇಕೆಂದು ಬಯಸುವೆ.

"ಅಭಯ" ಕಾದಂಬರಿ ಹೊರಬರಲು, ಎಲ್ಲರಿಗಿಂತ ಹೆಚ್ಚಿನ ನೆರವಿತ್ತವರು, ಚಿತ್ರ ಪ್ರಿಂಟರಿಯ ಒಡೆಯರಾದ, ಗೆಳೆಯ ಶ್ರೀ ಎಚ್. ವೆಂಕೋಬರಾಯರು. ಇವರ ಅಭಯಹಸ್ತವಿಲ್ಲದಿದ್ದರೆ ಪುಸ್ತಕವನ್ನು ಹೊರತರುತ್ತಲೇ ಇರಲಿಲ್ಲವೆನ್ನಬಹುದು. ಇವರ ಉಪಕಾರಕ್ಕೆ ತುಂಬಾ ಋಣಿ.

"ಮೊದಲ ನೋಟ" ದ ಮುನ್ನುಡಿಯಲ್ಲಿ ತಿಳಿಸಿರುವಂತೆ ಕಡಿಮೆ ಬೆಲೆಯ ಹೊತ್ತಿಗೆಗಳಾಗಿ, ಸಣ್ಣಕತೆಗಳು, ಹರಟೆಗಳು ಇತರ ಸಾಹಿತ್ಯ ಎಲ್ಲವನ್ನೂ ಒದಗಿಸಲು ಯೋಚಿಸಿದೆ. ಓದುಗರ ಪ್ರೋತ್ಸಾಹದ ಮೇಲೆ ನಮ್ಮ ಯೋಜನೆ ಅವಲಂಬಿಸಿದೆ. ಸಣ್ಣಕತೆಗಳ ಸಂಕಲನವೊಂದನ್ನು ಸದ್ಯದಲ್ಲಿ ಹೊರತರಲಿದ್ದೇನೆಂದು ತಿಳಿಸಲು ಸಂತೋಷಿಸುತ್ತೇನೆ.

ಕಡಿಮೆ ಬೆಲೆಯ ಕೈಹೊತ್ತಗೆಗಳಾಗಿ ಈಗ ಹೆಸರಾಂತ ಸಾಹಿತಿಗಳ ಕೃತಿಗಳೇ ಬರುತ್ತವೆ, ಕಿರಿಯರಿಗೆ ಪ್ರೋತ್ಸಾಹ ದೊರೆತಿಲ್ಲ, ಎಂಬ ದೂರು,

ನಮ್ಮ ಮಾಲೆಯಲ್ಲಿ ಒಂದು ಪ್ರಕಟನೆಯೂ ಹೊರಬರುವುದಕ್ಕಿಂತ ಮುಂಚೆಯೇ ಬಂದಿದೆ. ಹಿರಿಯ ಕಿರಿಯರ ಕೃತಿಗಳನ್ನು ಪ್ರಕಟಿಸುವ ಯೋಜನೆಯನ್ನು ಮೊದಲ ಪ್ರಕಟನೆಯಲ್ಲೇ ತಿಳಿಸಲಾಗಿದೆ. ಹಸ್ತಪ್ರತಿ ಕೈಸೇರಿದ ತಕ್ಷಣ ಅದನ್ನು ಪ್ರಕಟಿಸಿಬಿಡಿ ಎಂಬ ಒತ್ತಾಯವೂ ಪ್ರಕಟಿಸುವುದಾದರೆ ಹಸ್ತಪ್ರತಿ ಕಳುಹುತ್ತೇನೆನ್ನುವ ಕಾಗದಗಳೂ ಹಿರಿಯ ಸಾಹಿತಿಗಳ ಕೃತಿಗಿಂತಲೂ ತಮ್ಮ ಕೃತಿ ಮೇಲು ಎಂದು ಹೇಳಿಕೊಳ್ಳುತ್ತಿರುವ ಪತ್ರಗಳೂ ಕಿರಿಯ ಸಾಹಿತಿಗಳಿಂದ ನನಗೆ ಬರುತ್ತಿವೆ. ಕೃತಿ ಉತ್ತಮವಾಗಿದ್ದರೆ ಪ್ರಕಟನೆ ಮಾಡಲು ಯಾರು ತಾನೆ ಹಿಂಜರಿಯುತ್ತಾರೆ? ಗುಣಕ್ಕೆ ಪಕ್ಷಪಾತವುಂಟೆ? ಉತ್ತಮ ಕಥಾವಸ್ತುಗಳಿಂದ ಕೂಡಿದ ಕೃತಿಗಳಿಗೆ ಸರ್ವದಾ ಸ್ವಾಗತವಿದೆ. ಉತ್ತಮ ದರ್ಜೆಯ ಸಾಹಿತ್ಯವನ್ನು ಕೊಡುವುದೇ ನಮ್ಮ ಮುಖ್ಯಗುರಿ.

ಈ ಪ್ರಕಟನೆಗೆ ಮುಖಚಿತ್ರ ಬರೆದುಕೊಟ್ಟ ಶ್ರೀ ರಮೇಶ್‌ರಿಗೆ, ಪುಸ್ತಕವನ್ನು ಮುದ್ರಿಸಿಕೊಟ್ಟ ವಿಶ್ವವಾಣಿ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ ಕ. ಬಾ. ಮಾಧೂರಾಯರಿಗೆ, ಮುದ್ರಣಕಾರ್ಯದಲ್ಲಿ ನೆರವಾದ ಶ್ರೀ ಎಸ್. ಕೆ. ನಾಡಿಗ್ ಅವರಿಗೆ ನನ್ನ ಹೃತ್ಪೂರ್ಣ ನೆನಕೆಗಳು.

ತಿಪಟೂರು
ಯುಗಾದಿ, "ಜಯ."

ತಾ. ರಾ. ನಾಗರಾಜ

## ಓದುವುದಕ್ಕೆ ಮುಂಚೆ

ಮೆಚ್ಚಿಕೊಳ್ಳುವಹಾಗಿತ್ತು ಆ ಮುಗುಳುನಗು. ತಿಳಿವಳಿಕೆಯ ಮುಖ ಭಾವ. ಆತ್ಮವಿಶ್ವಾಸದ ನಿಲುವು........

ಯಾವ ಸಂಕೋಚವೂ ಇಲ್ಲದೆ ಅವರು, ನಮ್ಮ ಮನೆಯ ಬಾಗಿಲನ್ನು ದಾಟಿ ನನ್ನ ಕೊಠಡಿಯತ್ತ ನೇರವಾಗಿ ಬಂದು, "ಎದ್ದಿದೀರಾ?" ಎಂದರು.

ಒಳಬರಬಹುದೆ - ಬಾರದೆ ಎಂಬ ಅಳುಕು ಇರಲಿಲ್ಲ. 'ಬರೆಯುವವರೆಲ್ಲಾ ಅತಿಮಾನವರು, ಓದುವವರು ಬಡ ಕ್ರಿಮಿಗಳು' ಎಂಬ ಅರ್ಥಹೀನ ದೈನ್ಯತೆಯಿರಲಿಲ್ಲ ಆ ದೃಷ್ಟಿಯಲ್ಲಿ. ಎರಡೂ ಕೈ ಜೋಡಿಸಿ ವಿನೀತರಾಗಿ ವಂದಿಸುತ್ತ ನಿಮಿಷಗಟ್ಟಲೆ ನಿಂತುಕೊಳ್ಳುವ ಪ್ರವೃತ್ತಿ ಇರಲಿಲ್ಲ........

ಕಾಲ ಕಳೆದಹಾಗೆ ಎಷ್ಟೊಂದು ಮಾರ್ಪಾಡು ಹೊಂದಿದ್ದರು ಓದುಗರು!

ನನ್ನನ್ನು ತನ್ನ ಹಾಗೆಯೇ ಇನ್ನೊಬ್ಬ ಜೀವಿ, ಈ ಸಮಾಜದ ಇನ್ನೊಬ್ಬ ಸದಸ್ಯ, ಎಂದಷ್ಟೇ ಭಾವಿಸಿದ ಆತನನ್ನು ಮುಗುಳುನಗೆಯ ಸ್ವಾಗತ ನೀಡಿ ಬರಮಾಡಿಕೊಂಡೆ. ಎದೆಗೆ ಆನಿಸಿ ಎಡಗೈಯಲ್ಲಿ ಹಿಡಿದಿದ್ದ ಮುದ್ರಿತ ಹಾಳೆಗಳ ಕಟ್ಟನ್ನು ಅವರು ನನ್ನ ಮೇಜಿನಮೇಲಿಟ್ಟರು.

ಅದು 'ಅಭಯ.'

ಹಿಂದಿನ ಸಂಜೆ ನನ್ನಲ್ಲಿಗೆ ಬಂದು ಮುದ್ರಿತ ಪುಟಗಳನ್ನೆಲ್ಲ ಓದಲೆಂದು ಅವರು ಕೇಳಿ ಒಯ್ದಿದ್ದರು.

"ಓದಿದಿರಾ?"

"ನನ್ನ ಕಣ್ಣುಗಳನ್ನು ನೋಡಿ!"

ಕಣ್ಣುಗಳು ಕೆಂಪಗಾಗಿದ್ದುವು - ನಿದ್ದೆಗೆಟ್ಟು.

ಪುಸ್ತಕ ಹೇಗಿದೆ? — ಎಂಬುದು ನಾನು ಕೇಳಬೇಕಾಗಿದ್ದ ಮುಂದಿನ

ಪ್ರಶ್ನೆ. ಆದರೆ ಗ್ರಂಥಕರ್ತ ಹಾಗೆಂದು ಕೇಳುವ ಅವಶ್ಯತೆಯೂ ತೋರ ಲಿಲ್ಲ. ತಾವಾಗಿಯೇ ಅಭಿಪ್ರಾಯ ಹೇಳಲು ಓದುಗರು ಉತ್ಸುಕ ರಾಗಿದ್ದರು.

ನಾನು ಮಾತಾಡಲು ಅವಕಾಶ ಕೊಡದೆ, ಒಂದು ಕುರ್ಚಿಯನ್ನು ನನ್ನೆಡೆಗೆ ಎಳೆದು ಕುಳಿತು, ಅವರು ಅಂದರು :

" ಮನೆಕೆಲಸ ಮುಗಿದಾಗ ಹೊತ್ತು ಬಹಳವಾಯ್ತು ನಿನ್ನೆ. ಆದರೂ ನಡುರಾತ್ರಿಯಹೊತ್ತಿಗೆ ಹಾಳೆಗಳನ್ನು ತೆರೆದೆ. ಇದ್ದುದನ್ನು ಇದ್ದಹಾಗೆಯೇ ಹೇಳಲೆ ? "

ಉಗುಳು ನುಂಗುವಹಾಗಾಯಿತು ನನಗೆ. ಆದರೂ ತೋರಿಸಿಕೊಳ್ಳದೆ ಹೇಳಿದೆ :

"ಟೀಕಿಸಿ. ನಿರ್ದಾಕ್ಷಿಣ್ಯವಾಗಿ ಹೇಳಿ. ಓದುಗರ ಮನಸ್ಸಿನಲ್ಲಿ ಇರು ವುದನ್ನು ಇರುವ ಹಾಗೆಯೇ ತಿಳಿಯುವುದರಿಂದ ಬರೆಯುವವರ ಆರೋಗ್ಯಕ್ಕೆ ಹಿತವಾಗ್ತದೆ ! "

" ಈ ಕಾದಂಬರೀದು ಆಮೆಯ ನಡಿಗೆ ಅನಿಸ್ತು. "

" ಹೂಂ. "

" ಆದರೆ ಹಾಗಾದ್ದು ಸ್ವಲ್ಪಹೊತ್ತುಮಾತ್ರ. ನನ್ನ ಆಸಕ್ತಿ ಕೆರಳಿ ಸೋದರಲ್ಲಿ ಯಶಸ್ವಿಯಾದಳು ನಿಮ್ಮ ಕಥಾನಾಯಿಕೆ ತುಂಗಮ್ಮ. ಆಮೇಲೆ ಪುಸ್ತಕ ಕೆಳಗಿಡದೆ ಒಂದೇ ಉಸುರಿಗೆ ಓದಿದೆ. ಕೊನೆಯ ಅಧ್ಯಾಯವನ್ನು ಮುಗಿಸಿದಾಗ ಬೆಳಿಗ್ಗೆ ಘಂಟೆ ಐದಾಗಿತ್ತು. "

" ಸಾಹಿತ್ಯದಲ್ಲಿ ನಿಮಗಿರೋ ಶ್ರದ್ಧೆ ಪ್ರಶಂಸನೀಯ. "

" ಹಾಗಲ್ಲ. ಪುಟ ಹಾರಿಸಿಕೊಂಡು ಓದುವುದಾಗಲಿಲ್ಲ ನನ್ನಿಂದ...... ಅಲ್ಲದೆ, ನೀವು ಆರಿಸಿಕೊಂಡಿರುವ ವಸ್ತು—ಚಿತ್ರಿಸಿರುವ ಜೀವನ—ನನ್ನ ಪಾಲಿಗೆ ಹೊಸತು. ಆಸಕ್ತಿಯಿಂದ ಓದಿದೆ. "

ಅಷ್ಟು ಹೇಳಿ ಅವರು ಒಮ್ಮೆಲೆ ಸುಮ್ಮನಾದರು. ಇದು ನನ್ನ ಸರದಿ ಯೇನೋ ಎಂದು ಯೋಚಿಸುತ್ತಿದ್ದಾಗಲೇ ಅವರೇ ಮಾತು ಮುಂದುವರಿ ಸಿದರು :

" ಪುಸ್ತಕ ಓದಿ ಮುಗಿದಮೇಲೆ ನನ್ನ ಕುತೂಹಲ ಸ್ವಲ್ಪ ಹೆಚ್ಚಿದೆ.

ಅದಕ್ಕೆ ಕಾರಣ ಭಾರವಾದ ಹೃದಯ, ಭಾರವಾದ ಮೆದುಳು; ಓದುತ್ತ ಓದುತ್ತ ಸಂತೋಷಪಟ್ಟಿದ್ದೇನೆ; ದುಃಖಪಟ್ಟಿದ್ದೇನೆ. ನಾನೀಗ ಇರುವುದು ಓದಿದ ಗುಂಗಿನಲ್ಲೇ ಎಂದರೆ ನೀವು ನಗಬಾರದು. ತುಂಗಮ್ಮ, ಜಲಜ, ಲಲಿತ, 'ದೊಡ್ಡಮ್ಮ', ತುಂಗಮ್ಮನ ತಂದೆ, ಆ ನಾರಾಯಣ ಮೂರ್ತಿ, ಸೋಮಶೇಖರ--ನಿಮ್ಮ ಗುಬ್ಬಚ್ಚಿಗಳೂ ಕೂಡ-ಎಲ್ಲಾ ನನ್ನ ಮುಂದೆ ಜೀವಂತವಾಗಿ ಚಲಿಸುತ್ತಿರುವಂತೆ ಭಾಸವಾಗ್ತದೆ. ಆ ಹುಡುಗಿಯರ ದುಸ್ಥಿತಿಗೆ ನಾನೂ ಯಾವರೀತಿಯಲ್ಲೂ ಕಾರಣನಲ್ಲವಷ್ಟೆ ?—ಎಂದು ನನ್ನನ್ನು ನಾನೇ ಕೇಳಿಕೊಂಡೆ. ಅವರನ್ನು ಸುಖಿಗಳಾಗಿ ಮಾಡಲು ನಾನು ಏನನ್ನಾದರೂ ಮಾಡಲಾರೆನೆ ?—ಎಂದು ನನ್ನಷ್ಟಕ್ಕೇ ಚಿಂತಿಸಿದೆ. ನಮ್ಮ ಜೀವನದ ಒಂದಂಶವನ್ನು - ಸಾಮಾನ್ಯವಾಗಿ ಕಣ್ಣಿಗೆ ಬೀಳದ್ದನ್ನು ಈ ಪುಸ್ತಕದ ಮೂಲಕ ಕಾಣುವ ಹಾಗಾಯಿತು.''

"ಇದೆಲ್ಲ ಮೆಚ್ಚುಗೆ. ಟೀಕೆ ಇಲ್ಲವೆ ?"

"ಅದೇನೋ ! ಇಷ್ಟು ನನ್ನ ಮೊದಲ ಪ್ರತಿಕ್ರಿಯೆ. ನಿಧಾನವಾಗಿ ಯೋಚಿಸಿದರೆ ಕೆಲವು ಕೊರತೆಗಳು ತೋರಿದರೂ ತೋರಬಹುದು. ಇದು ಪರಿಪೂರ್ಣ ಕೃತಿ ಎಂದು ನೀವೇನೂ ಸಾಧಿಸುವುದಿಲ್ಲವಷ್ಟೆ ? !"

"ಇಲ್ಲ ! ಅಂಥ ಮೂರ್ಖತನದ ಆರೋಪ ನನ್ನ ಮೇಲೆ ಹೊರಿಸ್ಬೇಡಿ."

"ನನಗೆ ಕೆಲವು ವಿವರಣೆ ಬೇಕು, ಕೇಳಲೆ ?"

"ಅವಶ್ಯವಾಗಿ.''

"ಈ ಕಾದಂಬರಿಯ ವಸ್ತು ನಿಮಗೆ ಹೇಗೆ ತೋಚಿತು ?''

"ಅವೆಲ್ಲಾ ರಹಸ್ಯಗಳು !''

ಕಣ್ಣು ಕಿರಿದುಗೊಳಿಸಿ ನನ್ನನ್ನೆ ಅವರು ನೋಡಿದರು.

"ಓದುಗರಿಂದ ಏನನ್ನೂ ಬಚ್ಚಿಡಬೇಡಿ !''

ನನಗೆ ನಗುಬಂತು.

"ಖಂಡಿತ ಇಲ್ಲ. ರಹಸ್ಯ ಅಂತ ತಮಾಷೆಗಂದೆ....ಬಸವನಗುಡಿಯ ರತ್ನವಿಲಾಸ ರಸ್ತೆಯಲ್ಲೊಂದು ಅಭಯಾಶ್ರಮವಿತ್ತು ಹಿಂದೆ. ೧೯೫೦ ರಲ್ಲಿ ನನ್ನ ಸ್ನೇಹಿತರ ಸಂಬಂಧಿಕರೊಬ್ಬರು ಅಲ್ಲಿ ಅಧ್ಯಾಪಿಕೆಯಾಗಿದ್ದರು. ಒಂದು ಸಂಜೆ ಅವರನ್ನು ನೋಡಲೆಂದು ಸ್ನೇಹಿತರು ಅಲ್ಲಿಗೆ ಹೋದಾಗ ನಾನೂ

ಜತೆಯಲ್ಲಿದ್ದೆ. ಮೇಟ್ರನ್ ಒಳಗಿನಿಂದ ಬಾಗಿಲಿಗೆ ಹಾಕಿದ್ದ ಬೀಗ ತೆಗೆದು ನಮ್ಮನ್ನು ಬರಮಾಡಿಕೊಂಡರು. ಒಳ ಜಗಲಿಯಲ್ಲಿ ನಿಂತಾಗ ಅಲ್ಲಿದ್ದ ದೊಡ್ಡ ಕಿಟಕಿ ನೋಡಿದೆ. ಹತ್ತಿಪ್ಪತ್ತು ಮುಖಗಳು - ಅದರ ಎರಡರಷ್ಟು ಕಣ್ಣುಗಳು. ಅಷ್ಟೊಂದು ಹುಡುಗಿಯರು ನಮ್ಮನ್ನು ಕಿಟಕಿಯ ಮೂಲಕ ನೋಡುತಿದ್ದರು. ಆ ಒಂದೊಂದು ಮುಖವೂ ಒಂದೊಂದು ಕತೆ ಹೇಳುತಿತ್ತು....ಹಾದಿ ತಪ್ಪಿದ ಹೆಣ್ಣು ಜೀವಗಳು.... ಆ ಆಶ್ರಮದಲ್ಲಿ ಅವರಿಗೆ ದೊರೆತಿದ್ದ ಅಭಯ....ಅಲ್ಲಿಂದ ಹಿಂತಿರುಗುತ್ತ ಸ್ನೇಹಿತರಿಗೆ ಹೇಳಿದೆ: 'ಈ ಹುಡುಗಿಯರ ವಿಷಯವಾಗಿ ನಾನು ಒಂದು ಕಾದಂಬರಿ ಬರೀಬೇಕು.''

"ಹಾಗೇನು ?"

"ಆದರೆ ಎಷ್ಟೋ ಹಿಂದಿನಿಂದಲೇ ಯೋಚಿಸಿರುವ ಇನ್ನೆಷ್ಟೋ ವಸ್ತುಗಳ ಹಾಗೆ ಅದುಕೂಡ ನೆನಪಿನ ಕೊರಡಿಯಲ್ಲಿ ಮುದುರಿಕೊಂಡು ಬಿತ್ತು. 'ಬನಶಂಕರಿ' ಕಾದಂಬರಿಯನ್ನು ಬರೆಯುತಿದ್ದಾಗ, ತಿಪಟೂರಿನ ನನ್ನ ಸಾಹಿತ್ಯ ಮಿತ್ರರೂ ಪ್ರಕಾಶಕರೂ ಆದ ತಾ. ರಾ. ನಾಗರಾಜರು ಬಂದರು. 'ಸುಲಭ ಬೆಲೆಯ ಕೈ ಹೊತ್ತಿಗೆಗಳನ್ನು ನಾನೂ ಹೊರಡಿಸಬೇಕೂಂತಿದ್ದೇನೆ. ನಿಮ್ಮದೊಂದು ಪುಸ್ತಕ ಕೊಡಿ' ಅಂದರು. 'ಬರೆಯಬೇಕಷ್ಟೆ' ಎಂದೆ. 'ಬರೆದರಾಯಿತು. title ಹೇಳಿ' ಅಂದರು. 'ಅಭಯ' ಎಂದೆ - ನೆನಪಿನ ಬುತ್ತಿಯಿಂದ ಹೊರಗೆ ಇಣಿಕಿ ನೋಡುತಿದ್ದ ಅಭಯಾಶ್ರಮದ ವಸ್ತುವನ್ನು ಸ್ಮರಿಸುತ್ತ. ಪ್ರಾಯಶಃ ನಾಗರಾಜರು ಆಗ ಬರದೇಹೋಗಿದ್ದರೆ ಈ ಕಾದಂಬರಿ ಇಷ್ಟು ಬೇಗನೆ ಪ್ರಕಟವಾಗುತಿತ್ತೋ ಇಲ್ಲವೋ !"

"ಹಾಗಾದರೆ ೧೯೫೦ರಲ್ಲಿ ನೋಡಿದ ಅಭಯಾಶ್ರಮವನ್ನು ಅವಲಂಬಿಸಿ ಇದನ್ನು ಬರೆದಿದ್ದೀರಾ ?"

"ಇಲ್ಲ. ಛಾಯಾಗ್ರಹಣದಲ್ಲಿ ನನಗೆ ನಂಬಿಕೆಯಿಲ್ಲ. ಬೇರೆ ಎರಡು ಊರಿನ ಅಭಯಾಶ್ರಮ - ಅಬಲಾಶ್ರಮಗಳನ್ನೂ ನೋಡಿದ್ದೇನೆ. 'ಆಶ್ರಮ ನಿವಾಸಿ'ಗಳ ಜೀವನವನ್ನು ಅಭ್ಯಾಸ ಮಾಡಿದ್ದೇನೆ. ಆ ನಿರೀಕ್ಷಣೆಯ ಫಲವೇ 'ಅಭಯ'ದ ಪಾತ್ರಗಳ ಸೃಷ್ಟಿ."

"ಇಲ್ಲಿರುವುದೆಲ್ಲ ತೀರ ವಾಸ್ತವವೂ ಅಲ್ಲ, ತೀರ ಕಾಲ್ಪನಿಕವೂ ಅಲ್ಲ, ಎಂದ ಹಾಗಾಯಿತು."

"ಈ ರೀತಿ ಹೇಳಿದರೆ ಮೇಲು-ಇಲ್ಲಿರುವುದೆಲ್ಲ ವಾಸ್ತವತೆಯ ಆಧಾರದ ಮೇಲೆ ಸೃಷ್ಟಿಯಾಗಿರುವ ಕಾಲ್ಪನಿಕ ಪಾತ್ರಗಳು."

ಅವರು ಒಪ್ಪಿದರು. ಆದರೆ ಬೇರೆ ಪ್ರಶ್ನೆ ಬಂತು.

"ನಮ್ಮ ಸಮಾಜದ ಒಂದು ಮುಖ್ಯ ಸಮಸ್ಯೆಯನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದೀರಿ: ಆದರೆ ಸಮಸ್ಯೆಗೆ ಪರಿಹಾರ ಸೂಚಿಸಿಲ್ಲವೆಂದು ಕೆಲವರು ಓದುಗರು ಟೀಕಿಸಬಹುದಲ್ಲವೆ?"

"ನಿಜ, ಆದರೆ ಪರಿಹಾರವನ್ನು ಗ್ರಂಥಕರ್ತ ಸೂಚಿಸಬೇಕಾದ್ದಿಲ್ಲ. ಪ್ರತಿಯೊಂದು ಸಮಸ್ಯೆಯ ಚಿತ್ರಣದಲ್ಲೂ ಪರಿಹಾರ ತೋರಿಸಲೇಬೇಕೆನ್ನುವುದು ಆದರ್ಶವಾದದ ಇನ್ನೊಂದು ಪ್ರವೃತ್ತಿ. ಆದರೆ ಸಾಹಿತ್ಯ ಯಾವಾಗಲೂ ಆದರ್ಶ ವ್ಯಕ್ತಿಗಳ ಚಿತ್ರಣವೇ ಆಗಬೇಕೆನ್ನುವುದು ನನಗೆ ಒಪ್ಪಿಗೆಯಿಲ್ಲ. 'ವಿಮೋಚನೆ'ಯ ಕಥಾನಾಯಕ ಚಂದ್ರಶೇಖರ ಆತ್ಮಹತ್ಯೆ ಮಾಡಿಕೊಂಡ. ಅಂಥ ಪರಿಸ್ಥಿತಿಯಲ್ಲಿ ಎಲ್ಲರೂ ಹಾಗೆ ಮಾಡಬೇಕೆಂಬುದು ನನ್ನ ಅಭಿಪ್ರಾಯವಲ್ಲ. ಅದು ಅವನು ಕಂಡುಕೊಂಡ ಪರಿಹಾರ. ಬೇರೆಯವರು ಅನುಸರಿಸಬಾರದ ಪರಿಹಾರ. 'ಬನಶಂಕರಿ'ಯ ವಿಷಯವೂ ಅಷ್ಟೆ. ಆಕೆ ಒಬ್ಬನೊಡನೆ ವಿವಾಹಬಾಹಿರ ಸಂಬಂಧ ಬೆಳೆಸಿ ತಾಯಿಯಾದಳು. ಅದೊಂದು ಜೀವನ. ಆದರೆ ವಿಧವೆಯರಿಗೆಲ್ಲ ಅದು ಪರಿಹಾರವಲ್ಲ!. ಓದುವ ಹಲವರು, 'ಒಳ್ಳೆಯವಳು ಪಾಪ! ಆಕೆ ಎರಡನೆ ಸಾರೆ ಮದುವೆಯಾಗಬೇಕಿತ್ತು' ಎನ್ನುತ್ತಾರೆ. ಹಾಗೆ ಕಾದಂಬರಿಯಲ್ಲಿ ಇಲ್ಲದೆ ಹೋದರೂ ಪರಿಹಾರ ತೋಚುತ್ತದಲ್ಲವೆ?"

"ಆದರೆ ಇಲ್ಲಿ ತುಂಗಮ್ಮನಿಗಾದಂತೆಯೇ ಎಲ್ಲರಿಗೂ ಆಗುತ್ತದೆನ್ನುವಿರಾ?"

"ಖಂಡಿತ ಇಲ್ಲ. ತುಂಗಮ್ಮನಿಗೆ ಹಾಗಾಯಿತೆಂದು ಎಲ್ಲರಿಗೂ ಹಾಗಾಗುವುದಿಲ್ಲ. ಸೋಮಶೇಖರನ ಮಾತುಗಳನ್ನು ನೀವು ಗಮನಿಸಬೇಕು. 'ದೊಡ್ಡಮ್ಮ'ನಿಗೂ ವಾಸ್ತವತೆ ಕ್ರೂರವೆಂಬುದು ಗೊತ್ತಿದೆ. ಆದರೂ ಆದರ್ಶವನ್ನೆ ಅವರು ಬಯಸುತ್ತಾರೆ."

"ಓದುಗರಿಂದ ಈ ಕಾದಂಬರಿಯನ್ನು ಕುರಿತು ನೀವೇನನ್ನು ನಿರೀಕ್ಷಿಸುತ್ತೀರಿ?"

"ಸಮಾಜದ ದೇಹವನ್ನು ಹುರಿದು ತಿನ್ನುತ್ತಿರುವ ಕ್ಯಾನ್ಸರ್ ರೋಗಕ್ಕೆ ನನ್ನ ಕಾದಂಬರಿಯೇ ರಾಮಬಾಣವೆಂದು ನಾನು ಭಾವಿಸಿಲ್ಲ. ದುಡಿಯುವ ದುಡಿಸುವ ಆರ್ಥಿಕ ಸಂಬಂಧಗಳು ಬದಲಾಗಿ, ಹೆಣ್ಣು-ಗಂಡುಗಳ ಸಂಬಂಧ ದಲ್ಲಿ ಬದಲಾವಣೆಯಾಗಿ, ಬದುಕಿನ ಹೊಸ ಮೌಲ್ಯಗಳು ಸ್ಥಾಪಿತವಾಗುವ ತನಕ-ಈಗಿನ ಸಮಾಜ ವ್ಯವಸ್ಥೆಯ ಪುನರ್ಘಟನೆಯಾಗುವತನಕ-'ಅಸಂಖ್ಯ ಅಭಾಗಿನಿ' ಯರ ಪ್ರಶ್ನೆ ಬಗೆಹರಿಯಲಾರದೆಂಬುದು ನನ್ನ ಅಭಿಪ್ರಾಯ. ಸಮಾಜದ ಪುನರ್ಘಟನೆಯಾದೊಡನೆಯೇ ಕಾಮ - ವ್ಯಭಿಚಾರಗಳ ಪ್ರಶ್ನೆಯೂ ಮಾಯವಾಗುವುದೆಂದು ನಾನು ಹೇಳುವುದಿಲ್ಲ. ಹಾಗಾಗಲು ಹೊಸ ಮಾನವನ ಉದಯವಾಗಬೇಕು. ಅದು ದೂರದ ಕನಸು....ನನ್ನ ಅಪೇಕ್ಷೆ ಇಷ್ಟೆ : 'ಅಭಯ' ಸದ್ಯಕ್ಕಂತೂ ವಿಚಾರಿಗಳಾದ ಓದುಗರನ್ನು ವಿಚಾರಪರರಾಗಿ ಮಾಡಿದರೆ, ಸಹೃದಯ ಸ್ತ್ರೀ ಪುರುಷರಲ್ಲಿರುವ ಮಾನವೀಯ ಭಾವನೆಗಳನ್ನು ಮತ್ತಷ್ಟು ಸ್ಫುಟಗೊಳಿಸಿದರೆ, ನನಗೆ ಅಷ್ಟರಿಂದಲೇತೃಪ್ತಿ."

"ಎಲ್ಲ ಓದುಗರಲ್ಲೂ ಹಾಗಾಗಲೆಂದು ಹಾರೈಸೋಣ."

"..............."

"ಆದರೆ ಇನ್ನೂ ಒಂದು ವಿಷಯ.. ನೀವು ಇಲ್ಲಿ ಯಾವುದಾದರೂ ಧರ್ಮವನ್ನು ಪ್ರತಿಪಾದಿಸಿದ್ದೀರಾ ?"

"ಪ್ರಚಾರ - ಎನ್ನುವ ರೀತಿಯಲ್ಲಿ ನಾನೇನನ್ನೂ ಮಾಡಿಲ್ಲ. ಆದರೆ ನಾನು ಮಾನವವಾದಿ. ನನ್ನದು ಮಾನವೀಯ ದೃಷ್ಟಿ. ಬದುಕನ್ನು ನೋಡುವ ಅಂತಹ ದೃಷ್ಟಿಯಿಂದಾಗಿ, ಕಾದಂಬರಿ ತನ್ನ ಸಮಗ್ರ ಸ್ವರೂಪದಲ್ಲಿ ಮಾನ ವೀಯ ಧರ್ಮದ ಪ್ರತಿಪಾದನೆಯಾಗಿ ತೋರಲೂಬಹುದು."

ಹೇಳಬೇಕಾದ್ದನ್ನೆಲ್ಲ ಹೇಳಿದ್ದೆ. ಅವರ ಸಂದೇಹಗಳೂ ನಿವಾರಣೆ ಯಾದುವೆಂದು, ಅವರ ಮೌನವೂ ಶಾಂತ ಮುಖಮುದ್ರೆಯೂ ಸೂಚಿ ಸಿದುವು.

ಆದರೂ ಇನ್ನೊಂದು ಪ್ರಶ್ನೆ ಕೇಳುವುದಕ್ಕೆ ಪೂರ್ವಭಾವಿಯಾಗಿ ಅವರು ಮುಗುಳು ನಕ್ಕರು.

"ನಿಧಾನವಾಗಿ ಯೋಚಿಸಿ 'ಅಭಯ'ದ ಬಗೆಗೆ ನನ್ನ ಅಭಿಪ್ರಾಯ ವೇನೆಂಬುದನ್ನು ಬರೆದು ಕೊಡಬೇಕೆಂದಿದ್ದೇನೆ."

"ಸಂತೋಷ. ಅವಶ್ಯವಾಗಿ ಹಾಗೆಮಾಡಿ."

"ಒಂದು ಪ್ರಶ್ನೆ ಕೇಳಲೆ?"

"ಏನು?"

"ನಿಮ್ಮ 'ವಿಮೋಚನೆ' ಕಾದಂಬರಿಯ ವಿಷಯವಾಗಿ ಎಷ್ಟು ಜನ ಓದುಗರು ಅಭಿಪ್ರಾಯ ತಿಳಿಸಿದ್ದಾರೆ?"

"ಎಪ್ಪತ್ತೆರಡು ಜನ."

"'ಬನಶಂಕರಿ'ಯ ಬಗ್ಗೆ?"

"'ಬನಶಂಕರಿ'ಯ ವಿಷಯವಾಗಿ ಇನ್ನೂ ಕಾಗದಗಳು ಬರುತ್ತಲೇ ಇವೆ. ಆ ಕಾದಂಬರಿ ಪ್ರಕಟವಾದ ಅಲ್ಪಾವಧಿಯಲ್ಲೇ, ಈಗಾಗಲೇ, ೬೮ ಬಂದಿವೆ."

"ಇದು ದೊಡ್ಡ ಸಂಖ್ಯೆಯೆನ್ನುತ್ತೀರಾ?"

"ಖಂಡಿತವಾಗಿಯೂ ಇಲ್ಲ. ಹೀಗೆ ಬರೆದು ನಮ್ಮ ಓದುಗರಿಗೆ ರೂಢಿಯಿಲ್ಲ! ಎಷ್ಟೋ ಸಹಸ್ರ ಓದುಗರು ಗ್ರಂಥಕರ್ತರಿಗೆ ಬರೆಯುವುದೇ ಇಲ್ಲ. ಇದಕ್ಕೆ ಕಾರಣ, ನಮ್ಮ ಪ್ರಮುಖ ಸಾಹಿತಿಗಳು ಓದುಗರ ವಿಚಾರಶಕ್ತಿಗೆ ಕಲ್ಪಿಸಿರುವ ಸ್ಥಾನ ಮಾನ. ಈದಿನ, ಸಾಹಿತ್ಯ ಸೃಷ್ಟಿಯಲ್ಲಿ ತಮ್ಮದೂ ಪಾತ್ರವಿದೆ ಎಂಬುದನ್ನು ಓದುಗರು ಮನಗಾಣಬೇಕು....ನನಗೆ ಬಂದಿರುವ ಕಾಗದಗಳಲ್ಲಿ ದೃಷ್ಟಿ ವಿವೇಚನಾ ವೈಖರಿ ವಿಭಿನ್ನವಾಗಿವೆ, ಪ್ರಾತಿನಿಧಿಕವಾಗಿವೆ.... 'ಅಭಯ'ದ ವಿಷಯವಾಗಿ ಇನ್ನಷ್ಟು ಹೆಚ್ಚು ಪ್ರತಿಕ್ರಿಯೆಗಳು ಬರಬಹುದೂಂತ ನನ್ನ ನಿರೀಕ್ಷೆ."

ನಾನು ಅಷ್ಟು ಹೇಳಿ ಮುಗಿಸಿದಂತೆ ಅವರೆದ್ದರು.

"ಕ್ಷಮಿಸಿ. ಒಂದು ವಿಷಯ ಮರೆತೇ ಹೋಯಿತು. ತಪ್ಪು ಮಾಡಿದ್ದೇನೆ ತಿಳಿಯದೆ. ಎಂಥ ಪ್ರಮಾದ!"

—ಎಂದರು.

"ಏನಾಯ್ತು?"

"ಈ ದಿನ ಯುಗಾದಿ. 'ಅಭಯ'ದ ಗಲಾಟೆಯಲ್ಲಿ ಶುಭಾಶಯ ತಿಳಿಸೋದು ಮರೆತೇ ಬಿಟ್ಟೆ."

"ನಿಮ್ಮ ಪ್ರತಿಕ್ರಿಯೆ ತಿಳಿಯುವ ಆತುರದಲ್ಲಿ ನಾನೂ ಮರೆತೆ.

ಸರಿಹೋಯ್ತು !....ಈಗ ಹೇಳಿದರಾಯ್ತು. ಎಷ್ಟೆಂದರೂ ಔಪಚಾರಿಕ ಮಾತು ತಾನೆ ?''

"ಆದರೇನಂತೆ ?........ದಯವಿಟ್ಟು ಯುಗಾದಿಯ ಶುಭಾಶಯ ಸ್ವೀಕರಿಸಿ !"

" ಜಯ ಸಂವತ್ಸರ ಶುಭವನ್ನುಂಟುಮಾಡಲಿ ನಿಮಗೂ !"

ವಿಲ್ಸನ್ ಗಾರ್ಡನ್
ಬೆಂಗಳೂರು ೨

ನಿರಂಜನ

ನಾಳೆಯ ಕಲ್ಪನೆಯೇ ಇಲ್ಲದೆ
ಈ ದಿನ ತೊಳಲುತ್ತಿರುವ
ಅಸಂಖ್ಯ ಅಭಾಗಿನಿಯರಿಗೆ

೧

ತುಂಗಮ್ಮ ತಿರುಗಿನೋಡಲಿಲ್ಲ.

ನಾಲ್ಕು ದಿನಗಳ ದೀರ್ಘಕಾಲ ಮನಸಿನೊಳಗೇ ತುಮುಲ ನಡೆದು ಕೊನೆಯ ನಿರ್ಧಾರಕ್ಕೆ ಆಕೆ ಬಂದಿದ್ದಳು. ಔಷಧಿ ತರಲೆಂದು ಮಾವಳ್ಳಿಯ ಆವರಣದಿಂದ ಹೊರಬಿದ್ದ ತುಂಗಮ್ಮ ಬೇರೆಯೇ ಹಾದಿ ಹಿಡಿದಳು. “ಇನ್ನೂ ಬೆಳಕಿದೆ. ಯಾರಾದರೂ ನೋಡುತ್ತಿದ್ದಾರೋ ಏನೋ. ಒಮ್ಮೆ ಕತ್ತಲಾದರೆ—ಒಮ್ಮೆ ಕತ್ತಲಾದರೆ!” ಎಂದು ತೊಳಲುತ್ತ ಆಕೆ, ಕ್ರುಂಬೀಗಲ್ ರಸ್ತೆಯುದ್ದಕ್ಕೂ ನಡೆದಳು. ಒಮ್ಮೆಯೂ ತಿರುಗಿ ನೋಡಲಿಲ್ಲ ತುಂಗಮ್ಮ.

ಮುಂದೆ ದೊರೆತುದು ಐದು ರಸ್ತೆಗಳು ಒಂದುಗೂಡಿದ ಹಿರಿಯ ವೃತ್ತ. ಅಲ್ಲೇ ಇತ್ತು ಲಾಲ್‌ಬಾಗ್ ಉದ್ಯಾನದ ದಕ್ಷಿಣ ಹೆಬ್ಬಾಗಿಲು.

ತುಂಗಮ್ಮನ ದೃಷ್ಟಿ ಉದ್ಯಾನದ ಆವರಣವನ್ನು ಹಾದು ಒಳಕ್ಕೆ ಸರಿಯಿತು.

—ಹಸುರು ಹುಲ್ಲಿನ ಮೇಲೆ ಕುಳಿತು ಕಡಲೇಕಾಯಿ ತಿನ್ನುತ್ತ ಹರಟೆ ಹೊಡೆಯುತ್ತಿದ್ದವರು; ಕಾಲುಹಾದಿಯಲ್ಲೂ ಕೆರೆಯ ಏರಿಯ ಮೇಲೂ ನಡೆದು ಹೋಗುತಿದ್ದ ಯುವಕ ಯುವತಿಯರು, ಹುಡುಗ ಹುಡುಗಿಯರು; ವಿಹಾರಕ್ಕೆ ಬಂದ ವೃದ್ಧ ದಂಪತಿಗಳು....ಕ್ರಾಪು ಕತ್ತರಿಸಿಕೊಂಡಿದ್ದ ಹಸುರು ಗಿಡಗಳು; ಅಲಂಕಾರವಾಗಿ ಶಾಸ್ತ್ರಬದ್ಧವಾಗಿ ಬೆಳೆದಿದ್ದ ಬಣ್ಣದ ಹೂಗಳು.

ಎಲ್ಲವೂ ಹಿಂದಿನಂತೆಯೇ, ಎಂದಿನಂತೆಯೇ....

ಮಾವಳ್ಳಿ ಮನೆಯ ಆ ಐದು ತಿಂಗಳ ಅಜ್ಞಾತವಾಸದ ಅವಧಿಯಲ್ಲಿ ಮೂರು ಬಾರಿ ತುಂಗಮ್ಮ, ತನಗೆ ರಕ್ಷಣೆಯನ್ನಿತ್ತಿದ್ದ ಗೃಹಿಣಿಯೊಡನೆ ಮುಚ್ಚಂಜೆಯಾದ ಬಳಿಕ ಲಾಲ್‌ಬಾಗಿಗೆ ಬಂದಿದ್ದಳು. ಅಲ್ಲಿ ಆಗ ಮಗುವಿನಂತೆ ವಿಹರಿಸಬೇಕೆಂದು ಆಕೆಯ ಮನಸ್ಸು ಬಯಸಿತ್ತು. ಆದರೆ ಅದು

ಕ್ಷಣಾರ್ಧದಲ್ಲಿ ಬದಲಾದ ಬಯಕೆ. ತನ್ನ ಬಸಿರೇ ಬಿಸುಕಾಡಿದಂತೆ ಕಂಡ ಮಗುವಿನ ಆರ್ತನಾದವನ್ನು ಕೇಳಿದವಳಂತೆ ಭ್ರಮೆಗೊಂಡು ತುಂಗಮ್ಮ, ತಾನೇ ಅತ್ತಿದ್ದಳು-ಪ್ರತಿಸಾರೆಯೂ.

ಬಿಳಿಯದು, ಹಾಲು, ಎಂದು ಒಪ್ಪಿಕೊಂಡಿದ್ದಳು ತುಂಗಮ್ಮ. ಆದರೆ ಆ ಹಾಲು ನೋಡು ನೋಡುತಿದ್ದಂತೆಯೇ ಒಡೆದು ಹೋಯಿತು. ಕುಸಿದು ಬಿತ್ತು ಆಕೆ ಕಟ್ಟಿದ್ದ ಕನಸಿನ ಮನೆ.

ಆ ನೆನಪೊಂದೂ ಅವಳ ಪಾಲಿಗೆ ಸಿಹಿಯಾಗಿರಲಿಲ್ಲ....

ಹೆಬ್ಬಾಗಿಲನ್ನೂ ಆ ವೃತ್ತವನ್ನೂ ದಾಟಿ ಬೀದಿಯುದ್ದಕ್ಕೂ ತುಂಗಮ್ಮ ನಡೆದು ಹೋದಳು.

ತುಂಬಿದ ಗರ್ಭಿಣಿ ಒಬ್ಬಂಟಿಗಳಾಗಿ ಹಾಗೆ ಸಾಗುತಿದ್ದರೆ ಆಸಕ್ತಿ ತೋರದವರು ಯಾರು? ಹಲವು ನೋಟಗಳು ತನ್ನನ್ನು ಮುಟ್ಟುತಿದ್ದುದರ ಅನುಭವವಾಗುತಿತ್ತು ತುಂಗಮ್ಮನಿಗೆ ಆಗ ಅವಳು ಅಧೀರಳಾಗುತಿದ್ದಳು. ಮುಖ ಮೈಯೆಲ್ಲ ಸುಡುತಿದ್ದ ಹಾಗೆ ಭಾಸವಾಗುತಿತ್ತು. ಹೆಜ್ಜೆಗಳು ಅಸ್ಥಿರವಾಗುತಿದ್ದುವು.

ಹಾಗೆ ಅಸ್ಥಿರವಾದರೂ ಆಕೆ ಚೇತರಿಸಿಕೊಂಡು ಮುನ್ನಡೆದಳು. ಅದು ಈಸ್ಟ್-ಎಂಡ್ ರಸ್ತೆ. ಎಡಕ್ಕೆ ಹೊರಳಿಕೊಂಡರೆ ಲಾಲ್‌ಬಾಗ್ ಕೆರೆಯ ಏರಿ ಸಿಗುವುದು. ಅಲ್ಲೆ ಬಲಬದಿಯಲ್ಲಿ ಉದಿಸಿಬರುತಿತ್ತು ಹೊಸ ವಿಸ್ತರಣವಾದ ಜಯ ನಗರ.

ಆ ಹಾದಿಯಾಗಿಯೆ ತುಂಗಮ್ಮ ಬಂದಳು.

ಅಲ್ಲೆ ತಡೆದು ನಿಂತಳಾಕೆ ನಾಲ್ಕು ನಿಮಿಷ. ಹೂ ಬಾಡಿದ ಹಾಗೆ ವಾತಾವರಣ ಕಪ್ಪಿಟ್ಟಿತ್ತು. ಕತ್ತಲಾಗಿತ್ತು ಆಗಲೆ. ಶೀತಲಗಾಳಿಯ ಚಳಿಯೊ, ಹೃದಯದ ನೋವಿನ ನಡುಕವೊ, ದೇಹದಾದ್ಯಂತ ಕಂಪನ ವಾಯಿತು ತುಂಗಮ್ಮನಿಗೆ.

ಮುಂದೇನು? ಮುಂದೆ ಹೇಗಿನ್ನು?

ಆಕೆಗೆ ವಿವರವಾಗಿ ಗೊತ್ತಿದ್ದುದು ಅಷ್ಟೇ ಜಾಗ. ಅದನ್ನೂ ಆಕೆ ಕೇಳಿ ತಿಳಿದಿದ್ದುದು ತನಗೆ ಅನ್ನ ನೀಡಿದ್ದ ಗೃಹಿಣಿಯಿಂದ. ಯಾವ ಸಂವೇ ದಕನ್ನು ಆಪ್ಪದ ಬರದ ಹಾಗೆ ಯಾವು ಯಾವುದೋ ಸಂದರ್ಭದಲ್ಲಿ ಕೃಳದ

ಹಾದಿಯ ಪರಿಚಯವನ್ನು ಕೇಳಿ ಮುಂದಟ್ಟು ಮಾಡಿಕೊಂಡಿದ್ದಳು ತುಂಗಮ್ಮ.

ಆರು ತಿಂಗಳ ಹಿಂದೆ ತುಮಕೂರಲ್ಲಿ ಆ ಮಾತು ಬಂದಿತ್ತು. ತಾಯಿ ತಂದೆಯರು ಗುಸಗುಸ ಆಡಿಕೊಂಡುದನ್ನು ಕದ್ದು ಕೇಳಿದ್ದಳು ಆ ಮಗಳು. ಅಲ್ಲಾಗಲೀ ಇಲ್ಲಾಗಲೀ ಬಾಯ್ತೆರೆದು ಯಾರೂ ಆ ಪ್ರಸ್ತಾಪ ಮಾಡಿರ ಲಿಲ್ಲ. ಹಾಗೆ ಪ್ರಸ್ತಾಪಿಸಲು, ಅದು ಗೌರವದ ಪ್ರಶ್ನೆಯಾಗಿತ್ತಲ್ಲವೆ?

ಆದರೆ ತುಂಗಮ್ಮನಿಗೆ ಆ ವಿಷಯ ತಿಳಿದು ಹೋಗಿತ್ತು. ಆ ಕಾರಣ ದಿಂದಲೆ, ಪ್ರಯಾಸ ಪಟ್ಟು ಆಕೆ, ಅಷ್ಟಕ್ಕಿಷ್ಟು ಕೂಡಿಸಿ ಮಾಹಿತಿ ಸಂಗ್ರಹಿಸಿ ದಳು. ಆ ಮಾಹಿತಿಯ ಆಧಾರದ ಮೇಲೆ ಇನ್ನು—

ತುಂಗಮ್ಮ ತಡವರಿಸಿದಳು.

ತಾನು ಮುಂದೆ ಸಾಗಬೇಕೆ ಬೇಡವೆ? ಸರಿಯೆ ತಾನು ಮಾಡು ತ್ತಿರುವುದು?

ಆಕೆ ನಿಂತಲ್ಲಿಯೆ ಸ್ವಲ್ಪ ಬಾಗಿ, ಕೈಯಲ್ಲಿದ್ದ ಖಾಲಿ ಬಾಟಲಿಯನ್ನು ನೆಲದ ಮೇಲಿರಿಸಿದಳು. ತನಗೆ ಅನಗತ್ಯವಾಗಿದ್ದ ಅದನ್ನು ಎಸೆಯಲು ಮನಸಾಗಲಿಲ್ಲ. ಎಸೆದಿದ್ದರೆ ಬಾಟಲಿ ಒಡೆಯುತಿತ್ತು. ಗಾಜು ಒಡೆದು ಚೂರಾಗುವುದನ್ನು ಸಹಿಸಲು ತುಂಗಮ್ಮ ಸಿದ್ಧಳಿರಲಿಲ್ಲ.

ಯಾವುದಕ್ಕೂ ನೋವಾಗ ಬಾರದು, ಏನೂ ಒಡೆಯ ಬಾರದು, ಎಂಬುದು ಬಾಲ್ಯದಿಂದಲೆ ಆಕೆ ಬೆಳಸಿಕೊಂಡು ಬಂದಿದ್ದ ಮನೋಭಾವನೆ.

ಆದರೆ ಸ್ವತಃ ಆಕೆಗೇ ನೋವಾಗಿತ್ತು; ಆ ಹೃದಯ ಒಡೆದಿತ್ತು.....

ಎರಡು ಜೀವಗಳನ್ನು ಹೊತ್ತ ಕಾಲುಗಳು ಮುಂದೆ ನಡೆದುವು. ಜಯನಗರದ ಹತ್ತಿಪ್ಪತ್ತು ಮನೆಗಳನ್ನು ಅಲ್ಲಿ ಬಿಟ್ಟು ಕೊರಕಲು ಹಾದಿ ಯೊಂದು ಏರಿ ಇಳಿಯುತ್ತ ಕಾಣದ ಗುರಿಯೆಡೆಗೆ ಸಾಗಿತ್ತು. ತುಂಗಮ್ಮ ಆ ಹಾದಿ ಹಿಡಿದಳು.

....ದೂರದ ಅಂತರದಲ್ಲಿ ಎತ್ತರದಲ್ಲಿ ವಿದ್ಯುದ್ದೀಪಗಳು ಮಿನುಗಿ ದುವು. ಅದು, ಏರಿಳಿಯುತಿದ್ದ ಬೀದಿಯುದ್ದಕ್ಕೂ ನಕ್ಷತ್ರ ತೋರಣ. ಆದರೆ ತುಂಗಮ್ಮ, ಆ ಅಂದವನ್ನು ನಿರೀಕ್ಷಿಸಿ ಮೆಚ್ಚಿಕೊಳ್ಳುವ ಸ್ಥಿತಿಯಲ್ಲಿರ ಲಿಲ್ಲ. ಸಂಜೆ ಮನೆ ಬಿಟ್ಟಾಗ ಅಂದುಕೊಂಡಿದ್ದಳಾಕೆ: "ಒಮ್ಮೆ ಕತ್ತಲಾ

ದರೆ!"....ಆ ಕತ್ತಲು ಈಗ ಬಂದಿತ್ತು. ಯಾರಾದರೂ ನೋಡಿ ಗುರುತಿಸ ಬಹುದೆಂಬ ಭಯವಿಲ್ಲ ಈಗ. ಆದರೆ, ಯಾರಾದರೂ ತನ್ನ ಮೇಲೆ ಈ ಕತ್ತಲಲ್ಲಿ ಕೈ ಮಾಡಿದರೆ-? ಅದು ಆಕೆಯನ್ನು ಕಾಡಿದ ಹೊಸ ಭೀತಿ.....

ಭೀತಳಾದ ತುಂಗಮ್ಮ ಬೇಗ ಬೇಗನೆ ಹೆಜ್ಜೆ ಇಟ್ಟಳು. ಹೆಜ್ಜೆ ಹೆಜ್ಜೆಗೂ ಆಯಾಸ ಹೆಚ್ಚುತಿತ್ತು.

ಯಾರು ಯಾರೋ ಬರುತಿದ್ದರು ಎದುರುಗಡೆಯಿಂದ. ಕೆಲವರ ತಲೆಯ ಮೇಲೆ ಮಕ್ಕರಿ-ಹಾರೆ. ಅವರು, ದುಡಿದು ಬಡ ಮನೆಗಳಿಗೆ ಹಿಂತಿರುಗುತಿದ್ದ ಜೀತದ ಜೀವಗಳು.

ತುಂಗಮ್ಮನ ಹಿಂಬದಿಯಿಂದಲೂ ಯಾರೋ ಬಂದು ಆಕೆಯನ್ನು ಹಿಂದಿಕ್ಕಿ ಮುಂದೆ ಸಾಗುತಿದ್ದರು.

ಅವರೆಲ್ಲ ಆಕೆಯನ್ನು ನೋಡದೆ ಇರುತಿರಲಿಲ್ಲ. ಮಬ್ಬುಗತ್ತಲಿ ನಲ್ಲೂ ಆ ದೃಷ್ಟಿಗಳನ್ನು ಅರ್ಥಮಾಡಿಕೊಳ್ಳಲು ತುಂಗಮ್ಮ ಸಮರ್ಥಳಾಗಿ ದ್ದಳು. ಯಾವ ಭಾವನೆಯೂ ಇಲ್ಲದ ಬಳಲಿದ ನೋಟ; ಕುತೂಹಲ; ತಿಳಿವಳಿಕೆ; ಜತೆಯಲ್ಲೆ ಇನ್ನೊಂದು-ಕಬಳಿಸ ಬಯಸುವ ಹಸಿದ ದೃಷ್ಟಿ.... ಪಾಪ, ಸಂಕಟ ಅನುಭವಿಸುತ್ತಿರುವ ತಾಯಿಯಾಗಲಿರುವ ಹೆಣ್ಣು ಎಂಬ ಕನಿಕರವೂ ಆ ಹಸಿದ ಪಶುಗಳಿಗೆ ಇಲ್ಲ, ಅಲ್ಲವೆ?

ಹಾದಿ ಮೌನವಾಗಿ ಸಾಗಿತು. ಎರಡು ಬದಿಗಳಲ್ಲೂ ಕಲ್ಲು ಕಡಿದ ಕಂದಕಗಳು ಅಳುವೋರೆಯೊಡನೆ ಮೈ ಚಾಚಿ ಮಲಗಿದ್ದುವು.

ದಾರಿ ಒಂದು ಏರಿಯನ್ನು ಕಳೆದು ಬಲಕ್ಕೆ ತಿರುಗಿಕೊಂಡಾಗ ತುಂಗಮ್ಮ, ಅರುವತ್ತು ಎಪ್ಪತ್ತರಷ್ಟು ಮನೆಗಳು ಅಲ್ಲಲ್ಲಿ ಹರಡಿಕೊಂಡಿದ್ದ ಆ ಪ್ರದೇಶವನ್ನು ಕಂಡಳು. ನೂರಾರು ವಿದ್ಯುದ್ದೀಪಗಳು. ಹಲವು ಸ್ವರಗಳಿದ್ದು ಒಂದರಲ್ಲೊಂದು ಬೆರೆತು ಅರ್ಥವಾಗದೊಂದು ಧ್ವನಿ ಮೇಲ ಕ್ಕೇರಿ ಆಕಾಶದಲ್ಲಿ ಸುಳಿದಾಡುತಿತ್ತು. ನಗರದ ಹೃದಯದಿಂದ ಹೊರಟು ಹೊರಗೆ ಹಳ್ಳಿಗಳತ್ತ ಸಾಗಿದ್ದ ಕರಿಯ ಡಾಮರು ಹಾದಿಯೊಂದು ಆ ಪ್ರದೇಶದೊಂದು ಭಾಗವನ್ನು ಸುತ್ತುವರಿದಿತ್ತು.

ಆ ಹೆದ್ದಾರಿಯ ಸಮೀಪದಲ್ಲೆ ಒಂದು ಮನೆಯ ಅಂಗಳದಲ್ಲಿ ನಾಯಿ ನಾಭಿ ಛೇದಿಸುವಂತೆ ಬೊಗಳುತಿತ್ತು: ಬೌ ಬೌ ವೌವ್....

....ನಡೆದು ಬೇಸತ್ತ ತುಂಗಮ್ಮನಿಗೆ ಬವಳಿ ಬಂದಹಾಗಾಯಿತು. ಸಮೀಪದಲ್ಲಿ ಯಾರೂ ಇರಲಿಲ್ಲ. ಅಲ್ಲೆ ಒಂದು ಬಂಡೆಯ ಮೇಲೆ ಆಕೆ ಕುಳಿತಳು.

ಎರಡು ನಿಮಿಷಗಳಲ್ಲೆ ಉಸಿರು ಸರಾಗವಾಗಿ ಆಡತೊಡಗಿತು. ಎಷ್ಟು ದೂರ ಬಂದಿದ್ದಳಾಕೆ, ಎಷ್ಟೊಂದು ದೂರ! ಯಾವಾಗಲೂ ತನ್ನ ಸೆರಗಿಗೇ ಅಂಟಿಕೊಳ್ಳುತಿದ್ದ ತಮ್ಮ, ಮಮತೆಯ ತಂದೆ, ನಾಲ್ಕು ವರ್ಷಗಳ ಹಿಂದೆಯೇ ಗಂಡನ ಮನೆ ಸೇರಿ ಆಗಲೆ ಎರಡು ಮಕ್ಕಳ ತಾಯಿಯಾಗಿದ್ದ ಅಕ್ಕ,-ಅದೆಷ್ಟೋ ಹಿಂದುಳಿಯಿತು ಮಧುರ ಬಾಂಧವ್ಯದ ಸಂಸಾರ ಸಂಬಂಧದ ಆ ಆವರಣ. ಅನಂತರ ಐದು ತಿಂಗಳ ಕಾಲ ತನಗೆ ಆಶ್ರಯ ನೀಡಿದ ಆ ಕುಟುಂಬ. ಎಂದೋ ಒಂದು ಕಾಲದಲ್ಲಿ ತನ್ನ ತಂದೆಯ ಶಿಷ್ಯ ರಾಗಿದ್ದರಂತೆ ಆ ಮನೆಯ ಯುವಕ ಯಜಮಾನರು. ಆದರೆ ಗುರು-ಶಿಷ್ಯ ಸಂಬಂಧ ಶಾಲೆಯ ಹೊರಗೆ ಆತ್ಮೀಯತೆಯಾಗಿ ಗಾಢ ಸ್ನೇಹವಾಗಿ ಮಾರ್ಪಟ್ಟು ಕಷ್ಟಕಾಲದಲ್ಲಿ ತನ್ನ ತಂದೆಗೆ ನೆರವು ನೀಡಿತ್ತು.

ಆ ದಂಪತಿಗಳಿಬ್ಬರೂ ಧೈರ್ಯವಂತರೇ ಸರಿ.

ತಾನು, ಡವಡವನೆ ಹೊಡೆದುಕೊಳ್ಳುತಿದ್ದ ಹೃದಯ ಒಡೆದು ಹೋಗು ವುದೇನೋ ಎಂಬ ಭಯದಿಂದ, ಅದರ ಮೇಲೆ ಅಂಗೈ ಇಟ್ಟು ಭದ್ರವಾಗಿ ಅಮುಕಿ ಬಾಗಿಲ ಹಿಂಭಾಗದಲ್ಲಿ ನಿಂತು ಆ ಪ್ರಶ್ನೋತ್ತರಗಳಿಗೆ ಕಿವಿ ಗೊಟ್ಟಿದ್ದಳು....

...."ಯಾರೋ ಅತಿಥಿಗಳು ಬಂದ ಹಾಗಿದೆಯಲ್ಲಾ!"

"ನನ್ನ ಚಿಕ್ಕಪ್ಪನ ಮಗ ಉತ್ತರ ಪ್ರದೇಶದಲ್ಲಿದಾರೇಂತ ಆ ದಿನ ಹೇಳಿರ್ಲಿಲ್ವೆ? ಅವರ ಕುಟುಂಬ."

"ಹಾಗೇನು, ಉತ್ತರ ಪ್ರದೇಶದಲ್ಲಿದಾರೇನು ನಿಮ್ಮ ಚಿಕ್ಕಪ್ಪನ ಮಗ?"

"ಮರೆತೇ ಬಿಟ್ರೇನೊ ಪಾಪ! ವೆಂಕಟರಾಮಯ್ಯನವರ ಜ್ಞಾಪಕಶಕ್ತಿ ಕೇಳಬೇಕೆ?!"

"ನೀವೂ ಸರಿಯೆ, ಗೇಲಿಮಾಡೋದಕ್ಕೆ!....ಯಾವಾಗ್ಬರ್ತಾರೆ?"

"ಯಾರು-ಆತನೇ? ಈಗೆಲ್ಲಿ ಬರ್ತಾನೆ? ಕೆಲಸ ಸಿಕ್ಕಿರೋದೇ ಮೊನ್ನೆ

ಮೊನ್ನೆ....ಅವನ ಅತ್ತೇ ಮನೇಲಿ ಯಾರೂ ಇಲ್ಲಾಂತ, ಹೆರಿಗೆಗೆ ಇಲ್ಲಿಗೇ ಕಳಿಸಿದಾನೆ.''

"ಓ, ಹಾಗೋ.''

ಯಾವ ಚಿಕ್ಕಪ್ಪನೊ, ಚಿಕ್ಕಪ್ಪನ ಮಗನೊ! ಯಾವ ಉತ್ತರ ಪ್ರದೇಶವೊ! ತನಗೂ ಒಬ್ಬ ಗಂಡನಿರುವನೆಂದು ಸಾರಿ ಹೇಳುವ ಸುಳ್ಳು. ಎಂತಹ ತಮಾಷೆ!

ಮನೆಯಾಕೆಯೂ ಹಿಂಜರಿಯಲಿಲ್ಲ.

"ನಿಮ್ಬೊಳಗ ಅಂದ್ರಾ?''

"ಹೂಂ ಕಣ್ರೀ....ಹೆರಿಗೆಗೆ ಬೆಂಗಳೂರೇ ಅನುಕೂಲ ಅಂತ ಕರೆಸಿ ಕೊಂಡಿದೀವಿ.''

"ಅಪೇನೋ ನಿಜವೇ ಅನ್ನಿ....ಅಲ್ಲ, ಮೊನ್ನೆ ನಮ್ಸುಂವರೀ ಬಾಣಂತನ ದಲ್ಲಿ ಏನಾಯ್ತೂಂತ....ನಮ್ಮಸ್ನ ಹ್ಯಾಗೆ ಸುಲಿದ್ಬಿಟ್ರು ಗೊತ್ತೆ ಆ ನರ್ಸುಗಳು?....''

"ಅಯ್ಯೊ, ಅದನ್ನ ಕೇಳ್ಲೇ ಬೇಡಿ. ಆಸ್ಪತ್ರೇಲಿ ದೊಡ್ಡೋರಿಂದ ಹಿಡ್ದು ಚಿಕ್ಕೋರವರೆಗೆ ಅದೊಂದು ಖರ್ಚು ಇದ್ದದ್ದೇ....ಅವರಾದ್ರೂ ಏನ್ಮಾಡ್ತಾರೆ ಪಾಪ, ಕೈ ತುಂಬ ಸಂಬಳ ಬರುತ್ತೇನು?''

"ನೀವೂ ಸರಿಯೆ!''

ಹಾಗೆ ಮಾತಿನ ಪ್ರವಾಹ ತುಂಗಮ್ಮನನ್ನು ಅಲ್ಲೆ ಬಿಟ್ಟು ಮುಂದಕ್ಕೆ ಸರಿಯುತಿತ್ತು. ಕೈ ತುಂಬ ಸಂಬಳ ಬಾರದ ತಮ್ಮ ಗುಮಾಸ್ತೆ ಗಂಡಂದಿರೂ ಆಗೊಮ್ಮೆ ಈಗೊಮ್ಮೆ ಗಿಂಬಳ ತರುತಿದ್ದುದನ್ನು ಸ್ಮರಿಸಿಕೊಂಡು ಆ ಹೆಂಗಸರು ಮುಗುಳ್ನಗುತಿದ್ದರೇ ಹೊರತು, ತುಂಗಮ್ಮನನ್ನು ಕುರಿತಾದ ಚರ್ಚೆ ಅಲ್ಲಿ ನಡೆಯುತ್ತಿರಲಿಲ್ಲ.

ಹಾಗೆ ಆಕೆ ಕಳೆದ ಐದು ತಿಂಗಳು.

ತುಂಗಮ್ಮನಿಗೆ ತಿಳಿದಿತ್ತು. ಆ ದಂಪತಿಗಳ ದೃಷ್ಟಿಯಲ್ಲಿ ತಾನು ಅಪರಾಧಿಯೇ. ತನ್ನ ಬಗೆಗೆ ಅವರು ತೋರುತಿದ್ದುದು ಕನಿಕರ, ವಾತ್ಸಲ್ಯ ವಲ್ಲ. ತಾನು ಹರ್ಷಚಿತ್ತಳಾಗುವಂತೆ ಮಾಡಲು ಅವರು ಯತ್ನಿಸು ತಿದ್ದರು ನಿಜ. ಆದರೆ ಹಾಗೆ ಯತ್ನಿಸುತಿದ್ದುದು, ಆ ಹುಡುಗಿ

ಸುಖಿಯಾಗಿರಬೇಕೆಂದಲ್ಲ, — ಅಕ್ಕಪಕ್ಕದವರಿಗೆ ಸಂದೇಹ ಬರಬಾರದೆಂದು.

ಆ ನಾಟಕದ ಜೀವನ ಅಸಹ್ಯವಾಗಿತ್ತು ತುಂಗಮ್ಮನ ಪಾಲಿಗೆ. ಅದರ ಫಲವಾಗಿ ಮನೋವ್ಯಾಕುಲ ಹೆಚ್ಚಿತು. ಬಾಳು ದುರ್ಭರವಾಯಿತು.

ಅಂತಹ ದೌರ್ಬಲ್ಯದ ಸಂದರ್ಭಗಳನ್ನೇ ಇದಿರು ನೋಡುತಿದ್ದ ಸಾವು ಹೆಡೆಯಾಡಿಸಿ, ತಾನೂ ಒಂದು ಪರಿಹಾರವೆಂದು ವ್ಯಂಗ್ಯವಾಗಿ ಹೇಳದೆ ಇರಲಿಲ್ಲ. ಆದರೆ ಅದಕ್ಕೆ ಮನಸೋಲಲಿಲ್ಲ ತುಂಗಮ್ಮ. ಆತ ಬಂದೇ ಬರುವನೆಂಬ ನಂಬಿಕೆಯಿನ್ನೂ ಆಕೆಯಲ್ಲಿ ಬಲವತ್ತರವಾಗಿತ್ತು. ದಿನಕಳೆದಂತೆ ತನ್ನೊಡನೆ ಆ ಆಸೆಯೂ ಕ್ಷೀಣಿಸುತಲಿದ್ದರೂ ತುಂಗಮ್ಮ ಉಸಿರು ಹಿಡಿದು ಕುಳಿತಳು.

ಆದರೆ ಕೊನೆಗೂ ಬರಲೇ ಇಲ್ಲ ಆತ....

ಆ ಒಂದು ರಾತ್ರೆ, ತಾನಿದ್ದ ಮನೆಯ ದಂಪತಿಗಳ ಮಾತುಕತೆಯನ್ನು ಕೇಳಿ ತುಂಗಮ್ಮ ತತ್ತರಿಸಿ ಹೋದಳು.

ಯಾವುದೋ ಕಾರಣಕ್ಕಾಗಿ ಉಂಟಾಗಿದ್ದ ದಂಪತಿಗಳ ವಿರಸ ತುಂಗಮ್ಮನನ್ನು ಆಹುತಿ ತೆಗೆದುಕೊಂಡಿತು.

"ಹೋಗಿ! ಒಬ್ಬರೇ ಏನು ನಿಮಗಿದ್ದೋರೀಷ್ಟು? ಇನ್ನೂ ನಾಲ್ಕು ಜನ ಹುಡುಗೀರ್ನ ಕರಕೊಂಡ್ಬನ್ನಿ. ಈ ಮನೇನೆ ಒಂದು ಹೆರಿಗೆ ಆಸ್ಪತ್ರೆಯಾಗ್ಲಿ!"

"ಶ್! ಮೆಲ್ಲಗೆ ಮಾತಾಡೇ. ಈಗ್ತಾನೇ ಮಲಕ್ಕೊಂಡಿದಾಳೆ."

"ಅಯ್ಯೋ ಪಾಪ, ಪುಟ್ಮಗು! ನನ್ನ ಮಾತು ಕೇಳಿ ನೊಂದ್ಕೊಂಡು ಬುಳುಬುಳೂಂತ ಅತ್ಬಿಡತ್ತೆ, ಅಲ್ಲ?"

"ಥೂ! ಇದೇನೆ ಹಾಳು!"

"ಸಾಕಾಯ್ತಮ್ಮಾ ನಂಗೆ. ದಿನ್ವೆಲ್ಲಾ ಮೂಲೇಲಿ ಕೂತಿರ್‍ತಾಳೆ ಮೂದೇವಿ. ನಮ್ಮಗು ಅತ್ತು ರಂಪಮಾಡ್ತಿದ್ರೂನೂ ಒಂದ್ನಿಮಿಷ ಹತ್ರ ಕರಕೊಂಡು ರಮಿಸೋಲ್ಲ."

"ಪಾಪ! ಅವಳ ಕಷ್ಟ ಅವಳಿಗೆ!"

"ಸಾಕು! ನಿಲ್ಸಿ ಮಾತ್ನ! ನಾನು ನಮ್ತಾಯಿ ಮನೆಗೆ ಹೊರಟೋಗ್ತೀನಿ."

"ಒಳ್ಳೆಯ ಗ್ರಹಚಾರ! ನಾನಾದರೂ ಏನ್ಮಾಡ್ಲೀ? ದಾಕ್ಷಿಣ್ಯಕ್ಕೆ ಒಪ್ಕೊಂಡಿದ್ದಾಯ್ತು. ಇನ್ನು ಸ್ವಲ್ಪ ದಿವ್ಸ"....

"ಹೌದು, ಇನ್ನು ಸ್ವಲ್ಪ ದಿವ್ಸ!"

"ಆಕೆ ತಂದೆ, ಹೋದ ತಿಂಗಳು ಬಂದಾಗ ಹೇಳ್ಲಿಲ್ಲ? ಒಂಭತ್ನೇ ತಿಂಗಳಿರ್ಬೇಕು ಈಗ. ಇನ್ನೊಂದ್ಸಲಿ ಡಾಕ್ಟರಿಗೆ ತೋರಿಸಿ ಆಸ್ಪತ್ರೆ ಸೇರಿಸ್ಬಿಡೋಣ."

"ಸೇರ್ಸಿ. ನಾನು ಅಲ್ಹೋಗಿ ಆಕೆ ಚಾಕ್ರಿ ಮಾಡ್ತೀನಿ."

"ನೀನ್ಯಾಕೆ ಮಾಡ್ಬೇಕು? ದಿನಕ್ಕೊಮ್ಮೆ ಹೋಗ್ಬಿಟ್ಟು ಬಾ ಅಷ್ಟೆ."

"ಹೆರಿಗೆ ಆದ್ಮೇಲೆ ತಾಯಿ-ಮಗು ಇಲ್ಲಿಗೇ ತಾನೇ ವಾಪ್ಸ?"

"ಏನೂ ಇಲ್ಲ. ಆಕೆ ತಂದೆಗೆ ಬರೆದ್ಬಿಡ್ತೀನಿ...ಏನ್ಬೇಕಾದರೂ ಮಾಡ್ಕೊಳ್ಳಿ....ಇಷ್ಟು ಸಮಯ ನಾವು ಮಾಡಿದ್ದೇವೇನೇ ಸಾಕು!"

....ನೋವು, ವ್ಯಂಗ್ಯ, ಕನಿಕರವೆಲ್ಲವೂ ಬೆರೆತಿದ್ದ ಮಾತುಗಳು.

ಆ ರಾತ್ರಿ ನಿದ್ದೆ ಬರಲಿಲ್ಲ ತುಂಗಮ್ಮನಿಗೆ.

ಮಾರನೆ ದಿನ ತಿರಸ್ಕಾರದ ನೋಟವನ್ನೂ ಕುಹಕದ ಮಾತುಗಳನ್ನೂ ಆಕೆ ಇದಿರುನೋಡಿದಳು. ಆದರೆ ಆ ದಂಪತಿಗಳು ಎಂದಿನಂತೆಯೇ ಇದ್ದರು. ಮಾಮೂಲಿನ ವ್ಯವಹಾರದ ಮಾತುಗಳು...."ಆಯಾಸವೆ? ಹ್ಯಾಗನಿಸುತ್ತೆ?" ಎನ್ನುವ ಪ್ರಶ್ನೆಗಳು....

ಅವೆಲ್ಲವೂ ಎಷ್ಟೊಂದು ಕೃತಕ, ಅಸಹಜ!

ತುಂಗಮ್ಮನಿಗೆ ಅವರನ್ನು ದ್ವೇಷಿಸಬೇಕೆಂದು ತೋರಿತು, ಕ್ಷಣಕಾಲ. ಆದರೆ ಹಾಗೆ ಮಾಡಲು ಹಕ್ಕಿತ್ತೆ ಅವಳಿಗೆ? ಇಷ್ಟು ಕಾಲ ಆಶ್ರಯವಿತ್ತುದಕ್ಕೆ ಅದೇ ಏನು ಕೃತಜ್ಞತೆ ಸಲ್ಲಿಸುವ ರೀತಿ?....ತುಂಗಮ್ಮ ಉಗುಳು ನುಂಗಿ ಸುಮ್ಮನಾದಳು.

ಆಮೇಲೆ ಆಕೆ ಆ ತೀರ್ಮಾನಕ್ಕೆ ಬರಲು ಹೆಚ್ಚು ದಿನ ಹಿಡಿಯಲಿಲ್ಲ.

....ಇಷ್ಟು ದೂರ ನಡೆದು ಬಂದಿದ್ದಾಳೆ ತುಂಗಮ್ಮ, ತನ್ನ ತೀರ್ಮಾನವನ್ನು ಕೃತಿಗಿಳಿಸುತ್ತ.

ಬಂಡೆಯ ಮೇಲೆ ಕುಳಿತು ಸ್ವಾನರಿಸಿಕೊಂಡು ಎದ್ದು, ಆಕೆ ಅಲ್ಲೆ ಕತ್ತಲಲ್ಲಿ ಜಲಬಾಧೆ ತೀರಿಸಿಕೊಂಡಳು. ಮತ್ತೆ ಆಕೆ, ಜನರು ವಾಸವಾಗಿದ್ದ ಪ್ರದೇಶವನ್ನು ಸಮೀಪಿಸಲೆಂದು ಹಾದಿ ಇಳಿದಳು.

ರಸ್ತೆಯಲ್ಲಿ ವಾಹನಗಳು ಓಡಾಡುತಿದ್ದುವು—ಸಾಮಾನು ಹೇರಿಕೊಂಡು ಮುಸುಕು ಧರಿಸಿದ್ದ ಲಾರಿಯೊಂದು....ನಗರ ಸಂಚಾರಿಯಾದ ನೀಲಿ ಬಸ್ಸು....ವೇಗವಾಗಿ ಚಲಿಸುತಿದ್ದ ಕಾರುಗಳು....ಪ್ರದೇಶದೊಳಗಿಂದ ಬಂದು ಹೆದ್ದಾರಿ ಸೇರಿದ ಅಟೋ-ರಿಕ್ಷಾ....

ಅವುಗಳನ್ನೆಲ್ಲ ಯಾಂತ್ರಿಕವಾಗಿ ನೋಡುತ್ತ ತುಂಗಮ್ಮ, ತಾನೂ ಮೆಲ್ಲನೆ ಚಲಿಸುವ ಯಂತ್ರವಾಗಿ, ಹೆದ್ದಾರಿಯನ್ನು ದಾಟಿ ಅಡ್ಡಬೀದಿಗಿಳಿದಳು.

ಅಲ್ಲಿಯೋ ಎಲ್ಲಿಯೋ ಇರಬೇಕು ಆಕೆಯ ಆ ಪಯಣದ ಕೊನೆಯ ನಿಲ್ದಾಣ. ಆ ಪ್ರದೇಶದ ಹೆಸರು ಗೊತ್ತಿತ್ತು ಅವಳಿಗೆ. ತಾನು ಹೋಗಬೇಕಾದ ಮನೆ ಅಲ್ಲಿರುವುದನ್ನೂ ಆಕೆ ಬಲ್ಲಳು.

—ಮನೆ. ಅದು ಮನೆ ಹೌದೋ ಅಲ್ಲವೋ. ತುಂಗಮ್ಮನಿಗೆ ಅದರ ಹೆಸರು ಮಾತ್ರ ತಿಳಿದಿತ್ತು.

ಯಾರನ್ನು ಕೇಳಬೇಕು ಆಕೆ? ಯಾರನ್ನು?

ಒಂದು ವೇಳೆ ಆ ಸ್ಥಳವನ್ನು ತಾನು ಸೇರುವುದಾಗದೇ ಹೋದರೆ? ಬಂದ ಹಾದಿಯಲ್ಲೆ ಹಿಂತಿರುಗಬೇಕಾದ ಪ್ರಮೇಯ ಒದಗಿತೆಂದರೆ?

ಹಾಗೆ ಹಿಂತಿರುಗುವುದು ಸಾಧ್ಯವೇ ಇರಲಿಲ್ಲ. ಎಲ್ಲ ಸಂಬಂಧವನ್ನೂ ಕಡಿದುಕೊಂಡೇ ಬಂದಿದ್ದಳಾಕೆ.

ಹಾಗಾದರೆ ಯಾರನ್ನಾದರೂ ಕೇಳಿ ನೋಡಬೇಕು. ಅದರಲ್ಲಿ ಅಪಮಾನದ ಮಾತೇನು ಬಂತು? ಭಯದ ಮಾತೇನು?

ಅದು, ಜನಸಂಚಾರವೇ ಇರದಿದ್ದ ಬೀದಿ. ಅಲ್ಲೊಂದು ಮನೆ ಇತ್ತು, ಇಲ್ಲೊಂದು ಮನೆ. ನೋಡಿದರೇ ತಿಳಿಯುತಿತ್ತು-ಉಂಡು ಉಡಲು ಸಾಕಷ್ಟು ಇದ್ದವರ ಮನೆಗಳು. ಗೇಟುಗಳ ಬಳಿಯಲ್ಲಿ ಮಕ್ಕಳನ್ನಾಡಿಸುತ್ತಲೋ ಪಕ್ಕದಮನೆಯವರೊಡನೆ ಮಾತನಾಡುತ್ತಲೋ ಹೆಂಗಸರು ನಿಂತಿದ್ದರು. ಅವರು ಯಾರನ್ನಾದರೂ ತುಂಗಮ್ಮ ಕೇಳಬಹುದೆ? ಆ ಮನೆ ಎಲ್ಲಿ-ಎಂದು ಕೇಳಬಹುದೆ?

ಕೇಳಬಹುದೋ ಬಾರದೋ. ವಿವರಿಸಲಾಗದ ಅಳುಕು ತುಂಗಮ್ಮನಿಗೆ.

ಆ ಬೀದಿಯ ಬಳಿಕ ಇನ್ನೊಂದು. ಅದೂ ಹಾಗೆಯೇ. ಇಲ್ಲಿ ನಾಲ್ಕಾರು ಗಂಡಸರು ಮನೆ ಸೇರುತಿದ್ದುದನ್ನಷ್ಟು ತುಂಗಮ್ಮ ಕಂಡಳು..... ಅಲ್ಲೇ ಭಿಕ್ಷೆ ಬೇಡುವ ಇಬ್ಬರು ಹುಡುಗರಿದ್ದರು....ಅವರನ್ನು ಕೇಳಬಹುದಲ್ಲವೆ-ಆ ಹುಡುಗರನ್ನು ?

ಆದರೆ ಅವರಿಗೆ ಗೊತ್ತಿರುತ್ತದೋ ಇಲ್ಲವೋ....

ಆ ಬೀದಿಯ ಕೊನೆಯಲ್ಲಿ, ದೊಡ್ಡಮನೆಯೊಂದರ ಅಂಗಳದ ಗೇಟಿನ ಹೊರಗೆ, ವಿದ್ಯಾರ್ಥಿನಿಯರಂತೆ ತೋರಿದ ಹುಡುಗಿಯರಿಬ್ಬರು ಮಾತನಾಡುತ್ತ ನಿಂತಿದ್ದರು. ತನಗಿಂತ ವಯಸ್ಸಿನಲ್ಲಿ ಚಿಕ್ಕವರಿದ್ದರೂ ಇರಬಹುದು. ಅಥವಾ ಸಮವಯಸ್ಕರೋ ಏನೋ. ಯಾವ ಸಮಸ್ಯೆಗಳೂ ಇಲ್ಲ ಅವರಿಗೆ. ಓದುತ್ತ, ಬಣ್ಣ ಬಣ್ಣದ ಕನಸು ಕಾಣುತ್ತ, ದಿನಕಳೆದರಾಯಿತು ; ರಾತ್ರೆ ಕಳೆದರಾಯಿತು.

ತುಂಗಮ್ಮ ಅವರನ್ನು ಸಮೀಪಿಸುತಿದ್ದಂತೆ ಒಬ್ಬಾಕೆ ಎಂದಳು.

"ಹೊತ್ತಾಯ್ತು ಹೊರಡ್ತೀನಿ ಕಣೆ. ಅಮ್ಮಾ ಬಯ್ತಾರೆ ತಡವಾದ್ರೆ-"

ಹಾಗೆ ಹೇಳುತ್ತ ಒಬ್ಬ ಹುಡುಗಿ ಹೊರಟರೆ, ಇನ್ನೊಬ್ಬಳು ಅಂಗಳಕ್ಕೆ ಕಾಲಿರಿಸಿ ಗೇಟು ಮುಚ್ಚಿಕೊಳ್ಳುತ್ತ ಅಂದಳು :

"ಹುಷಾರೀನಮ್ಮ....ಕಾರುಗೀರು ನಿಂತಿರತ್ತೆ ಮೂಲೇಲಿ, ಹುಷಾರಿ !"

"ಊ....ಆ ಭಯವೆಲ್ಲ ನಿನಗಮ್ಮ....ನನಗೇನೂ ಇಲ್ಲ."

ಹುಷಾರಿ-ಕಾರುಗೀರು-ಭಯ....ಆ ಮಾತುಗಳಿಗೆ ಏನು ಅರ್ಥವೋ ತುಂಗಮ್ಮನಿಗೆ ಸ್ಪಷ್ಟವಾಗಿ ತಿಳಿಯಲಿಲ್ಲ. ಪ್ರಪಂಚದಲ್ಲಿ, ಭಯಪಡಬೇಕಾದವಳು ತಾನೊಬ್ಬಳೇ ಅಲ್ಲವೆ ? ಈ ಮುಗ್ಧೆಯರಿಗೆ ಯಾತರ ಭಯ ?

ಅವರಿಗೆ ಖಂಡಿತ ತಿಳಿದಿರುತ್ತದೆಂದು ಕೊಂಡಳು ತುಂಗಮ್ಮ. ಅವರನ್ನೆ ಕೇಳುವುದು ಮೇಲು. ತನ್ನ ಸೋದರಿಯರು....

ಆದರೆ ಒಬ್ಬಾಕೆ ಒಳ ಹೋದಮೇಲೆ, ಮುಂದೆ ನಡೆಯುತ್ತಲಿದ್ದವಳು ಉಳಿದ ಒಬ್ಬಳೇ. ಆಕೆಯನ್ನೆ ತುಂಗಮ್ಮ ಕರೆದಳು.

"ಅಮ್ಮಾ!"

ಆ ಹುಡುಗಿ ತಿರುಗಿನೋಡಲಿಲ್ಲ.

"ಅಮ್ಮಾ!"

ತನ್ನನ್ನೆ ಕರೆದರೆಂಬ ಸಂದೇಹದಿಂದ ತಿರುಗಿ ನೋಡಿದ ಹುಡುಗಿ ಕೇಳಿದಳು.

"ನನ್ನ ಕೂಗಿದಿರಾ?"

"ಹೂಂ....ಒಂದುಪಕಾರ ಮಾಡ್ತೀರಾ?"

"ಏನು, ಹೇಳಿ."

ನಿರಾಕರಣೆಯ ಉತ್ತರ ಬರದಿರಲಿ ದೇವರೇ ಎಂದು ಹಂಬಲಿಸುತ್ತ ತುಂಗಮ್ಮ ಕೇಳಿದಳು.

"ಅಭಯಧಾಮ ಎಲ್ಲಿದೆ ಸ್ವಲ್ಪ ತೋರಿಸ್ತೀರಾ?"

"ಏನಂದಿರಿ?"

"ಅಭಯಧಾಮ—"

"ಓ!"

ಸೂಕ್ಷ್ಮಮತಿಯಾದ ಹುಡುಗಿ, ತಿಳಿದುಕೊಂಡಳಲ್ಲವೆ? ಆಕೆ ನಕ್ಕ ಹಾಗಾಯಿತೆ? ಪರಿಹಾಸ್ಯ ಮಾಡಿದಳೆ ತನ್ನನ್ನು?

ಆ ಕತ್ತಲಲ್ಲಿ ಅದೊಂದೂ ತುಂಗಮ್ಮನಿಗೆ ಕಾಣಿಸುತ್ತಿರಲಿಲ್ಲ. ಕ್ಷಣ ಕಾಲ ತಡೆದು ನಿಂತ ಆ ಹುಡುಗಿ ತನ್ನನ್ನು, ಪಾದದಿಂದ ತಲೆಕೂದಲ ತನಕ ಎರಡು ಸಾರಿ ನೋಡಿದುದಂತೂ ನಿಜ. ತನ್ನ ಬಸಿರೂ ಒಳಗಾಗಿರಬೇಕು, ಆಕೆಯ ದೃಷ್ಟಿಗೆ.

"ನನ್ಜತೇಲೆ ಬನ್ನಿ. ನಮ್ಮನೆಗೆ ಹೋಗೋ ಹಾದೀಲೇ ಇದೆ. ತೋರಿಸ್ತೀನಿ...."

ತುಂಗಮ್ಮನ ಕಣ್ಣುಗಳು ತುಂಬಿ ಬಂದು, ಕತ್ತಿನ ನರಗಳು ಬಿಗಿದು ಕೊಂಡುವು. ಯಾವುದರ ದ್ಯೋತಕ ಆ ಕಂಬನಿ? ಅದು ದುಃಖಾಶ್ರುವೆ? ಆನಂದ ಬಾಷ್ಪವೆ? ಕೃತಜ್ಞತೆಯ ಕಣ್ಣೀರೆ?

ಯಾವ ಯೋಚನೆಯನ್ನೂ ಮಾಡದೆ ತುಂಗಮ್ಮ, ಎಳೆಯ ಮಗುವಿನ ಹಾಗೆ ಆ ಹುಡುಗಿಯನ್ನು ಹಿಂಬಾಲಿಸಿದಳು.

ಅವರು ನೂರು ಮಾರು ದೂರ ಹೋಗಿರಬಹುದು. ಹುಡುಗಿ ನಿಂತು ಎಡಕ್ಕೆ ಕೈ ತೋರಿಸಿ ಹೇಳಿದಳು.

"ಅದೇ. ಅದೇ ಅಭಯಧಾಮ."

ಆ ಹುಡುಗಿ ಇನ್ನು ತನ್ನನ್ನು ಬಿಟ್ಟುಹೋಗುವಳು, ತಾನಿನ್ನು ಒಬ್ಬಂಟಿಗಳಾಗುವೆ, ಎಂದು ತುಂಗಮ್ಮನಿಗೆ ದಿಗಿಲಾಯಿತು. ಆದರೂ ಆಕೆ ತಲೆಯೆತ್ತಿ, ಹುಡುಗಿ ಬೊಟ್ಟುಮಾಡಿದ್ದ ಕಡೆಗೆ ನೋಡಿದಳು. ಮೂರಾಳು ಎತ್ತರವಿದ್ದ ಚಚ್ಚೌಕದ ಗೋಡೆ. ಎದುರು ಭಾಗದಲ್ಲೊಂದು ವಿದ್ಯುದ್ದೀಪ ಬೆಳಕು ಬೀರುತಿತ್ತು. ಅದರ ಕೆಳಗೆ ಕಾಣಿಸಿಕೊಂಡಿತು, ಮುಚ್ಚಿದ್ದ ಕರಿದಾಪ ದೊಡ್ಡ ಬಾಗಿಲೊಂದು. ಆ ಗೋಡೆಗಳ ಸುತ್ತಲೂ ಬಯಲು ಜಾಗ. ಆ ಜಾಗದ ಸುತ್ತಲೂ ಸಣ್ಣ ಗೋಡೆ.

"ನೋಡಿದಿರಾ? ಆ ದೀಪದ ಕೆಳಗೆ ಬೋರ್ಡಿದೆ. ಬರೆದಿದಾರೆ-ಅಭಯಧಾಮ ಅಂತ."

-ತುಂಗಮ್ಮನನ್ನು ಉದ್ದೇಶಿಸಿ ಆ ಹುಡುಗಿ ಹೇಳಿದಳು ಹಾಗೆಂದು.

"ಹಾಂ," ಎಂದಳು ತುಂಗಮ್ಮ, "ಹೂಂ. ನೋಡ್ದೆ. ಹೋಗ್ತೀನಿ."

"ನಾನು ಬರ್ತೀನಿ ಹಾಗಾದರೆ."

"ಹೂನಮ್ಮ...."

ಏನು, ಯಾಕೆ ಗಳನ್ನು ಕೇಳಿ ತನ್ನನ್ನು ನೋಯಿಸಿರಲಿಲ್ಲ ಆ ಹುಡುಗಿ. ಎಷ್ಟೊಂದು ಒಳ್ಳೆಯವಳು! ಕತ್ತಲೆಯಲ್ಲಿ ಮರೆಯಾಗುತ್ತ ಸಾಗಿದ್ದ ಆಕೆಯನ್ನೆ ತುಂಗಮ್ಮ ಕ್ಷಣಕಾಲ ನೋಡಿದಳು.

ಆ ಬಳಿಕ ಆ ಕಟ್ಟಡದತ್ತ ತುಂಗಮ್ಮನ ದೃಷ್ಟಿ ಹರಿಯಿತು.

ಎಷ್ಟು ನಿಶ್ಚಲವಾಗಿ ನೀರವವಾಗಿ ನಿಂತಿತ್ತು ಆ ಅಭಯಧಾಮ!

ಅಂತೂ ತುಂಗಮ್ಮ ಅಲ್ಲಿಗೆ ಬಂದು ತಲಪಿದ್ದಳು.

ಆಕೆ ಮೆಲ್ಲನೆ ನಡೆದು ಕಿರುಗೋಡೆಯ ಗೇಟನ್ನು ತೆರೆದಳು. ಅದು ಸಪ್ಪಳ ಮಾಡಿ, ತುಂಗಮ್ಮ ಒಳ ಬರಲು ಅವಕಾಶವನ್ನಿತ್ತು, ಮತ್ತೆ ಮುಚ್ಚಿಕೊಂಡಿತು.

ಬಾಗಿಲನ್ನು ಸಮೀಪಿಸಿದಳು ತುಂಗಮ್ಮ.

ಅನಿಶ್ಚಯತೆಯ ಕೊನೆಯ ನಿಮಿಷ.

ಅದು ಕಳೆಯುತ್ತಲೆ ಆಕೆ ಬಾಗಿಲು ಬಡೆದಳು.

"ಅಮ್ಮಾ! ಅಮ್ಮಾ!"

ಮತ್ತೆ ಬಾಗಿಲಿನ ಬಡೆತ.

"ಅಮ್ಮಾ! ಅಮ್ಮಾ!"

ಕತ್ತಲಿನ ವಾತಾವರಣದಲ್ಲಿ ಆ ಸ್ವರವೇ ಪ್ರತಿಧ್ವನಿಸಿತು:

"ಅಮ್ಮಾ! ಅಮ್ಮಾ!"

ಭದ್ರವಾಗಿದ್ದ ಆ ಬಾಗಿಲ ಮೇಲೆ ಮುಷ್ಟಿ ಬಿಗಿದಿದ್ದ ತನ್ನೆರಡೂ ಕೈಗಳಿಂದ ತುಂಗಮ್ಮ ಬಡೆದಳು.

"ಅಮ್ಮಾ! ಅಮ್ಮಾ!"

ಉತ್ತರ ಬರಲಿಲ್ಲ.

ಬಿಗಿದ ಮುಷ್ಟಿಗಳು ಸಡಿಲಿದುವು. ಎಲ್ಲ ಶಕ್ತಿಯೂ ತನ್ನನ್ನು ಬಿಟ್ಟು ಹೋದ ಹಾಗೆ ಆಕೆಗೆ ಭಾಸವಾಯಿತು. ಕಣ್ಣುಗಳು ಮಂದವಾದುವು.

"ಅಮ್ಮಾ...." ಎಂದಳು ತುಂಗಮ್ಮ ಮತ್ತೊಮ್ಮೆ ಮೆಲ್ಲನೆ. ಆದರೆ ಆ ಕರೆ ಆಕೆಗೇ ಕೇಳಿಸದಷ್ಟು ಕ್ಷೀಣವಾಗಿತ್ತು.

೨

ಒಳಗೆ ಹುಡುಗಿಯರು ಊಟಕ್ಕೆ ಕುಳಿತಿದ್ದರು. ಊಟದ ಗದ್ದಲ ವಿಪರೀತ. ಆಗ ಆಗದ ಜಗಳವಿಲ್ಲ.

ಆ ಮಾತು, ಗುಜುಗುಜು, ಸದ್ದಿನ ನಡುವೆ, ಹೊರಗಿನಿಂದ ಕರೆದುದು ಸರಸಮ್ಮನಿಗೆ ಕೇಳಿಸಲಿಲ್ಲ.

ತಮ್ಮ ಕೊಠಡಿಯಲ್ಲೇ ಇದ್ದರು ಸರಸಮ್ಮ. ಮೂಗಿನ ತುದಿಗೆ ಕನ್ನಡಕವೇರಿಸಿ, ಹಿಂದಿನ ದಿನ ಒಂದು ಪುಸ್ತಕವನ್ನು ಓದಿ ನಿಲಿಸಿದ ಭಾಗದಿಂದ ಮುಂದುವರಿಯಲು ಅವರು ಯತ್ನಿಸುತಿದ್ದರು.

ಅವರ ಮಂಚದ ಸಮೀಪದಲ್ಲೆ ಕೆಳಗೆ ಹಾಸಿಗೆಯ ಮೇಲೆ ಮಲಗಿದ್ದಳು ಜಲಜಾ-ಹದಿನೆಂಟರ ಹುಡುಗಿ. ಅಭಯಧಾಮದಲ್ಲಿ ಆಗಲೆ ನಾಲ್ಕು ವರ್ಷಗಳನ್ನು ಕಳೆದಿದ್ದ ಆ ಹೆಳಬಳನ್ನು ಎರಡು ದಿನಗಳಿಂದ ನೆಗಡಿ ಕೆಮ್ಮು ಜ್ವರ ಬಾಧಿಸುತಿದ್ದುವು. ನಿದ್ದೆ ಬರದ ಆಕೆ ದಿಂಬಿಗೆ ಮುಖ ತಗಲಿಸಿ ಹಾಗೆಯೇ ಒರಗಿದ್ದಳು.

....ಕಿಟಕಿಯಿಂದ ಹೊರಗಿಣಿಕಿ, ಸರಳುಗಳೆಡೆಯಿಂದ ತೂರಿ ಹೋಗಿ, ಹೊರಗೆ ಅಂಗಳದಲ್ಲಿ ಸಂಚರಿಸುತಿತ್ತು ಆಕೆಯ ಮನಸ್ಸು....

ಅಮ್ಮಾ ಎಂಬ ಕರೆ, ಬಾಗಿಲ ಬಡಿತ, ಧೊಪ್ಪನೆ ಸದ್ದು....

"ದೊಡ್ಡಮ್ಮಾ!"

"ಏನೇ ಜಲಜಾ....?"

"ಹೊರಗೇನೋ ಸಪ್ಪಳವಾಯ್ತಲ್ಲಾ?"

ಓದುತಿದ್ದ ವಾಕ್ಯದ ಮೇಲೆ ಬೆರಳಿನ ಗುರುತಿಟ್ಟು ಸರಸಮ್ಮ ಮುಖವೆತ್ತಿ ನೋಡಿ ಕಿವಿ ನಿಗುರಿಸಿದರು.

"ಎಲ್ಲೇ?"

"ಹೊರಗೆ ದೊಡ್ಡಮ್ಮ, ಯಾರೋ ಬಂದಿದಾರೆ...."

ಆದರೆ ಯಾವ ಸಪ್ಪಳವೂ ಕೇಳಿಸುತ್ತಿರಲಿಲ್ಲ. ಜ್ವರದ ಗುಂಗಿನಲ್ಲಿ ಹುಡುಗಿ ಕನವರಿಸುತ್ತಿರಬೇಕು-ಎಂದುಕೊಂಡರು ಸರಸಮ್ಮ. ಧ್ವನಿಯನ್ನು ಮೃದುಗೊಳಿಸುತ್ತ ಅವರೆಂದರು :

"ಯಾವ ಸಪ್ಪಳವೂ ಇಲ್ವಲ್ಲೇ....ಕನಸು ಬಿದ್ದಿರ್ಬೇಕು ನಿಂಗೆ. ಮಲಕೋಮ್ಮ...."

"ಊಹೂಂ ದೊಡ್ಡಮ್ಮ....ಸಂಗ್ನಿದ್ದೆ ಬಂದಿಲ್ಲ. ನೋಡಿ ಬೇಕಾದರೆ ಬಂದಿದಾರೆ ಯಾರೋ."

ಜಲಜ ಹಟವಾದಿ. ಎದ್ದು ಬಾಗಿಲು ತೆರೆದು ನೋಡಿ ಬರದೇ ಇದ್ದರೆ, ಆಕೆ ನಿದ್ದೆಹೋಗುವಳೇ ಅಲ್ಲ. ಸರಸಮ್ಮನಿಗೆ ಅದು ತಿಳಿದಿತ್ತು.

ಹುಡುಗಿಯರು ಊಟ ಮುಗಿಸಿ ಒಬ್ಬೊಬ್ಬರಾಗಿ ಬಚ್ಚಲು ಮನೆಗೆ ತಟ್ಟೆ ತೊಳೆಯಲು ಹೊರಟಿದ್ದರು.

ಸರಸಮ್ಮ, "ಹಟಮಾರಿ ಕಣೇ ನೀನು" ಎನ್ನುತ್ತ ನಸು ನಕ್ಕು, ಕನ್ನಡಕವನ್ನೂ ಪುಸ್ತಕವನ್ನೂ ಮೇಜಿನ ಮೇಲಿರಿಸಿ, ಎದ್ದು ನಿಂತು ಒಳ ಆವರಣದ ಬಾಗಿಲಿನತ್ತ ಸಾಗಿದರು. ಬೀಗ ಹಾಕಿದ್ದ ಬಾಗಿಲು. ಆಕೆಯ ಸೊಂಟದಲ್ಲಿ ತೂಗಾಡುತಿದ್ದೊಂದು ಗೊಂಚಲಿನಿಂದ ಒಂದು ದೊಡ್ಡ ಕೈ ಆ ಬೀಗವನ್ನು ತೆಗೆಯಿತು. ಸರಸಮ್ಮನ ಬೆರಳ ಸೋಂಕಿಗೆ ತೆರೆದುಕೊಂಡ ಬಾಗಿಲಿನೆಡೆಯಿಂದ, ಬಯಲಲ್ಲಿ ಸುತ್ತಾಡುತಿದ್ದ ತಣ್ಣನೆಯ ಗಾಳಿ ಒಳ ನುಗ್ಗಿತು.

ಸ್ವಾಭಾವಿಕವಾಗಿಯೇ ಮೆಟ್ಟಿಲುಗಳತ್ತ ಸರಿಯಿತು ಸರಸಮ್ಮನ ದೃಷ್ಟಿ. ಸುಳ್ಳಾಡಿರಲಿಲ್ಲ ಜಲಜ!

....ಮೆಟ್ಟುಗಲ್ಲುಗಳ ಮೇಲೆ ಮುದಡಿ ಬಿದ್ದಿದ್ದ ಒಂದು ಹೆಣ್ಣು ಜೀವ. ಬಲಗೈ ಬಾಗಿಲಿನತ್ತ ಚಾಚಿತ್ತು. ಮಣ್ಣನ್ನು ಅಪ್ಪಿಕೊಂಡಿತ್ತು ಮುಖ.

ಜಲಜಳ ಕ್ಷೀಣ ಸ್ವರ ಸರಸಮ್ಮನನ್ನು ಹಿಂಬಾಲಿಸಿ ಬಂತು.

"ದೊಡ್ಡಮ್ಮಾ, ಯಾರು ದೊಡ್ಡಮ್ಮ?"

ಸರಸಮ್ಮ ಉತ್ತರವೀಯಲಿಲ್ಲ. ಅವರು ಬಾಗಿ, ಬಿದ್ದಿದ್ದ ಹೆಣ್ಣಿನ ಮುಖವೆತ್ತಿ ಆ ಮೂಗಿಗೆ ಬೆರಳಿಟ್ಟು ನೋಡಿದರು. ಪ್ರಜ್ಞೆ ತಪ್ಪಿತ್ತು ಅಷ್ಟೆ. ಅವರು ಕೆಳಗಿಳಿದು ಆ ಹೆಣ್ಣು ಜೀವವನ್ನು ಎತ್ತಿ ಒಳಕ್ಕೊಯ್ಯಲು ಯತ್ನಿಸಿದರು. ಅದು ಅವರ ವಯಸ್ಸಾದ ಕೈಗಳಿಗೆ ಮಿಾರಿದ್ದ ಭಾರ.

"ಸಾವಿತ್ರಿ! ಲಲಿತಾ! ಜೇಗ್ಬನ್ರೇ....ಒಂದಿಷ್ಟು ನೀರು ತಗೊಂಬನ್ನಿ!"

ಹುಡುಗಿಯರಲ್ಲಿ ದೊಡ್ಡವರಾದ ಸಾವಿತ್ರಿ ಲಲಿತಾ ಓಡಿಬಂದರು. ಅವರ ಹಿಂದೆಯೇ ಗುಂಪು ಕಟ್ಟಿಕೊಂಡು ಹುಡುಗಿಯರ ಹಿಂಡೇ ಬಂತು. ಬೇರೆ ಸನ್ನಿವೇಶವಾಗಿದ್ದರೆ ಆ ತೆರೆದ ಬಾಗಿಲಿನೆಡೆಯಿಂದ ಹುಡುಗಿಯರು ದೂರ ದೂರಕ್ಕೆ ಹೊರನೋಡುತಿದ್ದರು. ಓಡಿ ಹೋಗುವ ಬಯಕೆಯೂ ಕೆಲವರಿಗೆ ಆಗದೆ ಇರುತ್ತಿರಲಿಲ್ಲ. ಆದರೆ ಈಗ ಅವರ ದೃಷ್ಟಿಯೆಲ್ಲ ಬಾಗಿಲ ಬಳಿ ಮುದುಡಿ ಬಿದ್ದಿದ್ದ ಜೀವದ ಮೇಲಿತ್ತು.

ತಮ್ಮ ಹಾಗೆಯೇ ಇನ್ನೊಂದು ಹತಭಾಗ್ಯೆ ಹೆಣ್ಣು!

....ಹಾಗೆ ತುಂಗಮ್ಮನನ್ನು ಒಳಕ್ಕೆ ಹೊತ್ತು ತಂದರು. ಬಾಗಿಲು ಮತ್ತೆ ಮುಚ್ಚಿಕೊಂಡು, ಬೀಗ ಅದಕ್ಕೆ ಕಾವಲು ಕುಳಿತಿತು.

ಅಸಹಾಯಸ್ಥಿತಿಯಲ್ಲಿ ಅಭಯದ ಆಸರೆಗಾಗಿ ಬಂದಿದ್ದ ತುಂಬು ಗರ್ಭಿಣಿ....ಅಬಲೆಯಾದ ಹೆಣ್ಣನ್ನು ನೂರಾರು ರೀತಿಯಲ್ಲಿ ಕಂಡಿದ್ದರೂ ಸರಸಮ್ಮನ ಹೃದಯ, ಎಂದಿನಂತೆ ಈ ಸಾರೆಯೂ, ಕಾತರದ ಕಡಲಾಗಿ ಮಮತೆಯ ಒಸರಾಗಿ ಮಿಡುಕಿತು.

ಆಕೆ ತುಂಗಮ್ಮನಿಗೆ ಶೈತ್ಯೋಪಚಾರ ನಡೆಸಿದರು. ತುಂಗಮ್ಮ ಕಣ್ಣು ತೆರೆದಳು. ಆಕೆಯ ಮುಗ್ಧ ದೃಷ್ಟಿ ಅಲ್ಲಿ ನೆರೆದಿದ್ದವರ ಮೇಲೆಲ್ಲ ಸುತ್ತಾಡಿ, ಯಾವುದನ್ನೂ ಗ್ರಹಿಸದೆ, ಮತ್ತೆ ಎವೆಗಳೆಡೆಯಲ್ಲಿ ಅಡಗಿಕೊಂಡಿತು.

ಮಲಗಿದ್ದಲ್ಲೆ ತುಂಗಮ್ಮ ನೀಳವಾದ ನಿಟ್ಟುಸಿರು ಬಿಟ್ಟಳು. ಆಕೆಯ ದೇಹ ಚಲಿಸಿತು.

ಸರಸಮ್ಮ ಎದ್ದು, ಗುಂಪಾಗಿ ನಿಂತಿದ್ದ ಹುಡುಗಿಯರನ್ನೆಲ್ಲ ಕೈ ಬೀಸಿ ಕಳುಹಿದರು:

"ಹೋಗ್ರೆ, ಹೋಗಿ....ಹಾಸಿಗೆ ಹಾಸ್ಕೊಳ್ಳಿ, ಹೋಗಿ...."

'ದೊಡ್ಡಮ್ಮ'ನ ಮಂಚದ ಮೇಲೆಯೆ ಮಲಗಿಸಿದ್ದರು ತುಂಗಮ್ಮನನ್ನು. ಹೆಚ್ಚಿನ ಹುಡುಗಿಯರೆಲ್ಲ ಹೊರ ಹೋಗುತ್ತಲೆ ಸಾವಿತ್ರಿ ಕೇಳಿದಳು.

"ಈಕೇನ ಎಲ್ಲಿ ಮಲಗ್ಸೋಣ ದೊಡ್ಡಮ್ಮ?"

"ಈ ರೂಮ್ನನಲ್ಲೇ ಇರಲಿ ದೊಡ್ಡಮ್ಮಾ. ಇಲ್ಲೇ ಹಾಸಿ...."

-ಎಂದಳು, ಮಲಗಿದ್ದಲ್ಲಿಂದಲೇ ಎಲ್ಲವನ್ನೂ ಎವೆಯಿಕ್ಕದೆ ನೋಡುತ್ತಿದ್ದ ಜಲಜ. ಆಗ್ರಹವಿತ್ತು ಆ ಧ್ವನಿಯಲ್ಲಿ.

"ಹೂಂ," ಎಂದರು ದೊಡ್ಡಮ್ಮ. ಜ್ವರ ಪೀಡಿತಳಾಗಿದ್ದ ಜಲಜಳ ಮಾತು ಅವರ ಹೃದಯವನ್ನು ಮತ್ತಷ್ಟು ಕೋಮಲಗೊಳಿಸಿತು.

"ಸಾವಿತ್ರಿ, ಇನ್ನೊಂದು ಹಾಸಿಗೆ ತಂದ್ಕೊಡಮ್ಮಾ....ಹಾಗೇ ಒಂದಿಷ್ಟು ತಿಳಿಗಂಜಿ ಮಾಡ್ಕೊಂಡ್ಬಾ...."

ತುಂಗಮ್ಮ ಪ್ರಜ್ಞೆ ಇಲ್ಲದೆ ಬಿದ್ದಿದ್ದವರೆಗೂ ಎಲ್ಲರ ಆಸಕ್ತಿಯ ಕೇಂದ್ರವಾಗಿದ್ದಳು. ಪ್ರಜ್ಞೆ ಬಂದ ಬಳಿಕ, ಇತರ ಹುಡುಗಿಯರ ಪಾಲಿಗೆ ವಿಶೇಷವಾದುದೇನೂ ಉಳಿದಿರಲಿಲ್ಲ. ತಮ್ಮ ಹಾಗೆಯೇ ಇನ್ನೂ ಒಬ್ಬಳು.—ಮೂವತ್ತರ ಜತೆಗೆ ಮೂವತ್ತೊಂದನೆಯ ಸಂಖ್ಯೆ.

ಆದರೆ ಸರಸಮ್ಮನ ದೃಷ್ಟಿಯಲ್ಲಿ ಆಕೆ, ತಾನು ಬದುಕಿಸಿ ಮಾನವಳಾಗಿ ಮಾಡಬೇಕಾದ ಇನ್ನೊಂದು ಜೀವ. ಅವರು, ಮಲಗಿದ್ದ ಆ ಹೆಣ್ಣನ್ನು ನೋಡಿದರು. ದೃಷ್ಟಿ ತಾಕಬೇಕೆಂದು ಲಟಿಕೆ ಮುರಿಯಬೇಕಾದ ಸುಂದರಿಯೇನೂ ಅಲ್ಲ. ಆದರೂ ಆಕರ್ಷಣೀಯವಾದ ಮುಖ. ಯೌವನದ ಚೌಕಟ್ಟಿನೊಳಗೆ ಅಂಗ ಸೌಷ್ಟವ ಮೋಹಕವಾಗಿತ್ತು. ನಾಳೆ ತಾಯಿಯಾಗಲಿರುವ ಹೆಣ್ಣು....ಕೆದರಿದ್ದರೂ ಓರಣವಾಗಿ ತೋರುತ್ತಿದ್ದ ನೀಳವಾದ ಕೇಶರಾಶಿ. ಅದನ್ನು ನೇವರಿಸುವ ಬಯಕೆಯಾಯಿತು ಸರಸಮ್ಮನಿಗೆ. ಅವರು ಮಂಚದ ಮೇಲೆ ಬಾಗಿ ಬಲಗೈಯಿಂದ ಆ ತಲೆಗೂದಲನ್ನು ತಡವಿದರು.

ಆ ಸ್ಪರ್ಶಕ್ಕೆ ತುಂಗಮ್ಮ ಕಣ್ಣು ತೆರೆದಳು. ಕರಿದಾದ ಮುಖವೊಂದು ತನ್ನ ಮೇಲಿಂದ, ಬಿಳಿಯ ಹಲ್ಲುಗಳನ್ನು ತೋರಿಸುತ್ತ ಮುಗುಳುನಗುತಿತ್ತು. ಕರಿದು-ಬಿಳಿದು ತಲೆಗೂದಲು. ಅಗಲವಾದ ಮುಖ. ಆ ಮುಖದ ಉದ್ದಗಲಕ್ಕೂ, ಮಮತೆ-ಸಹಾನುಭೂತಿ ಎಂದು ಬರೆದಿದ್ದರೇನೊ! ತುಂಗಮ್ಮ ನಿರ್ಭಯಳಾಗಿ ತಾನೂ ಮುಗುಳ್ನಕ್ಕಳು.

"ಹೆದರ್ಕೋಬೇಡ ಮಗಳೆ. ನಿನಗೆ ಇನ್ನೇನೂ ಭಯವಿಲ್ಲ."

ಅದೆಷ್ಟು ಜನಕ್ಕೆ ಅದೇ ಮಾತನ್ನು ಸರಸಮ್ಮ ಹಿಂದೆ ಹೇಳಿದ್ದರೊ! ಆದರೂ ಭಾವನೆಗಳೇ ಇಲ್ಲದ ಯಂತ್ರದ ಸ್ವರವಾಗಿರಲಿಲ್ಲ ಆ ಮಾತು. ಅದು ಸುರಿತ ಗಾಯಕಿಯ ಪುಂಗಿನಾದ.

ತುಂಗಮ್ಮನ ದೃಷ್ಟಿ ಕೊಠಡಿಯ ಸುತ್ತಲೂ ಸಂಚಾರ ಮಾಡಿ, ಕೆಳಗೆ ಮಲಗಿಕೊಂಡು ಪಿಳಿ ಪಿಳಿ ಕಣ್ಣು ಬಿಡುತ್ತ ತನ್ನನ್ನೆ ನೋಡುತಿದ್ದ ಒಂದು ಸುಂದರ ಮುಖದ ಮೇಲೆ ತಂಗಿತು.

ಅದನ್ನು ನೋಡಿದ ಸರಸಮ್ಮನೆಂದರು:

"ಅವಳು ಜಲಜಾ. ಎರಡು ದಿವಸ್ದಿಂದ ಸ್ವಲ್ಪ ಜ್ವರ ಬಂದಿದೆ...."

ಜಲಜ ಮುಗುಳ್ನಕ್ಕಳು. ಕುದಿಯುತಿದ್ದ ತನ್ನ ಹೃದಯದ ಕಿಟಕಿಯನ್ನು ತೆರೆದು ತಣ್ಣನೆಯ ಗಾಳಿಯನ್ನು ಒಳಕ್ಕೆ ಬಿಟ್ಟ ಹಾಗಾಯಿತು ತುಂಗಮ್ಮನಿಗೆ. ಹಸಿದ ಆಕೆಗೆ ಮಧುರ ಸ್ನೇಹದೊಂದು ತುತ್ತನ್ನು ಜಲಜಳ ಮುಗುಳುನಗು ನೀಡಿತ್ತು

ಸರಸಮ್ಮ, ತಾನೂ ಮಂಚದ ಬದಿಯಲ್ಲಿ ಕುಳಿತುಕೊಳ್ಳುತ್ತ ಹೇಳಿದರು:

"ಬಿದ್ದಾಗ ನೋವಾಯ್ತಾ ?"

ತಾನು ಬಿದ್ದಿದ್ದೆ, ಅಲ್ಲವೆ? ತಾನು ಸದಾ ಕಾಲವೂ ಇಲ್ಲಿಯೆ ಈ ಮಂಚದ ಮೇಲೆ ನಿದ್ದೆ ಹೋಗಿರಲಿಲ್ಲ ಹಾಗಾದರೆ, ಅಲ್ಲವೆ?....ತುಂಗಮ್ಮನ ಮೆದುಳಿನ ಪದರುಗಳು ಮತ್ತೆ ಜೀವನಕ್ಕೆ ಪ್ರತಿಕೂಡಿಸಿದುವು....ಸಂಜೆ ಮಾವಳ್ಳಿಯ ಮನೆ ಬಿಟ್ಟು ಬಂದ ಹೊತ್ತಿನಿಂದ ಈವರೆಗೆ. ಅಭಯಧಾಮವನ್ನು ಹುಡುಕಿಕೊಂಡು ಬಂದಿದ್ದೆ ತಾನು. ಅಲ್ಲಿ ಬಾಗಿಲು ಬಡಿಯುತ್ತ ಬವಳಿ ಬಂದು ಬಿದ್ದಿದ್ದೆ....ತನ್ನನ್ನು ಎತ್ತಿಕೊಂಡು ಒಳಕ್ಕೆ ಬಂದು ಅವರು ಅಲ್ಲಿ ಮಲಗಿಸಿರಬೇಕು.

ತನಗೆ ಅಭಯ ದೊರೆತಿತ್ತು.

"ನೋವಾಯ್ತೆ ಬಿದ್ದಾಗ?"

ಮತ್ತೆ ಅದೇಪ್ರಶ್ನೆ. ನೋವಾಯಿತು ತನಗೆ. ಮೈ ಕೈ ನೋಯುತ್ತಿದೆ.

"ಊಂ....ಊಂ...."

ಅದು ನರಳಾಟ. ಗರ್ಭಕ್ಕೇನಾದರೂ ಧಕ್ಕೆ ತಗಲಿರಬಹುದೇ ಎಂಬ ಭಯ ಸರಸಮ್ಮನಿಗೆ. ಆದರೂ ಸಂತವಿಡುವ ನುಡಿ ಸಲೀಸಾಗಿಯೇ ಬಂತು.

"ಅಷ್ಟೇನೂ ನೋವಾಗಿರೊಲ್ಲ. ಆಯಾಸ ಕಳೀಲಿ. ನಾಳೆಗೆ ಸರಿ ಹೋಗ್ತೀಯಾ...."

ನಾಳೆಯ ದಿನ ಸರಿಹೋಗುವ ಆಸೆ....

ನೋವುಗಳಿಗೆಲ್ಲ ಔಷಧಿಯಾಗಿ ಮತ್ತೂ ಮಾತನಾಡಿದರು ಸರಸಮ್ಮ.

"ಹಸಿವಾಗುತ್ತಾ ನಿಂಗೆ?"

ದಿಂಬು ಮೃದುವಾಗಿತ್ತು, ಹಾಸಿಗೆಯೂ ಮೃದು. ಬದುಕಿನ ಗುಂಯಾರವದ ಹಾಗೆ ಮಾತುಗಳೂ ಮೃದುವಾಗಿದ್ದುವು. ನಾಲಿಗೆಯ ತೇವದಿಂದ ತನ್ನ ತುಟಿಗಳನ್ನು ತೀಡಿಕೊಂಡಳು ತುಂಗಮ್ಮ.

"ಒಂದಿಷ್ಟು ಗಂಜಿ ಕುಡಿ, ಹಿತವಾಗಿರುತ್ತೆ...."

"ಹೂಂ...."

ಜಾಗೃತವಾದ ವಿಚಾರಶಕ್ತಿ ತುಂಗಮ್ಮನಿಗೆ ಹೇಳಿತು—ಪ್ರಶ್ನೆಗಳು ಬರಬಹುದಿನ್ನು ಹುಷಾರಾಗಿರು....ಯಾರು ನೀನು? ಎಲ್ಲಿಯವಳು? ಯಾಕೆ ಹೀಗೆ?

ತುಂಗಮ್ಮ ನಿರೀಕ್ಷಿಸುತ್ತಲೇ ಇದ್ದಳು. ಆದರೆ ಯಾರೂ ಪ್ರಶ್ನೆ ಕೇಳಲಿಲ್ಲ.

ಸರಸಮ್ಮ ಕೊಠಡಿಯಿಂದ ಹೊರಹೋದರು. ತನ್ನನ್ನು ಬಿಟ್ಟು ಹೋದರಲ್ಲಾ ಎಂದು ಕ್ಷಣಕಾಲ ಅಳುಕಿ ತುಂಗಮ್ಮ, ಜಲಜಳನ್ನು ದಿಟ್ಟಿಸಿದಳು. ಆರಿಹೋಗಿರಲೇ ಇಲ್ಲ ಆ ಹುಡುಗಿಯ ತುಟಿಗಳ ಮೇಲಿದ್ದ ಮುಗುಳುನಗು.

ಆ ನಗುವಿನ ಬೇಲಿಯೊಳಗಿಂದ ಮಾತು ಮುಖತೋರಿಸಿತು:

"ಹುಡುಗೀರ್ನ ಮಲಗ್ಸೋಕೆ ಹೋದ್ರು ದೊಡ್ಡಮ್ಮ..."

ವಯಸ್ಸಾದ ಆ ಒಳ್ಳೆಯವರು ಹಾಗಾದರೆ ಈ ಹುಡುಗಿಯ ದೊಡ್ಡಮ್ಮ ನಿರಬೇಕು, ಅಲ್ಲವೆ? ಅದೇ ಹೆಸರಿನಿಂದ ಬೇರೆಯೂ ಯಾರೋ ಕರೆದರಲ್ಲ?....ಅನಂತರ ಯೋಚನೆಗಳು ಕಡಿದುಕಡಿದು ಬಂದುವು. ಆ ವಿಚಾರ ಸರಣಿಯಲ್ಲಿ ಕ್ರಮಬದ್ಧತೆಯೇ ಇರಲಿಲ್ಲ....

ಮತ್ತೆ ಆಕೆಯನ್ನು ಜಲಜಳ ಪ್ರಶ್ನೆ ಭೂಮಿಗಿಳಿಸಿತು.

"ನಿಮ್ಮ ಹೆಸರೇನ್ರೀ?"

"ಹೂಂ—?"

"ನಿಮ್ಮ ಹೆಸರು?"

"ತುಂಗಮ್ಮ."

"ಓ"—ಎಂದಳು ಜಲಜಾ. ಆ ಧ್ವನಿಯಲ್ಲಿ ನಿರಾಸೆಯಿತ್ತು. ಆ ಉದ್ಗಾರ ತುಂಗಮ್ಮನಿಗೆ ವಿಚಿತ್ರವೆನಿಸಿತು.

ಯಾಕೆ, ಚೆನ್ನಾಗಿಲ್ವೆ ?—ಎಂಬ ಪ್ರಶ್ನೆಯೇನೋ ಆಕೆಯ ಮನಸ್ಸಿನಲ್ಲಿ ರೂಪುಗೊಂಡಿತು. ಆದರೆ ಅದು ಹೊರಬೀಳಲಿಲ್ಲ.

ಅಷ್ಟರಲ್ಲೆ ಇನ್ನೊಬ್ಬ ಹುಡುಗಿ ಒಳ ಬಂದು ಕೇಳಿದಳು:

"ನಿಮ್ಮ ಹೆಸರೇನೂಂತ ಕೇಳ್ತಾರೆ ದೊಡ್ಡಮ್ಮ."

ಆ ಮಾತಿನ ಅರ್ಥವನ್ನು ಮಥಿಸುತ್ತ ತುಂಗಮ್ಮ ಯೋಚಿಸಿದಳು—ಆ ಹೆಂಗಸು ಈಕೆಗೂ ದೊಡ್ಡಮ್ಮನೇನೊ ಹಾಗಾದರೆ?

"ತುಂಗಮ್ಮ ಕಣೇ."

ಜಲಜ ಉತ್ತರವಿತ್ತಳು, ತುಂಗಮ್ಮನ ಪರವಾಗಿ.

ಬಂದಿದ್ದ ಹುಡುಗಿ ನಕ್ಕು, ಹಿಂದಿರುಗುತ್ತ ಹೇಳಿದಳು:

"ಅಷ್ಟರಲ್ಲೇ ಪರಿಚಯ ಮಾಡ್ಕೊಂಬಿಟ್ಯಲ್ಲೇ!"

ಜಲಜ, ತುಂಗಮ್ಮ ಮಲಗಿದ್ದ ಮಂಚದ ಮಗ್ಗುಲಿಗೆ ಹೊರಳಿಕೊಂಡಳು.

"ನಿಮ್ಮ ಹೆಸರ್ನ ರೆಜಿಸ್ಟರ್‌ನಲ್ಲಿ ಬರ್ಕ್ಕೋತಾರೆ, ಅದಕ್ಕೆ."

ದಪ್ಪಗಿನ ಪುಸ್ತಕದಲ್ಲಿ ಹೆಸರು ಬರೆದುಕೊಳ್ಳುವ ಪದ್ಧತಿ. ತುಂಗಮ್ಮನಿಗೆ ನೆನಪಿತ್ತು—ಆಕೆ ಮೊದಲ ಬಾರಿ ಶಾಲೆಗೆ ಹೋದಾಗ ಹಾಗೆಯೇ ಬರೆದುಕೊಂಡಿದ್ದರು ಹಿಂದೆ.

ಆ ದೊಡ್ಡಮ್ಮ, ತನ್ನ ಹೆಸರಿನ ಹೊರತು ಬೇರೇನನ್ನೂ ಕೇಳಿರಲಿಲ್ಲ. ಆಕೆಯ ಬದಲು, ಈ ಹುಡುಗಿ ಕೇಳುವಳೇನೊ—ಈ ಜಲಜ?

ಜಲಜ ವಾಚಾಳಿಯಾಗಿದ್ದಳು.

"ಈಗ ಬಂದಿದ್ದಳಲ್ಲ-ಗುಜ್ಜಾನೆಮರಿ? ಅವಳ ಹೆಸರು ಸರಸ್ವತೀಂತ."

ಗುಜ್ಜಾನೆಮರಿ ಎಂಬ ಪದ, ತುಂಗಮ್ಮ ನಗುವಂತೆ ಮಾಡಿತು.

"ಹೆಸರು ಸರಸ್ವತೀಂತ.. .ಓದೋಕ್ಮಾತ್ರ ಊಹೂಂ....ಒಂದಕ್ಷರ ಬರೆಯೋಕೆ ಬರಲ್ಲ. ದಡ್ಡೀಂದ್ರೆ ದಡ್ಡಿ...."

ಇದೊಳ್ಳೆಯ ತಯಾಷೆಯಾಗಿತ್ತು. ಇದು ಶಾಲೆಯೇ ಸರಿ! ತಾನು

ಸಾವು-ಬದುಕುಗಳ ತೂಗುಯ್ಯಾಲೆಯಲ್ಲಿ ತೂಗಾಡುತ್ತಾ ಬಸವಳಿದು ಇಲ್ಲಿಗೆ ಬಂದು ಬಿದ್ದಿದ್ದರೆ, ಇಲ್ಲಿ ಇವರೆಲ್ಲ ಓದುವ ಬರೆಯುವ ಮಾತನ್ನಾಡುತಿದ್ದರು!

ಜಲಜಳ ಮಾತಿಗೆ ತಾನೂ ಏನಾದರೂ ಪ್ರತ್ಯುತ್ತರ ನುಡಿಯ ಬೇಕೆಂದು ತೋರಿತು ತುಂಗಮ್ಮನಿಗೆ. ಆದರೆ ಏನನ್ನು?

ಆ ಸಮಸ್ಯೆಯ ಪರಿಹಾರಕ್ಕೆಂದೇ ಜಲಜ, ಉತ್ತರಿಸಲೇ ಬೇಕಾದೊಂದು ಪ್ರಶ್ನೆ ಕೇಳಿದಳು.

"ಏನ್ರಿ, ನಿದ್ದೆ ಬಂತೆ?"

"ಇಲ್ಲ...."

"ಆಯಾಸವೇನೊ?"

"ಹುಂ...."

"ನಾಳೆ ಬೆಳಿಗ್ಗೆ ನಾನು ಎದ್ಬಿಡ್ತೀನಿ. ಎಣ್ಣೆ ನೀರಿನ ಸ್ನಾನಮಾಡಿಸ್ತೀನಿ ನಿಮಗೆ."

ತುಂಗಮ್ಮ ಮುಗುಳ್ನಕ್ಕಳು. ಅಂತಹ ಮಾತುಗಳನ್ನು ಆಕೆ ಕೇಳದೆ ಎಷ್ಟೋ ಕಾಲವಾಗಿತ್ತು.

ಅಭಯಧಾಮದವರೆದುರು ಚೆನ್ನಾಗಿ ಅತ್ತು, ಅಳಲಿನ ಕೊಡವನ್ನು ಬರಿದುಗೊಳಿಸಿ, ಅವರ ಪಾದ ಹಿಡಿದು, ರಕ್ಷಣೆಯ ಯಾಚನೆ ಮಾಡಬೇಕೆಂದು ಯೋಚಿಸುತ್ತ ಬಂದಿದ್ದಳು ತುಂಗಮ್ಮ. ಆದರೆ ಇಲ್ಲಿ ಪ್ರತಿಯೊಂದೂ ವ್ಯತಿರಿಕ್ತವಾಗಿತ್ತು.

ನಿಟ್ಟುಸಿರು ಬಿಟ್ಟು ತುಂಗಮ್ಮ ಪ್ರಯಾಸಪಟ್ಟು ಎದ್ದು ಕುಳಿತಳು.

"ಯಾಕೆ ಎದ್ದಿರಿ?"

—ಎಂದಳು ಜಲಜ; ಆ ಧ್ವನಿಯಲ್ಲಿ ಕಾತರವಿತ್ತು.

"ಸುಮ್ಮನೆ ಎದ್ದೆ."

"ಏಳ್ಬೇಡ. ಮಲಕ್ಕೊಳ್ಳಿ—"

—ಎನ್ನುತ್ತಲೇ ಸರಸಮ್ಮ ಒಳ ಬಂದರು. ಅವರ ಹಿಂದೆಯೇ ಸಾವಿತ್ರಿ, ಒಂದು ಹಾಸಿಗೆಯ ಸುರುಳಿಯನ್ನೆತ್ತಿಕೊಂಡು ಬಂದಳು. ಅದನ್ನು ಆಕೆ, ಜಲಜಳಿಗಿಂತ ಸ್ವಲ್ಪ ದೂರದಲ್ಲಿ ಗೋಡೆಯ ಬದಿಯಲ್ಲಿ ಬಿಡಿಸಿ ಹಾಸಿದಳು.

ಸರಸಮ್ಮ ಒಂದು ನಿಮಿಷ ಯೋಚಿಸಿದರು: ಜ್ವರಪೀಡಿತಳಾದ ಜಲ
ಜಳ ಸಾನ್ನಿಧ್ಯ ಒಂದೆಡೆ, ಮಂಚದ ಎತ್ತರ ಇನ್ನೊಂದೆಡೆ. ಆ ಗರ್ಭಿಣ
ಎಲ್ಲಿ ಮಲಗಬೇಕು?

ತಾವೇ ಇತ್ಯರ್ಥ ಮಾಡಲಾರದವರಂತೆ ಅವರು ಕೇಳಿದರು:

"ಎಲ್ಲಿ ಮಲಕ್ಕೊಳ್ತೀಯಾ ತುಂಗಮ್ಮ?"

ಮತ್ತೆ ಆ ಹಾಸಿಗೆಯ ಮೇಲೆಯೇ ಒರಗಿಕೊಳ್ಳಬೇಕೆಂದು ಯೋಚಿಸ
ತಿದ್ದ ತುಂಗಮ್ಮ, "ಹೂಂ?" ಎಂದಳು.

"ನನ್ನ ಪಕ್ಕದಲ್ಲೇ ಇರಲಿ ದೊಡ್ಡಮ್ಮ...."

ಛಲ ಹಿಡಿದು ಮಾತನಾಡುವ ಮಗುವಿನ ವೈಖರಿ. ತಮ್ಮ ಸಮಸ್ಯೆ
ಬಗೆಹರಿಯಿತೆಂಬಂತೆ ಸರಸಮ್ಮ ನಕ್ಕರು. ತುಂಗಮ್ಮನೂ ಸಣ್ಣ
ನಕ್ಕಳು.

ಆಕೆ ಮೆಲ್ಲನೆದ್ದು, ಆ ಹಾಸಿಗೆಯ ಬಳಿಗೆ ನಡೆದು ಹೋಗಿ, ಅದ
ಮೇಲೆ ಕುಳಿತುಕೊಂಡಳು.

ಆಕೆಗೆದುರಾಗಿ ಸರಸಮ್ಮ ಜಲಜಳ ಹಾಸಿಗೆಯ ಮೇಲೆಯೇ ಜಾ
ಮಾಡಿ ಕುಳಿತರು. ಆ ತೀಕ್ಷ್ಣ ದೃಷ್ಟಿ ತನ್ನನ್ನು ಇರಿದು ಪರೀಕ್ಷಿಸುತ್ತಿದೆಯೊ
ಏನೋ ಎಂದು ಅಂಜುತ್ತ ಅಂಜುತ್ತ ತುಂಗಮ್ಮ ಅವರನ್ನು ನೋಡಿದಳು
ಹಾಗೇನೂ ಇರಲಿಲ್ಲ. ಆ ದೃಷ್ಟಿ ಶಾಂತವಾಗಿಯೇ ಇತ್ತು. ಮೊದಲ ಬಾ
ಆ ಕೊಠಡಿಯಲ್ಲಿ ತಾನು ಕಣ್ಣು ತೆರೆದಾಗ ಇದ್ದಂತೆಯೇ.

ಸರಸಮ್ಮ, ಉದ್ದೇಶಪೂರ್ವಕವಾಗಿಯೇ ದೃಷ್ಟಿಯನ್ನು ಬದಲಿ
ಜಲಜಳನ್ನು ನೋಡಿದರು. ತಮ್ಮ ಅಂಗೈಯಿಂದ ಆಕೆಯ ಹಣೆಯನ
ಮುಟ್ಟಿದರು. ಮೈ ಬಿಸಿಯಾಗಿರಲಿಲ್ಲ.

"ಇಳಿದ್ಹೋಗಿದೆಯಲ್ಲೇ ಜ್ವರ."

"ಹೂಂ ದೊಡ್ಡಮ್ಮ. ನೀವು ಪಡೋ ಕಷ್ಟ ನೋಡಿ, ಅಯ್ಯೊ
ಪಾಪ-ಅನಿಸ್ತೇನೋ ಆ ಜ್ವರಕ್ಕೆ!"

"ಅಲ್ವೆ!"

ಅವರ ದೃಷ್ಟಿ ಮಂಚದ ಕೆಳಗಿದ್ದ ಔಷಧಿ ಶೀಷೆಯತ್ತ ಹೋಯಿತ
ಆ ಶೀಷೆಯಲ್ಲಿದ್ದುದು, ರಾತ್ರಿಯ ಒಂದೇ ಗುಟುಕು-ಕೆಂಪು ಔಷಧಿ.

ಆ ದೃಷ್ಟಿಯ ಓಡಾಟವನ್ನು ಕಂಡ ಜಲಜ ತನ್ನ ತುಂಟ ಸ್ವರದಲ್ಲೆ ಅಂದಳು :

"ದೊಡ್ಡಮ್ಮ, ಅಯ್ಯೊ, ಆ ಔಷಧಿ ಬೇಡಿ. ನೀವೇ ಅಂದ್ರಲ್ಲಾ ಜ್ವರ ಬಿಟ್ಹೋಯ್ತೂಂತ? ಬೇಡಿ ದೊಡ್ಡಮ್ಮ...."

ಆದರೆ ಸರಸಮ್ಮ ಪುಟ್ಟಗ್ಲಾಸಿಗೆ ಔಷಧಿ ಬಗ್ಗಿಸಿ ಜಲಜಳ ಬಾಯಿಗೆ ಹಿಡಿದರು.

"ಅಯ್ಯೊ, ಬೇಡಿ ನಂಗೆ!"

"ಬಾಯ್ಮುಚ್ಚು, ಹೊಡೀತೀನಿ ನೋಡು!"

ಜಲಜ ನಗುತ್ತಲೆ, ಪ್ರತಿಭಟಿಸುತ್ತಲೆ, ಔಷಧಿಯ ಗುಟುಕುನುಂಗಿದಳು.

"ಮಲಕೋ ಇನ್ನು ಮಾತಾಡ್ಬೇಡ್ದು...."

"ಊಂ....ನಂಗ್ನಿದ್ದೆ ಬರಲ್ಲ...."

"ಯಾಕೆ ಬರಲ್ವೊ ನೋಡ್ತೀನಿ....ಮುಚ್ಕೊಳ್ಳಿ ಕಣ್ಣ...."

ತುಂಗಮ್ಮನ ದೃಷ್ಟಿಯಲ್ಲಿದು ತಾಯಿ-ಮಕ್ಕಳ ಜಗಳವಾಗಿತ್ತು. ಅದರಲ್ಲಿ ಸಂದೇಹವೇ ಇರಲಿಲ್ಲ. ದೊಡ್ಡಮ್ಮನ ಪ್ರೀತಿಗೆ ಪಾತ್ರಳಾದ ಜಲಜ ಎಷ್ಟೊಂದು ಸುಖಿಯಾಗಿರಬೇಡ!

ಆಗಲೆ, ಗಂಜಿಯ ತಟ್ಟೆಯೊಡನೆ ಸಾವಿತ್ರಿ ಬಂದಳು. ಅದನ್ನಾಕೆ ತುಂಗಮ್ಮನ ಎದುರಲ್ಲಿರಿಸಿದಳು. ಜಲಜ ಕೈ ತೊಳೆಯಲೆಂದು ಇಟ್ಟಿದ್ದ ಇನ್ನೊಂದು ತಟ್ಟೆಯಲ್ಲೀ ತುಂಗಮ್ಮನೂ ಕೈ ತೊಳೆದಳು.

"ತಗೋ ಮಗಳೇ, ಗಂಜಿ ಕುಡಿ."

ಆಕೆಯಿನ್ನು ಆ ಗಂಜಿ ಕುಡಿಯಬೇಕು. ಅವರು ಯಾವ ಜಾತಿಯ ಜನವೊ?....

ತುಂಗಮ್ಮ ಗಂಜಿಯನ್ನೆ ನೋಡಿದಳು. ಆ ಬಿಳಿಯ ಗಂಜಿಯಲ್ಲೆ ಒಂದೆಡೆ ಮೂಗುಬಟ್ಟಿನ ಹಾಗೆ ಕೆಂಪು ಉಪ್ಪಿನ ಕಾಯಿ ಕುಳಿತಿತ್ತು. ಅದನ್ನು ತುಂಗಮ್ಮ ತೋರು ಬೆರಳಿನಿಂದ ಮುಟ್ಟಿದಳು. ಗಂಜಿನೀರಲ್ಲಿ ಚೆಲ್ಲಾ ಪಿಲ್ಲಿಯಾಗಿ ಮುಳುಗತೊಡಗಿತು ಮೂಗುಬಟ್ಟು.

....ಯಾವ ಜನವಾದರೇನು? ಇನ್ನೆಲ್ಲ ಅಂಥ ಪ್ರಶ್ನೆಗೆ ಅವಕಾಶ ಏದೆಯೆ?

"ಸುಡುತ್ತೀನಮ್ಮ?"

"ಇಲ್ಲ...."

"ನಿಧಾನವಾಗಿ ಕುಡಿ. ತಟ್ಟೇನ ಕೈಲಿಟ್ಕೊಂಡು ಕುಡೀಮ್ಮಾ...."

....ಹಾಗೆ ಗಂಜಿ ಕುಡಿದ ಮೇಲೆ ತುಂಗಮ್ಮನಿಗೆ ಹಾಯೆನಿಸಿತು.

ಆ 'ದೊಡ್ಡಮ್ಮ' ಆಗಲೂ ಏನನ್ನೂ ಕೇಳಲಿಲ್ಲ. ತುಂಗಮ್ಮನ ಕಣ್ಣೆದುರು ಶೂನ್ಯ ಅಣಕಿಸುತ್ತ ನಿಂತಿತ್ತು ಆ ಸಂಜೆಯ ವರೆಗೂ. ಈಗ, ಮಾನವ ಪ್ರೇಮದಿಂದ ಮೆಲ್ಲ ಮೆಲ್ಲನೆ ತುಂಬಿಕೊಳ್ಳುತಿತ್ತು ಆ ಶೂನ್ಯ. ಇದು ಸಾಧ್ಯವೆಂದು ಸಂಭವನೀಯವೆಂದು ಎಂದೂ ಭಾವಿಸಿರಲಿಲ್ಲ ತುಂಗಮ್ಮ—ಕನಸಿನಲ್ಲಿಯೂ.

ಸರಸಮ್ಮ ಎದ್ದು ತನ್ನ ಹಾಸಿಗೆ ಸರಿಪಡಿಸುತ್ತಾ ಹೇಳಿದರು:

"ಇನ್ನು ಮಲಗಿಕೋ ತುಂಗಮ್ಮ. ಆಯಾಸವಾಗಿದೆ ನಿನಗೆ. ದೇವ ರಿದ್ದಾನೆ-ಎಲ್ಲಾ ಸರಿಹೋಗುತ್ತೆ. ಮಲಕ್ಕೋಮ್ಮಾ...."

ಹಾಗೆ ಹೇಳಿ ಅವರು, ಆಗಲೆ ಮಲಗಿ ಕೊಂಡಿದ್ದ ಹುಡುಗಿಯರ ನ್ನೊಮ್ಮೆ ನೋಡಿಬರಲೆಂದು ಹೊರ ಹೋದರು.

ತನ್ನನ್ನು ಅಪರಾಧಿನಿಯ ಹಾಗೆ ಅವರು ಕಂಡಿರಲಿಲ್ಲ. ಕ್ಷಮಿಸುವ ಮಾತು ಬಂದಿರಲಿಲ್ಲ ಇಲ್ಲಿ. ಅಭಯ ಕೇಳಲು ಬಂದಾಗ, ಅಂಜುತ್ತ ಅಂಜುತ್ತ ಏನೇನೋ ಭಾವಿಸುತ್ತ, ಆಕೆ ಬಂದಿದ್ದಳು. ಆದರೆ ಹಾಗೆ ಅಂಜುವ ಅಗತ್ಯವಿರಲಿಲ್ಲ ಅಲ್ಲವೆ?

ತಾರಸಿಯ ಛಾವಣಿ ನೋಡುತ್ತ ತುಂಗಮ್ಮ ನೀಳವಾಗಿ ನಿಟ್ಟುಸಿರು ಬಿಟ್ಟಳು. ಬಿಗಿಯಾಗಿದ್ದ ಮೈಯ ನರನಾಡಿಗಳು ಸಡಿಲಿದುವು.

....ಬಚ್ಚಲು ಮನೆಗೆ ಹೋಗಿ ಬಂದರಾಗುತಿತ್ತು ಎನಿಸಿತು ಆಕೆಗೆ.

ಅವಳ ಮನಸಿನಲ್ಲಿದ್ದುದನ್ನು ಊಹಿಸಿದವಳಂತೆ ಜಲಜ ಕೇಳಿ ದಳು:

"ಹೊರಗೆ ಹೋಗ್ಬೇಕಾ ತುಂಗಕ್ಕ?"

ತುಂಗಕ್ಕ! ತನ್ನನ್ನು ಅಕ್ಕನೆಂದು ಕರೆದಳಲ್ಲವೆ ಆಕೆ?

ತುಂಗಮ್ಮ ಹೌದೆಂದು ತಲೆಯಾಡಿಸಿದಳು.

"ದೊಡ್ಡಮ್ಮ ಬಂದ್ಬಿಡ್ತಾರೆ. ಕರಕೊಂಡು ಹೋಗ್ತಾರೆ ಆ ಮೇಲೆ."

ದೊಡ್ಡಮ್ಮನ ವಿಷಯ ತಿಳಿಯಬೇಕೆಂಬ ಆಸೆಯಾಯಿತು ತುಂಗಮ್ಮ ನಿಗೆ. ಇಲ್ಲಿ, ಯಾರು ತನ್ನ ಜವಾಬ್ದಾರಿಯನ್ನು ಹೊತ್ತವರು ?

"ಅವರೇನಾ ಇಲ್ಲಿ ನೋಡ್ಕೊಳ್ಳೋರು ?"

ತನ್ನ ಸ್ವರವನ್ನು ಕೇಳಿ ತುಂಗಮ್ಮನಿಗೇ ಆಶ್ಚರ್ಯವಾಯಿತು. ತಾನೇ ಆ ಪ್ರಶ್ನೆಯನ್ನು ಕೇಳಿದ್ದಲ್ಲವೆ ?

ಜಲಜ ಮುಗುಳ್ನಕ್ಕಳು.

"ಹೂಂ. ಅವರೇ. ಒಳ್ಳೆಯವರು. ಅಲ್ವಾ ?"

ಹಾಗೆ ತಾನು ಕೇಳಿದ್ದು ತಪ್ಪಾಯಿತೆಂದು ಲಜ್ಜೆಯಾಯಿತು ತುಂಗಮ್ಮನಿಗೆ.

ಮತ್ತೆರಡು ನಿಮಿಷಗಳಲ್ಲಿ ಸರಸಮ್ಮ ಬಂದರು. ಬರುತ್ತಲೇ ಅವರೆಂದರು :

"ಮರೆತು ಹಾಗೇ ಹೊರಟ್ಹೋದೆ. ಬಾ ತುಂಗಮ್ಮ. ಕೈ ಕಾಲು ತೊಳಕೊಂಡು ಬರುವೆಯಂತೆ, ಬಾ."

## ೩

"ಚಿಕ್ ಚಿಕ್ ಚಿಕ್ ಚಿಲಿಪಿಲಿ ಚಿಲಿ...."

ಪುನಃ ಪುನಃ ಅದೇ ಸದ್ದು.

ಯಾರೋ 'ತುಂಗಾ ತುಂಗಾ' ಎಂದು ಕರೆದಂತಾಯಿತೆಂದು ತುಂಗಮ್ಮ ಮೆಲ್ಲನೆ ಕಣ್ಣು ತೆರೆದಳು. ಕೊಠಡಿಯ ತೆರೆದ ಕಿಟಕಿಯ ಎಡೆಯಿಂದ ಮುಂಬೆಳಗು ತೂರಿ ಬರುತ್ತಿತ್ತು. ಕತ್ತಲಿನ ಆಳವಾದ ಗುಹೆಯೊಳಗೆ ಇಳಿದು ಹೋಗಿದ್ದ ಆಕೆಯ ಮನಸ್ಸು ಮತ್ತೆ ಮೇಲೆ ಬಂದು ಸುತ್ತಲಿನ ವಾತಾವರಣವನ್ನು ಮೂಸಿ ನೋಡಿತು.

ಹೊಸ ಜಾಗ, ಹೊಸ ಆವರಣ....

ಯಾರು ತನ್ನನ್ನು ಕರೆದವರು 'ತುಂಗಾ' ಎಂದು?

—ಬಲು ಹಿಂದೆ ಬಾಲ್ಯದಲ್ಲಿ ತಾಯಿ ಹಾಗೆ ಕರೆಯುತ್ತಿದ್ದಳು. ಆದರೆ ಆ ಸ್ವರ ಕೋಮಲವಾಗಿರಲಿಲ್ಲ; ಜೀವನದ ತಾಳಕ್ಕೆ ಮೇಳೈಸದೆ ಅದು ಕರ್ಕಶವಾಗಿತ್ತು....ತನ್ನನ್ನು ತೋಳ ತೆಕ್ಕೆಯಲ್ಲಿ ಬಿಗಿದುಕೊಂಡಿದ್ದಾಗ ಆತ 'ತುಂಗಾ ತುಂಗಾ' ಎಂದು ಮದೋಚ್ಚಾರಮಾಡಿದ್ದ ಮೃದುವಾಗಿ. ಆಗ ಎಷ್ಟೊಂದು ಇಂಪಾಗಿ ಕೇಳಿತ್ತು ಆ ಧ್ವನಿ! ಆದರೆ ಆ ಇನಿಧ್ವನಿಯೇ ಆಕೆಯ ಬಾಳಿನ ಅಪಸ್ವರವಾಗಿತ್ತು. ಈಗ ಆ ಕರೆಯ ನೆನಪಾದಾಗ ಮುಳ್ಳಾಗುತ್ತಿತ್ತು ಮೈ ಕೂದಲು.

ಆದರೂ ಯಾರೋ ಕರೆದ ಹಾಗಾಯಿತಲ್ಲವೆ?

ರಾತ್ರೆ ತಾನು ನಿದ್ದೆ ಹೋದುದಕ್ಕೆ ಮುಂಚೆ ತನ್ನ ಮುಂಗುರುಳು ನೇವರಿಸಿದ್ದ ಆ ಹೆಂಗಸು, ಅಭಯಧಾಮದ ಹಿರಿಯೆ?....

ತುಂಗಮ್ಮ ಆ ಮಬ್ಬು ಬೆಳಕಿನಲ್ಲಿ ಕೊಠಡಿಯನ್ನು ನೋಡಿದಳು. ಮಂಚ ಖಾಲಿಯಾಗಿತ್ತು. ಹಾಸಿಗೆಯನ್ನು ಸುರುಳಿ ಸುತ್ತಿದ್ದರು.

ಹಾಗಾದರೆ ಅವರು ಆಗಲೆ ಎದ್ದರೆ?

ಪಕ್ಕದ ಹಾಸಿಗೆ....ಜಲಜ....ತನ್ನೆಡೆಗೆ ಮುಖ ಮಾಡಿ ಮಲಗಿದ್ದಾಳೆ. ಕಣ್ಣುಗಳು ಮುಚ್ಚಿಕೊಂಡಿದ್ದರೂ ತುಟಿಗಳು ಅರೆತೆರೆದು ನಗುತ್ತಿವೆ.

ಮುಂಜಾವದ ಸವಿಗನಸು ಬೀಳುತ್ತಿದೆಯೇನೊ! ನಿದ್ದೆ ಹೋಗಿರುವ ಆ ಹುಡುಗಿಯಂತೂ ತನ್ನನ್ನು ಖಂಡಿತ ಕರೆಯ ಲಾರಳು.

ಮತ್ತೆ ಆ ಸ್ವರ.

"ಚಿಕ್ ಚಿಕ್ ಚಿಕ್ ಚಲಿಪಿಲಿ ಚ ...."

ಓ! ಗುಬ್ಬಚ್ಚಿ ಕಿಟಕಿಯ ನಡು ದಂಡೆಯ ಮೇಲೆ ಕುಳಿತು ಕೂಗುತ್ತಿದೆ. ಕುಪ್ಪಳಿಸುತ್ತ ಮೈ ಅಲುಗಿಸುತ್ತ ಅದು ಕೂಗುವ ವೈಖರಿಯೊ!

ಕತ್ತಿನಲ್ಲಿ ಕಪ್ಪು ಮಚ್ಚೆ. ಅದು ಗಂಡು ಗುಬ್ಬಚ್ಚಿ. ತುಂಗಮ್ಮ ಅದನ್ನು ಬಲ್ಲಳು. ಆದರೆ ಆ ಗುಬ್ಬಚ್ಚಿ ಕೂಗಿ ಕರೆಯುತ್ತಿರುವುದು ಯಾರನ್ನು? ಎಲ್ಲಿ ಅದರ ಸಂಗಡಿಗ ಹೆಣ್ಣು ಹಕ್ಕಿ?

....ಮರದ ಮೋಪಾದ ಆರು ತೊಲೆಗಳ ಮೇಲೆ ಗಾರೆಯ ತಾರಸಿ ನಿಂತಿತ್ತು. ಒಂದು ತೊಲೆಗೆ ಆರಡಿಗಳ ಅಂತರದಲ್ಲಿ ಎರಡು ಮೊಳೆ ಹೊಡೆದಿದ್ದರು—ದಾರ ಕಟ್ಟಿ ಸೀರೆಯೊಣಗಿಸುವುದಕ್ಕೆಂದೋ ಏನೋ. ಆ ಒಂದು ಮೊಳೆಯ ಮೇಲೆ ಮುದುಡಿ ಕುಳಿತಿತ್ತು. ಹೆಣ್ಣು ಗುಬ್ಬಚ್ಚಿ. ಅದರ ಕತ್ತಿನಲ್ಲಿ ಕರಿಯ ಮಚ್ಚೆಯಿಲ್ಲ. ಬದಲು ಮೈಗಾತ್ರ ಬಲುದೊಡ್ಡದೇ....

ತುಮಕೂರಿನಲ್ಲಿ—ಹೌದು ಅಲ್ಲೇ—ಹಿಂದೆ ತಮ್ಮ ಪುಟ್ಟ ಮನೆಯಲ್ಲಿ ಗುಬ್ಬಚ್ಚಿಗಳು ಗೂಡು ಕಟ್ಟಿದುದನ್ನು ತುಂಗಮ್ಮ ಕಂಡಿದ್ದಳು. ಹೆಣ್ಣು ಗುಬ್ಬಚ್ಚಿ ತಾಯಿಯಾಗುವ ಹೊತ್ತಿಗೆ ಗಂಡು ಗುಬ್ಬಚ್ಚಿ ಅದರ ಸೇವೆ ಸಂರಕ್ಷಣೆ ಮಾಡುವುದನ್ನು ಕಂಡಿದ್ದಳು.

ಗುಬ್ಬಚ್ಚಿಯ ತಾಯ್ತನ....

ಪ್ರಿಯಕರವಲ್ಲದ ಯೋಚನೆಯನ್ನು ದೂರಸರಿಸಲೆಂದು ತುಂಗಮ್ಮ ಪಕ್ಕಕ್ಕೆ ಹೊರಳಿಕೊಂಡಳು.

ಗಂಡು ಗುಬ್ಬಚ್ಚಿ ಕೂಗುತ್ತಲೇ ಇತ್ತು:

"ಚಿಕ್ ಚಿಕ್ ಚಿಕ್ ಚಿಲಿಪಿಲಿ ಚಿಲಿ...."

'ತುಂಗಾ' ಎಂದು ಯಾರೂ ಕರೆದಿರಲಿಲ್ಲ. ಹಾಗೆಂದು ಆಕೆ ಭ್ರಮಿಸಿ ಕೊಂಡಿದ್ದಳು, ಅಷ್ಟೆ.

ಭುರ್-ಸದ್ದು. ಆ ಬಳಿಕ ಎರಡು ಸ್ವರಗಳು. ಕಿಟಕಿಯ ದಂಡೆಯ

ಮೇಲೆ ಕ್ಷಣಕಾಲ ಎರಡು ಹಕ್ಕಿಗಳೂ ಜತೆಯಾಗಿಯೇ ಕುಳಿತುವೇನೋ....
ಕೊಕ್ಕಿಗೆ ಕೊಕ್ಕು ತಗಲಿಸಿ ಮುದ್ದಿಟ್ಟುವೇನೋ....

ಆ ಮಾತುಕತೆ....

"ಹೊರಗೆ ಚಳಿ....ಆ ಹಟ್ಟಿಯ ಸೂರಿನಲ್ಲಿ ಹೊತ್ತು ಕಳೆವೆ...."

"ಹೂಂ....ನಾನು ಒಬ್ಬಳೇ ಇಲ್ಲಿ—"

"ನಿನಗೇನಂತೆ. ಕೊಠಡಿ ಬೆಚ್ಚಗಿದೆ. ಜನರೂ ಒಳ್ಳೆಯವರು."

"ಬಹಳ ದಿನ ಹೀಗೇ ಇರೋಕಾಗಲ್ಲ. ಅವರು ರಾತ್ರಿ ಎದ್ದು ದೀಪ ಉರಿಸಿದಾಗಲೆಲ್ಲಾ ಭಯವಾಗತ್ತೆ."

"ಇನ್ನೆರಡೇ ದಿನ ಚಿನ್ನ....ಸಿದ್ಧವಾಗ್ತಾ ಬಂತು ಗೂಡು."

"ಹೂಂ...."

"ಇಲ್ನೋಡೆ...."

"ಎದ್ಬಿಡ್ತಾರೆ ಆ ಜನ....ಹೊರಕ್ಕೆ ಹಾರಿ ಹೋಗೋಣ...."

ಹಕ್ಕಿಗಳ ಅರ್ಥವಾಗದ ಭಾಷೆಯನ್ನು ಹಾಗೆ ಕಲ್ಪಿಸಿಕೊಂಡ ತುಂಗಮ್ಮ ನಸುನಕ್ಕಳು. ಆದರೆ ಹಾಗೆ ನಕ್ಕಾಗ ಆಕೆಯ ಮನಸ್ಸಿಗೆ ನೋವಾಯಿತು.

ಹೃದಯದ ನೆಮ್ಮದಿ ಕೆಡಿಸಿಕೊಂಡು ತುಂಗಮ್ಮ ಮಗ್ಗುಲು ಮಗುಚಿದಳು. ಹಾಗೆ ಮಾಡಿದಾಗ ಆ ಕಿಟಕಿ ಮತ್ತೆ ಆಕೆಯ ದೃಷ್ಟಿಗೆ ಬಿತ್ತು. ಹಕ್ಕಿಗಳು ಅಲ್ಲಿರಲಿಲ್ಲ. ಹಾರಿ ಹೋಗಿದ್ದುವು.

ತನಗಾದರೋ ಯಾರೂ ಇಲ್ಲ. 'ತುಂಗಾ' ಎಂದು ಕರೆವೆಬ್ಬಿಸುವ ಇನಿಯನಿಲ್ಲ. ಹಾರಿ ಹೋಗಲು ರೆಕ್ಕೆಗಳಿಲ್ಲ ತನಗೆ. ಹೋದರೂ, ಇರಲು ಗೂಡಿಲ್ಲ. ತಾನು ಅಸಹಾಯಳಾದ ಹೆಣ್ಣು.

ಆ ಅಭಿಪ್ರಾಯವನ್ನು ಅಲ್ಲಗಳೆಯುವ ಹಾಗೆ ಜಲಜಳ ಸ್ವರ ಬಂತು:

"ತುಂಗಕ್ಕಾ, ಎಚ್ಚರವಾಯ್ತೆ ತುಂಗಕ್ಕಾ...."

ಯೋಚನೆಯ ಮತ್ತೊಂದು ಪುಟವನ್ನು ಮಗುಚಿ, "ಹೂಂ" ಎಂದಳು ತುಂಗಮ್ಮ, ತಾನೂ ಜಲಜಳ ಕಡೆಗೆ ಮಗುಚಿಕೊಳ್ಳುತ್ತಾ.

ಬೆಳಕು ಹೊಸಲಾಗಿ ಬರತೊಡಗಿತು ಕಿಟಕಿಯ ಎಡೆಯಿಂದ. ರಾತ್ರೆ ಹೊತ್ತು ಆಕೆಯನ್ನು ಸರಿಯಾಗಿ ಕಂಡೇ ಇರಲಿಲ್ಲ ತುಂಗಮ್ಮ. ಎಷ್ಟೊಂದು

ಸುಂದರಿ ಜಲಜ! ಯಾವಶಿಲ್ಪಿ ಯಾವ ರಸಘಳಿಗೆಯಲ್ಲಿ ಕಡೆದನೊ ಆಕೆಯನ್ನು! ಬಿಲ್ಲ ಹುಬ್ಬು, ಪುಟ್ಟ ಚಿಗರೆಗಣ್ಣುಗಳು, ಮಾಟವಾದ ಮೂಗು, ಶಾಂತವಾಗಿ ನಿಶ್ಚಲವಾಗಿದ್ದ ಎಳೆಯ ತುಟಿಗಳು....

"ಜ್ವರ ಹೇಗಿದೆ ಜಲಜ?"

"ಪರವಾಗಿಲ್ಲ ನೀವು! ನೀವು ಹೇಗಿದೀರಾಂತ ಕೇಳೋಣಾಂತಿದ್ರೆ, ನನ್ನನ್ನೇ ಆ ಪ್ರಶ್ನೆ ಕೇಳ್ತೀರಲ್ಲ!"

"ನನಗೇನಾಗಿದೆ? ಚೆನ್ನಾಗಿಯೇ ಇದೀನಿ."

"ನನಗೆ ಮಾತ್ರ ಏನಾದರೂ ಆಗಿತ್ತೇನೊ!"

"ಜ್ವರ?"

"ನೀವು ನಿನ್ನೆ ಬಂದ್ಹೊಡ್ಲೆ ಹೊರಟ್ಹೋಯ್ತು. ಈಗ್ನೋಡಿ, ಈ ಮಗ್ಗುಲು ಹಾಸಿಗೆಯೆಲ್ಲಾ ಒದ್ದೆ. ಹ್ಯಾಗೆ ಬೆವತಿದೇಂತಾ!"

"ಬೆವತರೆ ಒಳ್ಳೇದು."

"ಮೈಕೈ ನೋಯುತ್ತೆ ಅಲ್ವೆ ನಿಮಗೆ? ನಿನ್ನೇನೆ ಹೇಳಿದ್ನಲ್ಲಾ ಚೆನ್ನಾಗಿ ನಿಮಗೆ ಸ್ನಾನ ಮಾಡಿಸ್ತೀನಿ ಅಂತ."

"ನೀವೇಳ್ಕೊಡದು ಜಲಜ. ನಿಮ್ಮ ದೊಡ್ಡಮ್ಮ ಬಯ್ತಾರೆ."

ಜಲಜ ಗೊಳ್ಳೆಂದು ನಕ್ಕಳು. ತಮಾಷೆಯಾದುದೇನನ್ನೊ ಕಂಡು ಕೇಳಿದ ಎಳೆಯ ಮಗುವಿನ ಹಾಗೆ ಹೊದಿಕೆಯೊಳಗೆ ಕಾಲು ಕುಣಿಸಿ ನಕ್ಕಳು.

ತುಂಗಮ್ಮನಿಗೆ ಪೆಚ್ಚು ಪೆಚ್ಚಾಯಿತು.

"ಯಾಕೆ? ಯಾಕ್ನಗ್ತೀರಾ? ನಿಮ್ಮ ದೊಡ್ಡಮ್ಮ ಬಯ್ಯಲ್ವೇನು?"

ಮತ್ತಷ್ಟು ಗಟ್ಟಿಯಾಗಿ ಜಲಜ ನಕ್ಕಳು-ಖೋ ಖೋ ಎಂದು.

ತುಂಗಮ್ಮನ ಮುಖ ಸಪ್ಪಗಾಯಿತು. ಆಡಬಾರದ್ದೇನನ್ನೊ ತಾನು ಆಡಲಿಲ್ಲ ಅಲ್ಲವೆ?

"ಯಾಕೆ ಜಲಜ?"

ಪದ ಪದಕ್ಕೊ ನಗುತ್ತ ನಗುತ್ತ ತಡೆ ತಡೆದು ಜಲಜ ಹೇಳಿದಳು:

"ಅಲ್ರೀ, ಅವರು ನನ್ನ ದೊಡ್ಡಮ್ಮಾಂತ ತಿಳಕೊಂಡ್ರೇನು? ನಿಮ್ಮ ದೊಡ್ಡಮ್ಮ ಅಲ್ವೇನು ಹಾಗಾದರೆ?"

"ಅಂದರೆ ?"

"ಅಯ್ಯೋ ರಾಮ! ಅವರು ಮೇಟ್ರನ್ ಕಣ್ರೀ....ನಾವೆಲ್ರೂ ದೊಡ್ಡಮ್ಮಾಂತಲೇ ಕೂಗೋದು ಅವರ್ನ."

"ಓ!"

"ನೀವೊಳ್ಳೇ ತುಂಗಕ್ಕ."

"ನನಗೆ ಹ್ಯಾಗ್ರೀ ಗೊತ್ತಾಗ್ಬೇಕು ?"

"ಅದೂ ಸರಿಯೆ! ಅಲ್ಲ, ಸಾವಿತ್ರಿ-ಲಲಿತಾ-ಸರಸ್ವತಿ-ಜಲಜ-ತುಂಗಮ್ಮ, ಯಾರಾದ್ರೂ ಅಷ್ಟೇ ಕಣ್ರಿ.....ನಮಗೆಲ್ಲರಿಗೂ ಅವರು ದೊಡ್ಡಮ್ಮ."

"ಓ....ಈಗ ಅರ್ಥವಾಯ್ತು...."

"ಅಬ್ಬ! ಅರ್ಥವಾಯ್ತಲ್ಲಾ ಈಗಲಾದ್ರೂ! ನಿಜವಾಗ಼್ೂ ಬುದ್ಧಿವಂತರು ಕಣ್ರೀ ನೀವು!"

ಜಲಜಳ ಆ ಧ್ವನಿಯಲ್ಲಿ ಮೃದು ಹಾಸ್ಯವಿತ್ತು. ಅಣಕಿಸುವ ಉಪಹಾಸದ ಧ್ವನಿ ಒಂದು ಕ್ಷಣ ತುಂಗಮ್ಮನಿಗೆ ಇರುವೆ ಕುಟುಕಿದ ಹಾಗಾಯಿತು. ಆದರೆ ಜಲಜ ನಗುತಿದ್ದಳು-ನಿರ್ಮಲವಾದ ನಗು. ಆಕೆ ತನ್ನನ್ನು ಅವಮಾನಿಸಬಯಸಿದಳೆಂದು ಊಹಿಸುವುದು ಸಾಧ್ಯವೇ ಇರಲಿಲ್ಲ.

ಅಂತಹ ವಿಚಾರ ತುಂಗಮ್ಮನ ಮನಸ್ಸಿನಲ್ಲಿ ಸುಳಿದಿರಬಹುದೆಂಬುದನ್ನೂ ಭಾವಿಸಿರಲಿಲ್ಲ ಜಲಜ. ಒಳ್ಳೆಯವೆಂದು ತೋರಿದೊಂದು ಜೀವ ತನಗೆ ಗೆಳತಿಯಾಗಿ ದೊರೆತ ಸಂತೋಷದ ಸಂಭ್ರಮದಲ್ಲಿ ಸುಖಿಯಾಗಿದ್ದಳು ಆಕೆ.

ತುಂಗಮ್ಮನನ್ನು ಪೂರ್ತಿ ತನ್ನವಳಾಗಿ ಮಾಡಿಕೊಳ್ಳುವ ಬಯಕೆಯಿಂದ ಜಲಜ ಕೇಳಿದಳು.

"ನೀವು ಎಷ್ಟು ಓದಿದೀರಾ ತುಂಗಕ್ಕ ?"

ಮತ್ತೆ, ಹಿಂದಿನ ರಾತ್ರಿಯ ನೆನಪು ತುಂಗಮ್ಮನಿಗಾಯಿತು. ನೀತಿಯುತವಲ್ಲವೆಂದು ಪರಿಗಣಿಸಲ್ಪಟ್ಟ ಬದುಕಿನಿಂದ ಪಾರಾಗಿ ಬಂದು, ಕಣ್ಣೀರಿನಲ್ಲಿ ಕೈ ತೊಳೆದು ಪ್ರಾಯಶ್ಚಿತ್ತ ಅನುಭವಿಸಬೇಕಾದ ಆಶ್ರಮ ನಾಗಿತ್ತೆ ಇದು? ನಿಜವಾಗಿಯೂ ಶಾಲೆಯ ಹಾಗಿತ್ತಲ್ಲವೆ ಈ ಅಭಯ

ಥಾವು?....ತನ್ನ ವಿದ್ಯಾಭ್ಯಾಸವನ್ನು ಕುರಿತು ಜಲಜ ಪ್ರಶ್ನಿಸು ತಿದ್ದಾಳೆ....

"ಓದು ನಾಲ್ಕು ವರ್ಷದ ಹಿಂದೆಯೇ ನಿಲ್ಲಿಸಿದೆ ಜಲಜ."

"ಯಾವ ಕ್ಲಾಸ್ನಲ್ಲಿ?"

"ಫೋರ್ಠ್ ಫಾರಂನಲ್ಲಿ. ಆ ವರ್ಷ ನಮ್ಮಕ್ಕನ ಮದುವೆಯಾಯ್ತು. ಆ ಮೇಲೆ ಸ್ಕೂಲು ಬಿಟ್ಟೆಟ್ಟೆ."

ಅವರಕ್ಕ—ಅಕ್ಕನ ಮದುವೆ....ತುಂಗಮ್ಮನಿಗಿಂತ ದೊಡ್ಡವಳಾದ, ಆದರೆ ತುಂಗಮ್ಮನ ಹಾಗೆಯೇ ಇರುವ, ಇನ್ನೊಂದು ಜೀವವನ್ನು ಕಲ್ಪಿಸಿ ಕೊಂಡಳು ಜಲಜ. ಮದುವೆಯಾದ ಅಕ್ಕ....ಮಕ್ಕಳೂ ಇರಬಹುದು ಆ ದಂಪತಿಗಳಿಗೆ. ಆದರೆ ಈ ತುಂಗಮ್ಮ ಇಲ್ಲಿ.....

ಅಕ್ಕನ ಮಾತು ಬಂತೆಂದು ತುಂಗಮ್ಮನ ಮುಖ ಕಪ್ಪಗಾಯಿತು. ಜಲಜಳೂ ಅದನ್ನು ಗಮನಿಸಿದಳು. ಕಹಿ ವಾತಾವರಣಕ್ಕೆ ತಾನು ಕಾರಣ ಳಾಗಬಾರದೆಂಬ ಅಸ್ಪಷ್ಟ ಯೋಚನೆಯೊಂದು ಅವಳನ್ನು ಕಾಡಿತು. ಉದ್ದೇಶಪೂರ್ವಕವಾಗಿಯೇ ಆಕೆ ಸ್ವವಿಚಾರವೆತ್ತಿದಳು.

"ನಾನು ಎಷ್ಟು ಓದಿರಬಹುದು ಹೇಳಿ?"

"ನೀವು?"

"ಹೂಂ. ಹೇಳಿ ನೋಡೋಣ."

ತುಂಗಮ್ಮ ಎದ್ದು ಕುಳಿತಳು. ಆ ಪ್ರಶ್ನೆಗೆ ಸಮರ್ಪಕ ಉತ್ತರ ಕೊಡಲಾರದೆ ಸೋಲನ್ನೊಪ್ಪಿಕೊಳ್ಳಲು ಆಕೆ ಸಿದ್ಧಳಿರಲಿಲ್ಲ. ಆ ಹುಡುಗಿ ಜಲಜ...ಸೊಬಗಿನ ಆ ಮುಗ್ಧರೂಪ....ಎಷ್ಟು ಓದಿರಬಹುದು ಆಕೆ? ಆ ಸ್ಪಷ್ಟ ಪದೋಚ್ಚಾರ, ಸಂಸ್ಕಾರದ ನಡೆ-ವಿನಯ....

"ಕಾಲೇಜಿಗೆ ಹೋಗಿದೀರಿ ಅಲ್ವೆ?"

ಅಳುಕುತ್ತ ಹಾಗೆ ಅಂದಳು ತುಂಗಮ್ಮ. ಅದಕ್ಕೆ ಉತ್ತರರೂಪವಾಗಿ ದೊರೆತುದು ಹೃದಯ ಅರಳಿಸುವ, ನಾಭಿಯಿಂದಲೆ ಹೊರಟ, ನಗು.

ಜಲಜ ಕಾಲೇಜಿಗೆ ಹೋಗಿರಲಾರಳೆಂಬುದು ಸ್ಪಷ್ಟವಾಯಿತು. ಆದರೆ, ತನ್ನ ತಪ್ಪು ಉತ್ತರ ಕೇಳಿ ಅಷ್ಟೊಂದು ನಗಬೇಕೆ?

"ಪ್ರೈಮರಿ ಸ್ಕೂಲು ಮಡ್ಡಮ್ಮ ಕಣ್ರೀ ನಾನು....ಹೊ....ಹ್ಹೋ!"

ಜಲಜಳ ನಗು ಅಂಟು ಜಾಡ್ಯನಾಗಿತ್ತೆಂದು ತುಂಗಮ್ಮನೂ ನಕ್ಕಳು.

ಆಗ ಬಾಗಿಲು ತಳ್ಳಿ ದೊಡ್ಡಮ್ಮ ಬಂದರು. ಪ್ರೀತಿಯ ದೃಷ್ಟಿಯಿಂದ ಅವರನ್ನು ನೋಡಿದಳು ತುಂಗಮ್ಮ. ಈ ಹೆಂಗಸು ಜಲಜಳ ದೊಡ್ಡಮ್ಮ ಮಾತ್ರವಲ್ಲ. ತನಗೂ ದೊಡ್ಡಮ್ಮನೇ, ತನಗೆಲ್ಲರಿಗೂ ದೊಡ್ಡಮ್ಮನೇ....

"ಏನ್ರೇ ಇದು, ಏನು ಗಲಾಟೆ. ಇದೇನೆ ಜಲಜಾ ಹೀಗ್ನಗೋದು. ಒಳ್ಳೇ ಕಾಹಿಲೆಯವಳು ನೀನು!"

ಜಲಜ ಎದ್ದು ಕುಳಿತು, ನಗುತ್ತಲೇ ಇದ್ದಳು ನಾಲ್ಕು ನಿಮಿಷ.

"ದೊಡ್ಡಮ್ಮ, ನಾನು ಕಾಲೇಜು ಓದಿದ್ದೀನಿ ಅಂತಾರೆ ಈ ತುಂಗಕ್ಕ! ಕೇಳಿದ್ರಾ?"

"ಸರಿ, ನೀನೊಬ್ಬಳು," ಎಂದರು ದೊಡ್ಡಮ್ಮ.

ತುಂಗಮ್ಮ ನಗು ನಿಲ್ಲಿಸಿ ಸುಮ್ಮನಾದಳು.

"ಈಕೆ ಮಹಾ ಮಾತಿನಮಲ್ಲಿ. ಏನಾದರೂ ಅಂದರೆ ಮನಸ್ಸಿಗೆ ಹಚ್ಕೋಬೇಡ ತುಂಗ."

"ಇಲ್ಲ," ಎಂದಳು ತುಂಗಮ್ಮ.

"ನಂಗೂ ಮೊದಲು ಹಾಗೆ ಅನಿಸಿತ್ತು ಹಿಂದೆ. ಓದು ಬರಹ ಇವಳಿಗೆ ಚೆನ್ನಾಗಿ ಬರುತ್ತೇನೋಂತ ಭಾವಿಸಿದ್ದೆ."

"ಆ ಮೇಲೆ ನೋಡ್ದಾಗ ನಾನು ಮಹಾ ದಡ್ಡೀಂತ ಗೊತ್ತಾಯ್ತು, ಅಲ್ವೆ ದೊಡ್ಡಮ್ಮ?"

ಹಾಗೆ ಕೇಳಿದಾಗ ತುಂಟತನ ಜಲಜಳ ದೃಷ್ಟಿಯಲ್ಲಿ ತುಂಬಿ ಕೊಂಡಿತ್ತು.

ದೊಡ್ಡಮ್ಮ ತಾವೂ ನಕ್ಕು ಮಾತಿನ ಸರಣಿಗೆ ವಿರಾಮಕೊಟ್ಟರು.

ಮರುಕ್ಷಣವೆ ಅವರ ಮುಖ ಗಂಭೀರವಾಯಿತು. ದಿನದ ಕಾರ್ಯ ಕ್ರಮದಲ್ಲಿ ಅವರು ನಿರತರಾಗಬೇಕಿನ್ನು.

ಆರು ಗಂಟೆಗೇ ಎದ್ದು ಹುಡುಗಿಯರೆಲ್ಲಾ ಆಗಲೆ ಪ್ರಾತರ್ವಿಧಿಗಳನ್ನು ತೀರಿಸಿದ್ದರು. ಆರೂವರೆಗೆ ಸಾಮೂಹಿಕ ಪ್ರಾರ್ಥನೆ....

"ಈ ದಿವಸ ನಾನು ಏಳಲೆ ದೊಡ್ಡಮ್ಮ?"

—ಎಂದು ಜಲಜ ವಿನಯದಿಂದ ಬೇಡಿಕೊಂಡಳು.

ದೊಡ್ಡಮ್ಮ ಆಕೆಯ ಹಣೆಮುಟ್ಟಿ ನೋಡಿದರು. ಒದ್ದೆಯಾಗಿದ್ದ ರವಕೆ ಮುಗ್ಗುಲು ಹಾಸಿಗೆಗಳನ್ನು ನೋಡಿದರು.

"ಇಲ್ಲ ಜಲಜಾ, ಇವತ್ತೊಂದು ದಿವಸ ನೀನು ಏಳಕೂಡದು."

"ನನ್ನಿಂದ ಇಲ್ಲೇ ಮಲಗಿರಕ್ಕಾಗಲ್ಲ ದೊಡ್ಡಮ್ಮ."

"ಜಲಜ! ಹಟ ಹಿಡೀಬೇಡ....ಮಲಗಿಕೋ ಇವತ್ತು."

"ಊಂ...."

ಪುಟ್ಟ ಮಗುವನ್ನು ರಮಿಸುವ ಹಾಗೆ ಸರಸಮ್ಮ ವರ್ತಿಸುತಿದ್ದರು.

ಹೊರಗೆ ಇಳಿಧ್ವನಿಯಲ್ಲಿ, ಆದರೂ ಹಲವು ಕಂಠಗಳಿಂದ ಹೊರಡುತಿದ್ದುದರಿಂದ ಗಟ್ಟಿಯಾಗಿಯೆ, ಪ್ರಾರ್ಥನೆ ಕೇಳಿಸುತಿತ್ತು :

"ರಘು ಪತಿ ರಾಘವ ರಾಜಾ ರಾಮ್
ಈಶ್ವರ ಅಲ್ಲಾ ತೇರೇ ನಾಮ್...."

"ಪ್ರಾರ್ಥನೆ ಮಾಡ್ತಿದಾರೆ," ಎಂದರು ಸರಸಮ್ಮ.

ಜಲಜ ಮೌನವಾಗಿ ತಲೆ ಬಾಗಿದಳು. ತುಂಗಮ್ಮ ಗಂಭೀರಳಾಗಿ ಆ ಹಾಡಿಗೆ ಕಿವಿಗೊಟ್ಟಳು. ಸರಸಮ್ಮ ಎದ್ದು ನಿಶ್ಶಬ್ದವಾಗಿಯೆ ಮೇಜಿನ ಮೇಲಿದ್ದ ಪುಸ್ತಕಗಳನ್ನು ಜೋಡಿಸಿ ಇಟ್ಟರು.

ಪ್ರಾರ್ಥನೆ ಮುಗಿದ ಬಳಿಕ ಕೊಠಡಿಯ ಹೊರಗಿನಿಂದ ಕಲರವ ಕೇಳಿಸಿತು.

"ದೊಡ್ಡಮ್ಮಾ, ದೊಡ್ಡಮ್ಮಾ," ಎನ್ನುತ್ತ ಆರೇಳು ಹುಡುಗಿಯರು ಕೊಠಡಿಯ ಬಾಗಿಲ ಬಳಿ ಬಂದು ನಿಂತರು.

"ಏನ್ರೇ ಅದು ?"

ತುಂಗಮ್ಮ ಹಿಂದಿನ ರಾತ್ರೆಯೇ ಗುರುತಿಸಿದ್ದ ಸರಸ್ವತಿ ಹೇಳಿದಳು :

"ಇವತ್ತು ದಮಯಂತಿ ಗ್ರೂಪ್ನೋರು ಗುಡಿಸೋಲ್ವಂತೆ ದೊಡ್ಡಮ್ಮ."

"ಯಾಕೆ ?"

"ಅವರಲ್ವಂತೆ ಇವತ್ತು ಗುಡಿಸೋದು."

ದಮಯಂತಿ ಒಮ್ಮೊಮ್ಮೆ ಬೇಕು ಬೇಕೆಂದೇ ಹಾಗೆ ಮಾಡುತಿದ್ದುದು ಸರಸಮ್ಮನಿಗೇನೂ ತಿಳಿಯದ ವಿಷಯವಾಗಿರಲಿಲ್ಲ. ಯಾಕೆ—ಎಂದರೆ ಆಕೆ,

ಆ ದಮಯಂತಿ, ಕೊಡುವ ಉತ್ತರ ಯಾವುದೆಂಬುದೂ ಸ್ಪಷ್ಟವಾಗಿತ್ತು. ಆದರೂ ಅವರು, "ದಮಯಂತೀ !" ಎಂದು ಏರು ಸ್ವರದಲ್ಲಿ ಕರೆದರು.

ದಮಯಂತಿ ಕಾಣಿಸುವಂತೆ, ಆ ಹುಡುಗಿಯರು ಹಾದಿಮಾಡಿ ಕೊಟ್ಟರು. ಆ ಹುಡುಗಿಯರ ಹಿಂದೆಯೆ ನಿಂತಿದ್ದಳು ಕುಳ್ಳಿಯಾದ ದಮಯಂತಿ....ಅವಳ ಮುಖ ಸಿಟ್ಟಿನಿಂದ ಕೆಂಪಗೆ ಸಿಡಿಯುತಿತ್ತು. ಮೂಗಿನ ಸೊಳ್ಳೆಗಳು ಅದುರುತಿದ್ದುವು. ಹೊರಗೆ ಇತರರೊಡನೆ ಜಗಳವಾಡಿ ಬಂದಿದ್ದ ಆಕೆಯ ಎದೆ ತೀವ್ರಗತಿಯಿಂದ ಮೇಲು ಕೆಳಕ್ಕೆ ಏರಿ ಇಳಿಯುತಿತ್ತು.

ತುಂಗಮ್ಮ, ಕುತೂಹಲದಿಂದ ಈ ಘಟನಾ ವಿಶೇಷವನ್ನು ಈಕ್ಷಿಸಿದಳು. ಆದರೆ ಜಲಜಳಿಗೆ ಅದು ಮಹತ್ವದ ವಿಷಯವೇ ಆಗಿರಲಿಲ್ಲ.

"ಇವಳೇ ದಮಯಂತಿ—ಚಂದನದ ಬೊಂಬೆ!"

—ಎಂದಳು ಜಲಜ, ಆ ಹುಡುಗಿಯನ್ನು ತುಂಗಮ್ಮನಿಗೆ ತೋರಿಸುತ್ತ, ಪಿಸುಮಾತಿನಲ್ಲೆ.

ಆ ಮಾತು ಕೇಳಿಸಿದವಳಂತೆ ದಮಯಂತಿ ಜಲಜಳನ್ನು ನುಂಗಿಬಿಡುವವಳಂತೆ ನೋಡಿದಳು. ಜಲಜ, ಆ ದೃಷ್ಟಿಗೆ ಉತ್ತರವಾಗಿ ನಕ್ಕಳು.

"ಅದೇನೆ ಅದು ನಿನ್ನ ಗಲಾಟೆ?"

—ಎಂದು ಸರಸಮ್ಮ ವಿಚಾರಿಸಿಕೊಳ್ಳುವವರ ಧ್ವನಿಯಲ್ಲಿ ಕೇಳಿದರು.

"ನೋಡಿ ದೊಡ್ಡಮ್ಮಾ...ತಿರ್ಗಾ ಹಿಂಸೆ ಕೊಡ್ತವ್ರೆ...."

"ನಿನ್ನದು ಯಾವಾಗ್ಲೂ ಇದ್ದಿದ್ದೇ."

"ಅಲ್ಲ ದೊಡ್ಡಮ್ಮಾ, ಇವತ್ತು ಗುಡಿಸೋ ದಿನ ನಮ್ದೂಂತ ಎಷ್ಟೊಂದು ಕಸ ಹಾಕವ್ರೆ ನೋಡಿ ಮತ್ತೆ."

"ಬೇಕು ಬೇಕೂಂತ್ಲೇ ಹಾಕಿದೀವೇನೊ—"

—ಎಂದು ಗುಂಪಿನಲ್ಲಿದ್ದ ಹುಡುಗಿಯೊಬ್ಬಳು ರಾಗವೆಳೆದಳು.

ಕೆರಳಿದ ದಮಯಂತಿ ಹಾಗೆ ರಾಗವೆಳೆದ ಹುಡುಗಿಯ ಮೇಲೆ ಎರಗಿದಳು. ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಒಬ್ಬರ ತುರುಬು ಇನ್ನೊಬ್ಬರ ಕೈಗೆ ಹೋಯಿತು. ಒಳ್ಳೆಯವಲ್ಲದ ಪದಗಳು ಹಾರಾಡಿದುವು.

ದಮಯಂತಿಯ ಆರೋಪ ನಿಜವಾಗಿತ್ತೆಂಬುದನ್ನು ಸರಸಮ್ಮ ತಿಳಿದಿದ್ದರು. ಆದರೆ ಈ ಜಗಳದಿಂದ ಹೊಸಪರಿಸ್ಥಿತಿ ಹುಟ್ಟಿಕೊಂಡಿತ್ತು.

8K3·6
KUL

S 022056

"ನಿಲ್ಸಿ! ನಿಲ್ಸಿ! ದಮಯಂತಿ! ಅಲಮೇಲು! ನಿಲ್ಸಿ-ನಿಲ್ಸಿ!"

ದೊಡ್ಡಮ್ಮನ ಆಜ್ಞೆಯನ್ನು ಆ ಕ್ಷಣವೇ ಯಾರೂ ಪರಿಪಾಲಿಸುವ ಚಿಹ್ನೆ ಇರಲಿಲ್ಲ. ಸರಸಮ್ಮನಿಗೆ ರೇಗಿ ಹೋಯಿತು.

"ಬಿಡಿಸಿ, ಇಬ್ಬರ್ನೂ ಹಿಡ್ಕೊಳ್ಳಿ!"

ಜಗಳ ನೋಡುತ್ತ ನಿಂತಿದ್ದ ಇತರ ಹುಡುಗಿಯರು ಆ ಕೆಲಸ ಮಾಡಿದರು.

ಪರಸ್ಪರ ಕಿತ್ತಾಡುತಿದ್ದ ಎರಡು ಕೋಳಿಗಳು....ಹುಡುಗಿಯರಿಬ್ಬರೂ ತಲೆ ಕೆದರಿಕೊಂಡು ಬುಸುಗುಟ್ಟುತಿದ್ದರು.

ಸರಸಮ್ಮ, ಆ ಕಟ್ಟಡದ ನಾಲ್ಕು ಮೂಲೆಗಳಿಗೂ ಕೇಳಿಸುವ ಹಾಗೆ ಬಾಗಿಲ ಬಳಿ ಉಚ್ಚ ಸ್ವರದಲ್ಲಿ ಅಂದರು:

"ದಮಯಂತಿ—ಅಲಮೇಲು! ನಿಮಗಿಬ್ಬರಿಗೂ ಬೆಳಿಗ್ಗೆ ತಿಂಡಿಯಿಲ್ಲ! ಇಬ್ಬರೂ ಮಧ್ಯಾಹ್ನದ ವರೆಗೂ ಆಫೀಸು ರೂಮಿನಲ್ಲೇ ಇರ್ಬೇಕು!"

ತುಂಗಮ್ಮನಿಗೆ ಈ ಆಜ್ಞೆ ವಿಚಿತ್ರವೆನಿಸಿತು. ಆದರೆ ಹುಡುಗಿಯರು ಯಾರೂ ಅಳುಕಿದಂತೆ ತೋರಲಿಲ್ಲ. ಸರಸಮ್ಮನ ಆಫೀಸು ರೂಮು, ಮಲಗುವ ಕೊಠಡಿ, ಎಲ್ಲವೂ ಅದೇ ಆಗಿತ್ತು. ಆ ಹುಡುಗಿಯರಿಬ್ಬರು ಇತರರಿಂದ ಬೇರಾಗಿ ಕೊಠಡಿಯ ಎರಡು ಮೂಲೆಗಳಿಗೆ ನಡೆದರು.

ಅನಂತರ ಸರಸಮ್ಮ, ಉಳಿದೆಲ್ಲರನ್ನೂ ಉದ್ದೇಶಿಸಿ ಎರಡನೆಯ ಆಜ್ಞೆಯನ್ನಿತ್ತರು:

"ಈ ದಿವಸ ಎಲ್ಲರೂ ಗುಡಿಸ್ಬೇಕು—ಎಲ್ಲರೂ! ಕಸ ಹೆಕ್ಕಿ! ತಗೊಳ್ಳಿ ಪರಕೆ! ಹೂಂ!"

ಮರುಕ್ಷಣವೆ ಕಸಗುಡಿಸುವ ಸಾಮೂಹಿಕ ಕೆಲಸ ಆರಂಭವಾಯಿತು. ಅದರ ಮೇಲ್ವಿಚಾರಣೆಗೆಂದು ಸರಸಮ್ಮ ಹೊರ ಹೋದರು.

ತುಂಗಮ್ಮನ ಸುಖ ಒಂದು ಕಡೆ ಒಂದಿಷ್ಟು ಹೆಪ್ಪುಗಟ್ಟಿದ ಹಾಗಾಯಿತು. ಈ ಸುಖದ ಬೀಡಿನಲ್ಲಿಯೂ ಹೀಗೆ ಆಗಾಗ್ಗೆ ಕಲಹಗಳಾಗುತ್ತವಲ್ಲವೆ?

ಆದರೆ ಜಲಜಳಿಗೆ ಇದೆಲ್ಲವೂ ಸರ್ವಸಾಮಾನ್ಯವಾಗಿತ್ತು. ತಿಳಿವಳಿಕೆಯ ದೃಷ್ಟಿಯಿಂದ ಆಕೆ ತುಂಗಮ್ಮನನ್ನು ನೋಡಿ ನಸುನಕ್ಕಳು. ತಮ್ಮ

'ಸಿರಿಗನ್ನಡ' ಗ್ರಂಥಾಲಯ

ಬ್ಬರನ್ನು ನೋಡಿಯೂ ನೋಡದಂತೆ ನಿಂತಿದ್ದ ಅಲಮೇಲು—ದಮಯಂತಿ ಯರನ್ನು ಕಂಡು ಜಲಜಳಿಗೆ ಕನಿಕರವೆನಿಸಿತು.

"ಯಾಕ್ರೀ ಸುಮ್ಸುಮ್ನೆ ಜಗಳಾಡ್ತೀರಾ ನೀವು?"

ದಮಯಂತಿ ಜಲಜಳನ್ನು ದುರುಗುಟ್ಟಿ ನೋಡಿದಳು.

"ಥೂ! ಇದೊಂದೂ ಚೆನ್ನಾಗಿಲ್ಲವಮ್ಮಾ. ಪ್ರತಿಸಾರಿಯೂ ಹೀಗೆ—"

"ಚೆನ್ನಾಗೈತೋ ಇಲ್ವೋ. ನಿನ್ನ ಯಾರು ಕೇಳ್ತೋರು? ನಿನ್ನಷ್ಟಕ್ಕೆ ಸುಮ್ನಿದ್ಕೊ—ಬಾಯ್ಮುಚ್ಕೊಂಡು!''

—ಶಾಂತಳಾಗಿರಲಿಲ್ಲ ದಮಯಂತಿ.

"ನೋಡಿ ತುಂಗಕ್ಕ, ಹ್ಯಾಗಂತಾಳೆ!''

—ಎಂದು ಜಲಜ ತುಂಗಮ್ಮನಿಗೆ ದೂರು ಕೊಟ್ಟಳು.

ಆದರೆ ಸುಲಭವಾಗಿ ಸುಮ್ಮನಿರುವವಳಲ್ಲ ದಮಯಂತಿ.

"ಅಲ್ದೆ! ನಿಂಗ್ಯಾಕ್ಬೇಕು ನಸ್ಸಮಾಚಾರ? ನಾವು ಹೆಣ ಚಾಕ್ರಿ ಮಾಡ್ತೀವಿ, ಸಾಯ್ತೀವಿ, ಓಡ್ಹೋಗ್ತೀವಿ-ಏನಾಪ್ರೇಸು ನಿಂಗೆ? ನೀನಾಯ್ತು, ದೊಡ್ಡಮ್ನಾಯ್ತು. ತಲೆಸಿಡಿತ, ನೆಗಡಿ, ಕೆಮ್ಮು, ಜ್ವರ ಅಂತ ಬೆಚ್ಚಗೆ ಹೊದ್ಕೊಂಡು ಇಲ್ಲಿ ಮಲಕ್ಕೊ."

ತುಂಗಮ್ಮನಿಗೆ ಈ ಮಾತು ಕೆಡುಕೆನಿಸಿತು. ತಾನು ಜಲಜೆಗೆ ಬೆಂಬಲವಾಗಿ ನಿಲ್ಲಬೇಕೆಂದು ಆಕೆಯೆಂದಳು:

"ನೀವು ಹಾಗನ್ಬಾರ್ದು. ಜಲಜಾಗೆ ಜ್ವರ ಬಂದಿದೆ. ಕಾಣ್ಸೊಲ್ವೆ?"

ಆ ಮಾತು ಕೇಳಿ ನಿರುತ್ತರಳಾದಳು ದಮಯಂತಿ. ತಾನು ಆಡಿದ್ದು ತಪ್ಪಾಯಿತೆಂದು ಆಕೆಗೆ ಆಗಲೆ ತಿಳಿದಿತ್ತು. ಆದರೆ ಹಾಗೆಂದು ಒಪ್ಪಿ ಕೊಳ್ಳಲು ಆವಳು ಸಿದ್ಧಳಿರಲಿಲ್ಲ. ಅದಕ್ಕಾಗಿ, ಮುಖ ತಿರುಗಿಸಿಕೊಂಡು ಆಕೆ ಕಿಟಕಿಯಿಂದ ಹೊರನೋಡುತ್ತ ನಿಂತಳು.

ಅಲಮೇಲು ಆಗಲೆ ತಣ್ಣಗಾಗಿ ದಮಯಂತಿಯೊಡನೆ ಸಂಧಾನಕ್ಕೆ ಸಿದ್ಧವಾಗಿಯೇ ಇದ್ದಳು. ಮಧ್ಯಾಹ್ನದ ಊಟದ ವರೆಗೂ ಉಪವಾಸವಿರ ಬೇಕೆನ್ನುವುದಂತೂ ಆಕೆಯ ಮನಸಿನ ಹೊಸ ರೀತಿಯ ಕಸಿವಿಸಿಗೆ ಕಾರಣ ವಾಗಿತ್ತು.

ಸರಸಮ್ಮನ ಪುಸ್ತಕಗಳನ್ನೂ ಬಟ್ಟೆ ಬರೆಗಳನ್ನೂ ಓರಣವಾಗಿ ಇಡ ತೊಡಗಿದಳು ಅಲಮೇಲು. ತುಂಗಮ್ಮನೆದ್ದು ಸೀರೆ ಸರಿಪಡಿಸಿ ಹೆರಳು ಬಿಗಿದುಕೊಂಡಳು.

ಅಲಮೇಲು ದೊಡ್ಡಮ್ಮನ ಸೀರೆ-ಪುಸ್ತಕಗಳನ್ನು ಮುಟ್ಟುವುದನ್ನು ಓರೆಗಣ್ಣಿನಿಂದ ದಮಯಂತಿ ಕಂಡಳು. ಆ ನೋಟ ಆಕೆಗೆ ಸಹನೆಯಾಗಲಿಲ್ಲ.

"ಮುಟ್ಬೇಡ ಅದನ್ನ !"

—ಎಂದು ದಮಯಂತಿ ಕಿರಿಚಿಕೊಂಡಳು.

ಆದರೆ ಅಲಮೇಲು, ಆಕೆಯನ್ನು ದಿಟ್ಟಿಸಿ ನೋಡಿದಂತೆ ಮಾಡಿಯೂ ತನ್ನ ಕೆಲಸದಲ್ಲೇ ತಲ್ಲೀನಳಾದಳು.

ತಾವಿಬ್ಬರೂ ಆಫೀಸು ಕೊಠಡಿಯಲ್ಲಿ ಶಿಕ್ಷೆ ಅನುಭವಿಸುತ್ತಿರುವ ಅಪರಾಧಿಗಳು; ದೊಡ್ಡಮ್ಮನಿಗೆ ನೆರವಾಗುವ ಹಕ್ಕು ಹೇಗೆ ಬರಬೇಕು ಅಲಮೇಲುಗೆ? ದಮಯಂತಿ ಹಾಗೆ ಪ್ರತಿಭಟಿಸುವುದರಲ್ಲಿ ಅರ್ಥವಿತ್ತು!

ಆ ಪ್ರತಿಭಟನೆಗೆ ಅಲಮೇಲು ಮಣಿಯದೆ ಇದ್ದಾಗ ಮತ್ತೊಂದು ಕಾಳಗ ಶತಃ ಸಿದ್ಧ. ಅದನ್ನು ಇದಿರು ನೋಡುತ್ತಲೇ ಇದ್ದಳು ಜಲಜ.

ಇನ್ನೇನು, ದಮಯಂತಿ ಅಲಮೇಲುವಿನ ಮೇಲೆರಗಬೇಕು ಎನ್ನುವಷ್ಟರಲ್ಲೆ ದೊಡ್ಡಮ್ಮ ಒಳಗೆ ಬಂದರು. ಮನಸಿನ ನೆಮ್ಮದಿಯನ್ನು ಕೆಡಿಸಿಕೊಂಡೇ ಬಂದ ಅವರಿಗೆ ಹೊಸ ದೂರನ್ನು ಯಾರೂ ಒಪ್ಪಿಸಲಿಲ್ಲ ಇಲ್ಲಿ.

ತನಗೆ ಆಶ್ರಯ ನೀಡಿದ್ದ ದೊಡ್ಡಮ್ಮನನ್ನು ಆ ಸ್ಥಿತಿಯಲ್ಲಿ ಕಂಡು ತುಂಗಮ್ಮನ ಮುಖ ಬಾಡಿತ್ತು. ಹಳೆಯ ಕಹಿನೆನಪುಗಳನ್ನೆಲ್ಲ ಬಲು ಸುಲಭವಾಗಿ ಮರೆಯುವ ಮಧುರವಾತಾವರಣವಿದೆಂದು ಭಾವಿಸಿದ್ದಳು ತುಂಗಮ್ಮ. ಆದರೆ ಆ ವಾತಾವರಣ ಮಧುರವಾಗಿರಲಿಲ್ಲ. ಸಿಡಿಮಿಡಿಗೊಂಡಿದ್ದ ದೊಡ್ಡಮ್ಮನ ಮುಖದಿಂದ ಏನು ಮಾತು ಬರುವುದೋ ಎಂಬ ಅಳುಕು ಆಕೆಯ ಹೃದಯವನ್ನು ಕೊರೆಯಿತು.

ಆದರೆ ಹೊರಬಂದಮಾತನ್ನು ಕೇಳಿದಾಗ ಆಕೆಗೆ ಸೋಜಿಗವೆನಿಸದೆ ಇರಲಿಲ್ಲ. ಅದೇ ಆಗ ಹಾಗೆ ರೇಗಿದ್ದವರು ಮರುಕ್ಷಣದಲ್ಲೆ ವಾತ್ಸಲ್ಯಪೂರ್ಣವಾಗಿ ಮಾತನಾಡುವುದು ಸಾಧ್ಯವೆಂದು ಆಕೆ ತಿಳಿದಿರಲಿಲ್ಲ.

"ಜಲಜಾ, ಮುಖ ಎಲ್ಲಿ ತೊಳೀತೀಮ್ಮಾ? ನಡೆಯೋಕಾಗುತ್ತೊ ?"

"ಹೂಂ. ನಾನೇ ಹೋಗ್ಬರ್ತೀನಿ."

"ತುಂಗಮ್ನ ಕರಕೊಂಡು ಹೋಗ್ತೀಯಾ ಜತೇಲಿ?"

"ಹೂಂ. ಹೋಗ್ತೀನಿ."

ಜಲಜ ಎದ್ದಳು. ಜ್ವರದಿಂದ ಕ್ಷೀಣವಾಗಿದ್ದ ದೇಹ ಕ್ಷಣಕಾಲ ಗಾಳಿಯಲ್ಲಿ ತೂರಾಡಿತು.

ತನ್ನಸ್ಥಿತಿಗೆ ತಾನೇ ನಕ್ಕು ಆಕೆ, "ಬನ್ನಿ ತುಂಗಕ್ಕ," ಎಂದಳು.

ತುಂಗಮ್ಮ, ಜಲಜಳೊಡನೆ ಕೊಠಡಿಯಿಂದ ಹೊರ ಹೋದ ಮೇಲೆ, ಸರಸಮ್ಮ ಅಲಮೇಲು-ದಮಯಂತಿಯರತ್ತ ತಿರುಗಿದರು....

ಕೊಠಡಿಯ ಹೊರಗೆ ತುಂಗಮ್ಮ ದಿನದ ಬೆಳಕಿನಲ್ಲಿ ಅಭಯಧಾಮದ ಕಟ್ಟಡವನ್ನು ಕಂಡಳು. ಚತುಷ್ಕೋನಾಕಾರದ ಆ ಕಟ್ಟಡದ ನಡುವೆ ಖಾಲಿಜಾಗ ದಲ್ಲಿ ಹೂಗಿಡಗಳು ಆಕಾಶ ನೋಡಿ ನಗುತ್ತಲಿದ್ದುವು. ಆ ಹುಡುಗಿಯರೇ ನೀರೆರೆದು ಅಣಿಗೊಳಿಸಿದ್ದ ಪುಷ್ಪೋದ್ಯಾನಕ್ಕೆ, ತುಳಸೀಕಟ್ಟೆಯೊಂದು ಮೂಗುತಿಯಾಗಿತ್ತು. ಹೂಗಿಡಗಳ ಆ ಜಾಗದ ಸುತ್ತಲೂ ಜಗಲಿ. ಜಗಲಿಯ ಹಿಂದೆ ಎರಡು ಸಾಲುಗಳಲ್ಲಿ ಎದುರುಬದುರಾಗಿ ಕೊಠಡಿಗಳಿದ್ದುವು. ಒಂದು ಸಾಲಿನ ಮೂಲೆಯೇ ಅಡುಗೆಮನೆ. ಇನ್ನೊಂದರ ಕೊನೆಯಲ್ಲಿ ಕಕ್ಕಸು-ಬಚ್ಚಲುಮನೆ. ಮೂರನೆಯ ಪಾರ್ಶ್ವ ವಿಶಾಲವಾದ ಹಜಾರವಾಗಿತ್ತು.

ತುಂಗಮ್ಮನೊಡನೆ ಜಲಜ ಆ ಜಗಲಿಯುದ್ದಕ್ಕೂ ನಡೆದು ಹೋದಾಗ, ಹುಡುಗಿಯರಿನ್ನೂ ಕಸಗುಡಿಸುವ ಕೊನೆಯ ಘಟ್ಟದಲ್ಲಿದ್ದರು. ಮಾತು, ಪುಟ್ಟ ಜಗಳ, ಗಲಭೆ, ನಗು ...

ಅವರಲ್ಲಿ ಕೆಲವರು ನಾನಾ ರೀತಿಯಾಗಿ, 'ಜ್ವರ ನಿಂತಿತೇ ಜಲಜ?' ಎಂದು ಕೇಳಿದರು.

ಅವರೆಲ್ಲರೂ ತುಂಗಮ್ಮನನ್ನು ನೆಟ್ಟದೃಷ್ಟಿಯಿಂದ ನೋಡಿದರು. ಸರಸ್ವತಿ, ಸಾವಿತ್ರಿ, ಲಲಿತಾ ಮುಗುಳ್ನಕ್ಕರು ಕೂಡಾ. ಅವರ ಪಾಲಿಗೆ ತುಂಗಮ್ಮ ಆಗಲೆ ಪರಿಚಿತಳು. ಅಳುಕುತ್ತಲೆ ತುಂಗಮ್ಮ ಅವರನ್ನೆಲ್ಲ ನೋಡಿದಳು. ಕೆಲವು ದೃಷ್ಟಿಗಳು ನಿರ್ವಿಕಾರವಾಗಿದ್ದುವು. ಕೆಲವದರಲ್ಲಿ ಕುತೂಹಲವಿತ್ತು. ಆದರೆ ಹೆಚ್ಚಿನವರೆಲ್ಲ ಮೌನವಾಗಿ ತನಗೆ ಸ್ವಾಗತ ಬಯಸುತಿದ್ದುದನ್ನೆ ತುಂಗಮ್ಮ ಕಂಡಳು.

ಅಲ್ಲಿ ಒಂದು ಕಂಬಕ್ಕೊರಗಿ ನಿಶ್ಚಲಳಾಗಿ ನಿಂತಿದ್ದಳು ಒಬ್ಬ ಹುಡುಗಿ. ಕ್ಷೀಣ ದೇಹ. ಮುಖದ ತುಂಬ ಸಿಡುಬಿನ ಕಲೆಗಳಿದ್ದುವು. ದೃಷ್ಟಿ ಚಲಿಸುತ್ತಿರಲಿಲ್ಲ. ಆದರೆ ತುಟಿಗಳ ಮೇಲೆ ಮಾಟವಾದೊಂದು ನಗು ಮನೆ ಮಾಡಿತ್ತು.

ಆಕೆಯ ಬಳಿ ಸಮೀಪಿಸುತ್ತಲೆ ಜಲಜ ಮೃದುತನ ತುಂಬಿದ ಧ್ವನಿಯಲ್ಲಿ ಕೇಳಿದಳು:

"ಮುಖ ತೊಳ್ಕೊಂಡ್ಯಾ ಸುಂದ್ರಾ ?"

"ಊಂ ಕಣಕ್ಕಾ....ಯಾರು—ಜಲಜ್ಜಾ ? ಜರಾ ಬುಟ್ಬುಡ್ತಾ ?"

"ಓ !" ಎಂದು ತುಂಟ ರಾಗವೆಳೆದಳು ಜಲಜ; "ಜರಾನ ಓಡುಸ್ಬುಟ್ಟೆ !"

"ಭೇಷ್ ಕೆಲಸಮಾಡ್ದೆ. ಅಂಗಾರೆ ತಿಂಡಿ ಒತ್ಗೆ ಬತ್ತೀಯಾ ?"

"ಇಲ್ಲಮ್ಮಾ ಇಲ್ಲ....ಇನ್ನೂ ಒಂದಿವ್ಸ ಔಸ್ದಿ ತಗೋಬೇಕಂತೆ."

ಜಲಜ ತುಂಗಮ್ಮನನ್ನು ನೋಡಿ, ತನ್ನ ಕಣ್ಣುಗಳತ್ತ ಬೊಟ್ಟು ಮಾಡಿ, ಅಲ್ಲಿ ನಿಂತಿದ್ದ ಹುಡುಗಿ ಕುರುಡಿ ಎಂದು ಸೂಚಿಸಿದಳು. ಆ ವಿಷಯ ತುಂಗಮ್ಮನಿಗೆ ಆಗಲೆ ಹೊಳೆದಿತ್ತು.

ತುಂಗಮ್ಮನ ಕೈಬಳೆಗಳ ಸಪ್ಪಳವಾಯಿತು.

"ಯಾರು ? ಯಾರು ನಿಂತವ್ರೆ ನಿಸ್ಷತೇಲಿ—ಸಾರೋತಿನಾ ?"

"ಹೊಸಬ್ರು ಸುಂದರಾ. ನಿನ್ನೆ ಬಂದ್ರು. ತುಂಗಮ್ಮಾಂತ."

"ಆ ! ಅಂಗಾ ?"

ಕುರುಡಿಯ ಮುಖವರಳಿ ಸಿಡುಬಿನ ಕಲೆಗಳು ಮತ್ತಷ್ಟು ವಿಕಾರವಾದುವು. ನೋಡಲು ಯತ್ನಿಸಿದಂತೆ ಕಣ್ಣಾಲಿಗಳು ಚಲಿಸಿದುವು. ಆದರೆ ಆಕೆಗೇನಾದರೂ ಕಾಣಿಸುತಿತ್ತೆ ? ಅದನ್ನು ಕಂಡ ತುಂಗಮ್ಮನ ಗಂಟಲಲ್ಲಿ ಉಗುಳು ಒತ್ತರಿಸಿ ಬಂತು.

ಏನಾದರೂ ಮಾತನಾಡೆಂದು ಜಲಜ ತುಂಗಮ್ಮನಿಗೆ ಸನ್ನೆ ಮಾಡಿದಳು. ಏನು ಮಾತನಾಡಬೇಕು ಆಕೆ ?

"ಚೆನ್ನಾಗಿದಿಯೇನಮ್ಮ ?"

"ಯಾರು ? ಯಾರು ಮಾತಾಡ್ದೋರು ? ಅವರೇನಾ ?"

"ಹೂಂ ಸುಂದ್ರಾ. ತುಂಗಕ್ಕ ಕೇಳ್ತಾರೆ, ಚೆನ್ನಾಗಿದೀಯಾ ಅಂತ."

"ಇಂಗಿನ್ನಿ ಅಕ್ಕಾ!"

ಉತ್ತರವಿತ್ತ ಆ ಧ್ವನಿಯಲ್ಲಿ ಆತುರವಿತ್ತು. ಹೊಸಜೀವದ ಪರಿಚಯ ತನಗಾಯಿತೆಂಬ ಪರಮ ಸಂತೋಷವಿತ್ತು. ಆ ಕಣ್ಣುಗಳು ಹನಿಗೂಡಿದುದನ್ನು ಕಂಡಳು ತುಂಗಮ್ಮ. ಆ ಅಭಾಗಿನಿಯನ್ನು ಅಲ್ಲಿ ನಿಂತು ದಿಟ್ಟಿಸುವುದಾಗಲೇ ಇಲ್ಲ ಅವಳಿಂದ.

ಅದನ್ನು ಗಮನಿಸಿ ಜಲಜ ಹೇಳಿದಳು:

"ಬಚ್ಚಲ ಮನೆಗೆ ಹೋಗ್ತೀವಿ ಸುಂದ್ರಾ...."

"ಊನಕ್ಕಾ. ಓಗ್ಬನ್ನಿ....ಆವ್ಯಾಕೆ ಚಂಜೆಗೆ ಬತ್ತೀಯಾ?"

"ಬರ್‍ತೀನಿ."

"ಅವರ್‍ನೂ ಕರಕೊಂಡ್ಬಾ."

"ಹೂಂ ಸುಂದ್ರಾ...."

ಬಚ್ಚಲು ಮನೆ ಅಲ್ಲಿಯೇ ಇತ್ತು. ಆದರೂ ಅವರನ್ನು ಯಾವುದೋ ದೂರದೇಶಕ್ಕೆ ಕಳುಹಿಕೊಟ್ಟವಳಂತೆ ಆ ಕುರುಡಿ ಕೈ ಬೀಸಿದಳು.

ಬಚ್ಚಲು ಮನೆಯೊಳಗೆ ಜಲಜ ಕೊಳಾಯಿ ತಿರುಗಿಸಿದಾಗ ತುಂಗಮ್ಮ ಹೇಳಿದಳು:

"ಪಾಪ! ಎಷ್ಟೊಂದು ಕಷ್ಟ ಆಕೆಗೆ! ಎಷ್ಟು ವರ್ಷದಿಂದ ಹೀಗೆ?"

ಹಂಡೆಗೆ ಸುರಿಯುತಿದ್ದ ನೀರಿನ ಸ್ವರವನ್ನು ಮೀರಿಸಿ ಜಲಜ ಅಂದಳು:

"ಕುರುಡಿಯಾಗಿಯೇ ಹುಟ್ಟಿದ್ಲಂತೆ. ಹತ್ತು ವರ್ಷವಾದಾಗ್ಲೇ ಏನೋ ಸಿಡುಬಾಯ್ತಂತೆ. ಇಲ್ಲಿಗೆ ಬಂದು ಒಂದೆರಡು ವರ್ಷ ಆಯ್ತು."

"ಅವಳೇ ಬಂದಳೆ?"

—ಎಂದಳು ತುಂಗಮ್ಮ, ತಾನಾಗಿಯೇ ಬಂದುದನ್ನು ನೆನಸಿಕೊಳ್ಳುತ್ತಾ.

"ಪೋಲೀಸ್ನೋರು ಬಂದು ಹೇಳಿದ್ರು. ಬಸ್‌ಸ್ಟಾಂಡಿನತ್ರ ಒಬ್ಳು ಕುರುಡಿ ಹುಡುಗಿ ಬಿದ್ದಿದಾಳೆ-ತಗೋತೀರಾ, ಅಂತ. ದೊಡ್ಡಮ್ಮ ಹೂಂ-ಅಂದ್ರು."

"ಪಾಪ! ಸಂಕಟವಾಗುತ್ತೆ ಆಕೇನ ನೋಡ್ದಾಗ...."

—ಹಾಗೆ ಹೇಳಿದ ತುಂಗಮ್ಮನಿಗೆ ಆ ಘಳಿಗೆಯಲ್ಲಿ ತನ್ನ ಸಂಕಟದ ನೆನಪಾಗಲೇ ಇಲ್ಲ.

"ಆಕೆಗೆ ವಯಸ್ಸು ಎಷ್ಟಾದೀತು ಹೇಳಿ?"

"ಚಿಕ್ಕ ಹುಡುಗಿ ಅಲ್ಲ!"

"ಚಿಕ್ಕ ಹುಡುಗಿ? ಆಕೆಗೇನೋ ಯಾವುದೂ ನೆನಪಿಲ್ವಂತೆ. ಆದರೆ ಹದಿನೇಳೋ ಹದಿನೆಂಟೋ ಆಗಿರ್ಬೇಕು ಅಂತಾರೆ ದೊಡ್ಡಮ್ಮ. ಪುಸ್ತಕದಲ್ಲಿ ಹದಿನೇಳು ಅಂತಾನೆ ಬರೆದಿದಾರೆ."

"ಓ!"

ಪುಸ್ತಕದಲ್ಲಿ ಬರೆಯುವುದು....ತನ್ನದನ್ನಿನ್ನೂ ಅವರು ಬರೆದು ಕೊಂಡಿಲ್ಲವೆಂಬುದು ತುಂಗಮ್ಮನಿಗೆ ಮತ್ತೊಮ್ಮೆ ನೆನಪಾಯಿತು. ತನ್ನ ಪೂರ್ವಕತೆಯನ್ನು ಇನ್ನು ಕೇಳಲಿರುವರೆಂಬ ವಿಷಯ ಆಕೆಯ ಮುಖ ಬಾಡಿಸಿತು.

ಅಲ್ಲೆ ಇದ್ದ ಹಲ್ಲಿನ ಪುಡಿಯನ್ನು ತುಂಗಮ್ಮನ ಅಂಗೈಗೆ ಸುರಿಯುತ್ತಾ ಜಲಜ ಕೇಳಿದಳು:

"ನಿಮಗೆಷ್ಟು ವಯಸ್ಸು ಅಕ್ಕ?"

"ಹದಿನೆಂಟು ದಾಟಿತು."

"ನಾನು ಸರಿಯಾಗೇ ಊಹಿಸಿದ್ದೆ. ನನಗಿಂತ ಸ್ವಲ್ಪ ದೊಡ್ಡೋರು ನೀವು."

ಹಿರಿತನದ ಸುಖಕ್ಕಾಗಿ ನಕ್ಕು ತುಂಗಮ್ಮ, ಪುಡಿಯನ್ನು ತೋರು ಬೆರಳಿಂದೆತ್ತಿ ತನ್ನ ಹಲ್ಲುಗಳಿಗೆ ತೀಡಿದಳು. ವಯಸ್ಸು ವಿಚಾರಿಸಿದ ಜಲಜ ಬೇರೇನು ಪ್ರಶ್ನೆ ಕೇಳುವಳೋ ಎಂದು ತುಂಗಮ್ಮನ ಮನಸ್ಸು ಅಶಾಂತ ವಾಯಿತು.

ಆದರೆ ಜಲಜ, ಯಾವುದೋ ಯೋಚನೆಯಲ್ಲಿ ತಲ್ಲೀನಳಾಗಿಯೇ, ಹಲ್ಲು ತಿಕ್ಕಿ ಮುಖ ತೊಳೆದುಕೊಂಡಳು.

ಆ ಮೇಲೆ ನೇರವಾಗಿ ನಿಂತು "ಉಸ್ಸಪ್ಪ!" ಎಂದು, "ನಿತ್ರಾಣ, ಅಮ್ಮ—" ಎನ್ನುತ್ತಾ ಜಲಜ ಮೈಕೈ ಮುರಿದು ಕೊಂಡಳು.

ಆಯಾಸ ತುಂಗಮ್ಮನಿಗೂ ಆಗಿತ್ತು. ಪೈಕೈಗಳು ನೋಯುತಿದ್ದುವು ಹೆಜ್ಜೆ ಹೆಜ್ಜೆಗೂ ತಾನುಗರ್ಭಿಣಿ ಎಂದು ದೇಹ ನೆನಪು ಮಾಡಿಕೊಡುತಿತ್ತು. ಆದರೂ ಆಕೆ ಉಸಿರೆತ್ತಲಿಲ್ಲ.

ಮುಖ ತೊಳೆದುಕೊಂಡು ಸೆರಗಿನಿಂದ ನೀರಹನಿ ಒರೆಸಿದ ಮೇಲೆ ತುಂಗಮ್ಮ ಕೇಳಿದಳು :

"ಕಕ್ಕಸು ಎಲ್ಲಿ?"

"ಶುದ್ಧ ಮೂರ್ಖಳುನಾನು. ನಿಮ್ಮನ್ನ ಮೊದ್ಲೇ ಕೇಳ್ಬೇಕಾಗಿತ್ತು. ಇಲ್ಲೇ ಇದೆ, ಬನ್ನಿ...."

....ಪ್ರಾತರ್ವಿಧಿಗಳನ್ನು ತೀರಿಸಿ ತುಂಗಮ್ಮ ಜಲಜೆಯರು ಆಫೀಸು ಕೊಠಡಿಗೆ ಹಿಂತಿರುಗಿ ಬಂದಾಗ, ದಮಯಂತಿ—ಅಲಮೇಲು ಇಬ್ಬರೂ ಅಳುತ್ತ ಕುಳಿತಿದ್ದರು. ದೀರ್ಘಪ್ರವಚನ ಮಾಡಿ ಮುಗಿಸಿ ಮೌನವಾಗಿ ಸರಸಮ್ಮ ವಿರಮಿಸುತಿದ್ದ ಹಾಗಿತ್ತು.

ಬೆಳಗ್ಗಿನ ತಿಂಡಿಯ ಹೊತ್ತು. ತುಂಗಮ್ಮ ಜಲಜೆಯರಿಗಷ್ಟೇ ಕೊಠಡಿಗೆ ತರಿಸಿ, ಉಳಿದ ಆ ಇಬ್ಬರು ಹುಡುಗಿಯರನ್ನು ಅಲ್ಲಿಯೇ ಉಪವಾಸ ಇರಗೊಡುವುದು ಸಾಧ್ಯವಿರಲಿಲ್ಲ. ಹಾಗಾಗಿ ಸರಸಮ್ಮ ಬೇರೆ ನಿರ್ಧಾರಕ್ಕೆ ಬಂದಿದ್ದರು.

"ಈ ಸಾರೆ ನಿಮ್ಮನ್ನ ಕ್ಷಮಿಸಿದೀನಿ. ತಿಳೀತೆ?"

ಆ ಇಬ್ಬರೂ ಉತ್ತರವೀಯಲಿಲ್ಲ. ಬಿಕ್ಕಿ ಬಿಕ್ಕಿ ಅಳುತಿದ್ದರು ಮಾತ್ರ.

"ಇನೊಂದ್ಸಲಿ ತಪ್ಪು ಮಾಡಿದ್ರೀಂದ್ರೆ—ನೋಡ್ಕೊಳ್ಳಿ ಆ ಮೇಲೆ"

ಆಗಲೂ ಹಾಗೆಯೇ ಇದ್ದರು ಹುಡುಗಿಯರು.

"ಇನ್ನು ಹೊರಡಿ!"

ಆ ಆಜ್ಞೆಯನ್ನಿತ್ತೊಡನೆ ಹುಡುಗಿಯರು ಹೊರಟರು. ಅವರ ಹಿಂದೆಯೇ ಸರಸಮ್ಮ. ತಾವು ಕೊಠಡಿಯ ಬಾಗಿಲು ದಾಟುತಿದ್ದಂತೆಯೇ ಸರಸಮ್ಮ, ತುಂಗಮ್ಮ ಜಲಜೆಯರತ್ತ ನೋಡಿ ಮುಗುಳ್ನಕ್ಕರು.

"ನೋಡಿದಿರಾ ಅಕ್ಕ? ನಿಮ್ಮಿಂದಾಗಿ ಇವತ್ತು ಅವರಿಬ್ರೂ ಬಚಾಯಿಸ್ಕೊಂಡರು."

"ಹ್ಯಾಗೆ?"

"ಮತ್ತೆ? ಅವರಿಬ್ರನ್ನೂ ಇಲ್ಲೇ ಇರಿಸಿ ನಮಗೆ ತಿಂಡಿ ಕೊಡೋ ಕಾಗುತ್ತಾ? ಅದಕ್ಕಾಗಿ ಕ್ಷಮಿಸಿಬಿಟ್ಟಿದ್ದಾರೆ."

"ಹಾಗೇನು?"

"ಅಯ್ಯಮ್ಮ....ಇಲ್ದೆಹೋದ್ರೆ ಅಷ್ಟು ಸುಲಭವಾಗಿ ಬಿಟ್ಟು ಬಿಡ್ತಾರೆಯೇ ದೊಡ್ಡಮ್ಮ!"

ತಾವು ಅಲ್ಲಿದ್ದು ನಿಜವಾಗಿಯೂ ಹಾಗಾದರೆ ಆ ಇಬ್ಬರು ಹುಡುಗಿಯರಿಗೆ ಉಪಕಾರವಾದಂತಾಯಿತೆಂದು ತುಂಗಮ್ಮನಿಗೆ ಸ್ವಲ್ಪ ಸಮಾಧಾನವೆನಿಸಿತು.

ಆಮೇಲೆ ಐದು ನಿಮಿಷಗಳಲ್ಲೆ "ಕಿಕಿವಿಕಿ ಕಿಕಿ" ಎಂದು ಸದ್ದು ಮಾಡುತ್ತಾ ಒಬ್ಬಳು ಹುಡುಗಿ ತಿಂಡಿಯ ಎರಡು ತಟ್ಟೆಗಳನ್ನೆತ್ತಿಕೊಂಡು ಬಂದಳು. ಒಂದರಲ್ಲಿ ಬ್ರೆಡ್ಡಿನ ತುಣುಕುಗಳು; ಇನ್ನೊಂದರಲ್ಲಿ ಉಪ್ಪಿಟ್ಟು. ಅದನ್ನು ತುಂಗಮ್ಮ ಜಲಜೆಯರ ಮುಂದಿಟ್ಟು, ಮತ್ತೊಮ್ಮೆ "ಕಿಕಿವಿಕಿ ಕಿಕಿ" ಎನ್ನುತ್ತಾ, ಹಲ್ಲು ಕಿರಿಯುತ್ತಾ, ಆಕೆ ಹೊರ ಹೋದಳು.

"ಮೂಗಿ," ಎಂದಳು ಜಲಜ.

ತುಂಗಮ್ಮನಿಗೆ ಅದು ತಿಳಿದಿತ್ತು.

ಆದರೆ ಮಗುವಿನಂತಹ ಆ ಮುಗ್ಧ ಸೌಂದರ್ಯ!

"ಅವಳಿಗೆ ಹದಿನಾಲ್ಕು ವರ್ಷ. ಎಂಟು ತಿಂಗಳಾಯ್ತು ಇಲ್ಲಿಗೆ ಬಂದು."

ಮಾತು ಬರುತಿದ್ದರೆ ಆಕೆ, ಯಾವ ಸುಂದರನ ಪ್ರಿಯತಮೆಯಾಗುತಿದ್ದಳೊ!

ಮೂಗಿ ಮತ್ತೆ ಬಂದಳು. ಅವಳ ಕೈಯಲ್ಲಿ ಎರಡು ಲೋಟಗಳಿದ್ದುವು. ಒಂದರಲ್ಲಿ ಹಾಲು, ಇನ್ನೊಂದರಲ್ಲಿ ಕಾಫಿ. ಹಾಲನ್ನು ಜಲಜೆಯ ಮುಂದಿಟ್ಟು, ತುಂಗಮ್ಮನನ್ನು ನೋಡಿ "ಅದನ್ನು ಮುಟ್ಟಬೇಡ, ಅದು ನಿನಗಲ್ಲ" ಎನ್ನುವಂತೆ ಸನ್ನೆಮಾಡಿದಳು. ಕಾಫಿಯ ಲೋಟವನ್ನು ತುಂಗಮ್ಮನ ಕೈಗೇ ಕೊಟ್ಟು ಆಕೆ ನಕ್ಕಳು. ಅವಳ ದೃಷ್ಟಿ ತುಂಗಮ್ಮನ ಬಸಿರಿನತ್ತ ಹೋಯಿತು. ಬಸಿರನ್ನು ನೋಡುತ್ತ ಆಕೆಗೇ ಲಜ್ಜೆಯಾಗಿ ಮುಖ ಕೆಂಪೇರಿತು.

"ಊಯ್ ಊಯ್—ಅ—ಊ"

—ಎಂದು ಆಕೆ ಕಿಟಕಿಯ ಹೊರನೋಡುತ್ತಾ ಏನೋ ಸದ್ದು ಮಾಡಿದಳು.

ನಿನ್ನ ಕಾಫಿ ತಿಂಡಿ ಯಾಯಿತೇ ? ಎಂದು ಕೈಸನ್ನೆಯಿಂದ ಕೇಳಿದಳು ಜಲಜ.

ಆಗಿರಲಿಲ್ಲ.

ಹೋಗು ಹಾಗಾದರೆ—ಎಂದಳು ಜಲಜ ಮೂಗಿಯ ಭಾಷೆಯಲ್ಲೇ.

ಆಕೆ ಮತ್ತೊಮ್ಮೆ 'ಕಿಕಿವಿಕಿ' ಸದ್ದುಮಾಡಿದಳು. ತುಂಗಮ್ಮನನ್ನು ನೋಡಿ ನಕ್ಕಳು. 'ಹೀಂ' ಎಂದಳು. ವೈಯಾರವಾಗಿ ಜಡೆಯನ್ನು ಕೊರಳಿಗೆ ಸುತ್ತುಗಟ್ಟಿ ಹೊರಟು ಹೋದಳು.

ತುಂಗಮ್ಮನ ಗಂಟಲಿನಿಂದ ಉಪ್ಪಿಟ್ಟಿನ ತುತ್ತುಗಳು ಸುಲಭವಾಗಿ ಕೆಳಕ್ಕಿಳಿಯಲಿಲ್ಲ. ಕಾಫಿಯ ಗುಟುಕುಗಳನ್ನು ಸುರಿದು ಉಪ್ಪಿಟ್ಟನ್ನು ಕೆಳಕ್ಕೆ ತಳ್ಳಬೇಕಾಯಿತು.

ಎಷ್ಟೊಂದು ಜನ ಎಂಥೆಂಥ ಸಂಕಟಗಳನ್ನು ಅನುಭವಿಸುತ್ತಾರೆ !—ಆ ಯೋಚನೆಯಿಂದ ತುಂಗಮ್ಮನ ಹೃದಯ ಭಾರವೂ ಆಯಿತು ; ಲೋಕದಲ್ಲಿ ಕಷ್ಟ ಅನುಭವಿಸುವವಳು ತಾನೊಬ್ಬಳೇ ಅಲ್ಲವೆಂದು ಹಗುರವೂ ಆಯಿತು.

## ೪

ಸ್ನಾನ ಮುಗಿಸಿ ಬಂದಳು ತುಂಗಮ್ಮ.

ಆಕೆಯ ಪಾಲಿಗೆ ಹೊತ್ತು, ಸಮಾಧಾನ-ಅಸಮಾಧಾನಗಳ ಜಗ್ಗಾಟದಲ್ಲಿಯೆ ಕಳೆಯಿತು.

ಟಕಾ-ಟಕ್ ಎಂದು ಬಾಗಿಲು ತಟ್ಟಿದ ಸದ್ದಾಯಿತು ಹತ್ತು ಗಂಟೆಯ ಸುಮಾರಿಗೆ.

"ಟೀಚ ಬಂದ್ರು," ಎಂದಳು ಜಲಜ.

"ಟೀಚ ?"

"ಹೂಂ. ಪಾಠ ಹೇಳ್ಕೊಡೋರು."

"ಓ !"

ಸರಸಮ್ಮ ಬಾಗಿಲ ಬಳಿಸಾರಿ, ಸೊಂಟದಿಂದ ಬೀಗದ ಕೈ ಗೊಂಚಲನ್ನೆತ್ತಿ ಬೀಗ ತೆಗೆದುದನ್ನ ಕುತೂಹಲದಿಂದ ತುಂಗಮ್ಮ ನೋಡಿದಳು.

"ಒಳ್ಳೆ ಜೈಲು ಇದ್ದ ಹಾಗಿದೆ ಅಲ್ವಾ ?"

—ಎನ್ನುತ್ತ ಜಲಜ ನಕ್ಕಳು.

"ಇಡೀ ದಿನ ಬೀಗ ಹಾಕಿಯೇ ಇರ್ತಾರ ?"

"ಹೂಂ. ಮತ್ತೆ."

"ಯಾಕೆ ?"

"ಅಯ್ಯೊ ನೀವೆ! ನಾವು. ಓಡಿ ಹೋದರೆ ಏನ್ರಿ ಮಾಡೋದು ?"

ಕಣ್ಣೀರಲ್ಲೆ ಕೈ ತೊಳೆಯುವ ಹತಭಾಗಿನಿಯರೇ ಎಲ್ಲರೂ ಆಗಿರುವ, ಪರಸ್ಪರ ಅನುತಾಪ ಸಹಾನುಭೂತಿಯದೇ ಆದ, ವಾತಾವರಣ ಒಂದೆಡೆ. ಆ ಕಲ್ಪನೆಯ ನೋವಿನಲ್ಲೂ ಸುಖವಿತ್ತು. ಇತ್ತ, ಓಡಿ ಹೋಗಬಯಸುವವರನ್ನೊ ನಾಲ್ಕು ಗೋಡೆಗಳ ನಡುವೆ ಬಂಧಿಸಿ ಇಡುವಂತಹ ಚಿತ್ರ ಇನ್ನೊಂದೆಡೆ. ಅದು, ಹೃದಯ ಮತ್ತಷ್ಟು ಭಾರವಾಗುವಂತಹ ಕಲ್ಪನೆಯಾಗಿತ್ತು.

ಅಂತಹ ಯೋಚನೆಯ ನಡುವಿನಲ್ಲೂ ತುಂಗಮ್ಮ ಬಾಗಿಲಿನತ್ತ ನೋಡಿದಳು. ಅಭಾಗಿನಿಯರಿಗೆ ಪಾಠ ಹೇಳಿಕೊಡುವ ಅಧ್ಯಾಪಿಕೆ ಒಳ ಬಂದರು.

....ಅದೇ ಆಗ ಮೂವತ್ತು ದಾಟಿದ್ದ ಯೌವನ; ಆಧುನಿಕ ಬೆಡಗು ಬಿನ್ನಾಣ; ಇದ್ದ ಸೌಂದರ್ಯಕ್ಕೇ ಆಕೆ ಅಲಂಕಾರ ಮಾಡಿಕೊಂಡಿದ್ದರು.

ಸುವಾಸನೆಯು ಗಾಳಿಯಾಗಿ ಬೀಸುತ್ತ ಆಫೀಸು ಕೊಠಡಿಯೊಳಕ್ಕೆ ಆಕೆ ಬಂದೊಡನೆ ಜಲಜ, "ನಮಸ್ತೆ ಟೀಚ," ಎಂದಳು.

"ಎದ್ಬಿಟ್ಯಾ? ಗುಡ್...."

ರೂಪ ಸುಂದರ ನಿಜ. ಆದರೆ ಸ್ವರ ಇಂಪಾಗಿರಲಿಲ್ಲ.

ಅಧ್ಯಾಪಿಕೆಯ ದೃಷ್ಟಿ ತುಂಗಮ್ಮನನ್ನು ತೂಗಿ ನೋಡಿತು.

ಅದನ್ನು ಕಂಡ ಸರಸಮ್ಮ ಹೇಳಿದರು:

"ಈಕೆ ತುಂಗಮ್ಮಾಂತ. ಹೊಸಬಳು. ನಿನ್ನೆ ರಾತ್ರೆ ಅಡ್ಮಿಟಾಯ್ತು."

ಸಂಕೋಚಪಡುತ್ತ ತುಂಗಮ್ಮ ತನಗೆ ಹೊಸಬಳಾದ ಆ ಹೆಂಗಸಿಗೆ ಕೈಮುಗಿದಳು.

"ನಮಸ್ತೆ!"

—ಎಂದರು ಅಧ್ಯಾಪಿಕೆ. ಉತ್ತರದ ಜತೆಯಲ್ಲಿ ಮುಗುಳು ನಗೆ ಇತ್ತು. ಆ ಮುಗುಳು ನಗೆಯೊಡನೆ ತನ್ನ ಹಿರಿಮೆಯನ್ನು ಸಾರುವ ಗಾಂಭೀರ್ಯ ಬೆರೆತಿತ್ತು.

ಅವರನ್ನು ನೋಡುತ್ತಲೆ, ತನಗರಿಯದಂತೆಯೇ ತುಂಗಮ್ಮನ ಮನಸ್ಸು ಮುದುಡಿಕೊಂಡಿತು.

ಸರಸಮ್ಮ ಮತ್ತು ಅಧ್ಯಾಪಿಕೆ ಹೊರ ಹೋದೊಡನೆ ಜಲಜ, ತುಂಗಮ್ಮನ ಮುಖವನ್ನೆ ನೋಡಿದಳು. ಕೇಳು ಪ್ರಶ್ನೆ—ಎನ್ನುವಂತಿತ್ತು ಆ ನೋಟ ಆದರೆ ತುಂಗಮ್ಮ ಮಾತನಾಡಲಿಲ್ಲ. ಆ ಮೌನವನ್ನು ಸಹಿಸದೆ ಜಲಜೆಯೇ ಕೇಳಿದಳು:

"ಹ್ಯಾಗಿದಾರೆ ನಮ್ಮ ಟೀಚ?"

"ಚೆನ್ನಾಗಿದಾರೆ."

"ನೋಡೋಕೆ,—ಅಲ್ಲ?"

"ಹುಂ ?"

"ಜಂಭದ ಕೋಳಿ! ಟಿಸ್‌ಪಿಸ್ ಎರಡಿಂಗ್ಲಿಷು ಬರತ್ತೇಂತ ಹ್ಯಾಗಾಡ್ತಾರೆ!"

ತುಂಗಮ್ಮನಿಗೆ ನಗು ಬಂತು. ಆ ಅಧ್ಯಾಪಿಕೆ ಪಾತ್ರಳಾಗದೇ ಇರುವುದು ತನ್ನೊಬ್ಬಳ ಮೆಚ್ಚುಗೆಗೆ ಮಾತ್ರವೇ ಅಲ್ಲ ಹಾಗಾದರೆ.

"ನಂಗೂ ಅವರ್‍ನ ನೋಡ್ದಾಗ ಹಾಗೇ ಅನಿಸ್ತು ಜಲಜ."

"ಯಾರಿಗಾದರೂ ಅನಿಸುತ್ತೆ."

"ಅವರಿಗೆಷ್ಟೊ ಸಂಬಳ ?"

"ಎಪ್ಪತ್ತು ರೂಪಾಯಿ ಕೊಡ್ತಾರೆ ತಿಂಗಳಿಗೆ."

"ದೊಡ್ಡಮ್ಮನಿಗಿಂತಾನೂ ದೊಡ್ಡೋರಹಾಗೆ ತೋರಿಸ್ಕೊಳ್ತಾರೆ ಅಲ್ವೆ ?"

"ಹೂಂ-ಹೂಂ-.....ಮೊದಲು ಒಳ್ಳೆಯೋರೇ ಒಬ್ಬರಿದ್ರು. ಬೇರೆ ಕಡೆ ಕೆಲಸ ಸಿಕ್ತೂಂತ ಹೊರಟೋದ್ರು. ಆಮೇಲೆ ಕಮಿಟಿಯೋರ್‍ನ ಹಿಡ್ದು ಏನೋ ಮಾಡಿ ಬಂದರು ಈ ಮಹಾರಾಯ್ತಿ."

"ಕಮಿಟಿಯೋರು ?"

"ಹೂಂ. ಅಭಯಧಾಮಾನ ನೋಡ್ಕೊಳ್ಳೋ ಕಮಿಟಿ ಇಲ್ವೆ ?"

"ಓ, ಅವರೇ ದೊಡ್ಡಮ್ನಿಗೂ ಸಂಬಳ ಕೊಡ್ತಾರೇನು ಹಾಗಾದ್ರೆ ?"

"ನೋಡಿದ್ರಾ ? ಎಷ್ಟು ಬೇಗ ತಿಳಕೊಂಡ್ಬಿಟ್ರಿ! ನಮ್ಮಲ್ಲೇ ಕೆಲವಿವೆ. ಅವಕ್ಕೆ ಎಷ್ಟು ಹೇಳಿದ್ರೂ ಅರ್ಥವಾಗಲ್ಲ. ನಮ್ಮನ್ನೆಲ್ಲಾ ಕೂಡಹಾಕಿರೋದರಲ್ಲಿ ಏನೋ ಮೋಸ ಇದೆ ಅಂತಲೇ ಅವರಯೋಚ್ನೆ. ದೊಡ್ಡಮ್ಮನಿಗೆ ಇದರಿಂದ ಲಾಭ ಬರತ್ತಂತೆ!"

ಆ ಮಾತು ಪ್ರಿಯವಾಗಿರಲಿಲ್ಲ. ತಮ್ಮೊಳಗಿನ ಕೆಲವರನ್ನು ತಾವೇ ದೂಷಿಸುವುದು ಸರಿಯೆ ? ಹಾಗೆ ನೋಡಿದರೆ, ಅದು, ದೂಷಣೆಯಾಗುವುದು ಸುಳ್ಳಾಗುವುದು ಸಾಧ್ಯವಿರಲ್ಲ. ಜಲಜ ಸುಳ್ಳಾಡುವಳೆಂದು ನಂಬುವುದು ಸಾಧ್ಯವೇ ಇರಲಿಲ್ಲ.

ಜಲಜ ಹೇಳಿದುದು ಸತ್ಯವಾಗಿದ್ದುದರಿಂದಲೇ ತುಂಗಮ್ಮನ ಮುಖ ಬಾಡಿತು.

ಮತ್ತೆ ಅಸಮಾಧಾನದ ಆಳದಲ್ಲಿ ಮನಸಿನ ಸಂಚಾರ.

ಆದರೆ, ಕಾರುಣ್ಯಮಯಿಯಾದ ದೊಡ್ಡಮ್ಮನ ಮಾತುಗಳು, ಸ್ನೇಹ ಮಯಿಯಾದ ಜಲಜೆಯ ಮಾತುಗಳು, ಸಮಾಧಾನದ ಎತ್ತರಕ್ಕೆ ತುಂಗಮ್ಮ ನನ್ನು ಎಬ್ಬಿಸುತಿದ್ದುವು....

ಮತ್ತೊಮ್ಮೆ ಮೌನ ನೆಲೆಸಿದಾಗ ಜಲಜೆಯೇ ಮಾತುತೆಗೆದಳು:

"ತುಂಗಕ್ಕ, ನಿಮಗೆ ಕಥೆ ಅಂದರೆ ಇಷ್ಟಾನಾ?"

"ಹೂಂ. ಯಾಕೆ?"

"ಎಂಥಾ ಕಥೆ?"

"ಎಂಥಾದ್ದು ಅಂದರೆ ಏನು ಹೇಳ್ಲಿ?"

"ರಾಜಕುಮಾರ—ರಾಜಕುಮಾರಿ ಕತೆ ಹಿಡಿಸುತ್ತಾ?"

ತುಂಗಮ್ಮನಿಗೆ ನಗು ಬಂತು. ಜಲಜ ನೊಂದುಕೊಂಡಳು ಆ ನಗುನೋಡಿ.

"ಹೋಗಲಿ ಬಿಡಿ. ಅಲ್ಲ, ನೀವು ಓದೇ ಇಲ್ವೇನೊ! ಈಗ ಚಂದಮಾಮ ಅಂತ ಒಂದು ಕತೆ ಪುಸ್ತಕ ತಿಂಗಳು ತಿಂಗಳಿಗೂ ಬರತ್ತೆ ನೋಡಿ ದೀರಾ?"

"ನೋಡಿದೀನಿ."

"ಚೆನ್ನಾಗಿರತ್ತೆ ಅಲ್ವೆ? ಬೊಂಬೇನೂ ಹಾಕಿರ್‍ತಾರೆ!"

ಹದಿನೆಂಟರ ಹುಡುಗಿ ಜಲಜ ಎಳೆಯಮಗುವಿನ ಹಾಗೆ ಚಂದಮಾಮ ಓದುತ್ತಾಳೆ! ಮಾವಳ್ಳಿಯ ಮನೆಯಲ್ಲಿದ್ದಾಗಲೂ ಅದಕ್ಕಿಂತಲೂ ಹಿಂದೆ ತುಮಕೂರಿನಲ್ಲೂ ತುಂಗಮ್ಮನೂ ಚಂದಮಾಮ ಪತ್ರಿಕೆಯನ್ನು ನೋಡಿ ದ್ದಳು. ಎಳೆಯ ಹುಡುಗರ ಹಾಗೆ ಮನೆಯ ಹಿರಿಯರೂ ಅದನ್ನೋದು ವುದನ್ನು ಕಂಡಿದ್ದಳು.

"ನನ್ನ ತಮ್ಮ ಕೊಂಡ್ಕೊಂಡು ಬರ್‍ತಿದ್ದ"

—ಎಂದಳು ತುಂಗಮ್ಮ, ತನಗರಿಯದಂತೆಯೇ.

"ತಮ್ಮ?"

"ಹೂಂ. ಚಿಕ್ಕೋನು. ನಮ್ಮೂರಲ್ಲಿದಾನೆ."

ಜಲಜ ಒಮ್ಮೆಲೆ ಮೌನವಾದಳು. ಹತ್ತಾರು ಯೋಚನೆಗಳು ಆಕೆಯ

ಮನಸ್ಸನ್ನು ಸುತ್ತುವರಿದುವು. ತುಂಗಮ್ಮ ದೊಡ್ಡ ಸಂಸಾರವಂದಿಗಳು ಹಾಗಾದರೆ. ಆಕೆಗೆ ತಮ್ಮನೂ ಇದ್ದ. ತನಗೆ?

ಯೋಚನೆಯೇ ಸ್ವರ ತಳೆದು ಹೊರಟ ಹಾಗೆ ಜಲಜೆಯ ಮಾತು ಬಂತು:

"ನನಗೆ ಯಾರೂ ಇಲ್ಲ!"

—ನಿಧಾನವಾಗಿ, ಕುಗ್ಗಿದ ಸ್ವರದಲ್ಲಿ, ಅಳುವಿನ ಅಲೆಯಂತೆ ಬಂದ ಮಾತು. ತುಂಗಮ್ಮನಿಗಾದರೋ ಸಂಬಂಧಿಕರಿದ್ದರು. ಆದರೆ ಇದ್ದೂ ಏನಾಗಿತ್ತು? ಅಂತೂ, ತಾನು ಮತ್ತು ಜಲಜ ಇಬ್ಬರಿಗೂ ಆಸರೆಯನ್ನಿತ್ತುದು ಅಭಯಧಾಮವೇ ಅಲ್ಲವೆ?

ಇದು ನಿಜವಾಗಿದ್ದರೂ ಏಕಾಕಿನಿಯೆಂದು ಭಾವಿಸಿ ನೊಂದಿದ್ದ ಜಲಜೆಯನ್ನು ತಾನು ಸಂತೈಸಬೇಕೆಂದು ತುಂಗಮ್ಮನಿಗೆ ತೋರಿತು.

"ನಿನ್ನ ತಾಯಿಗೆ ನೀನೊಬ್ಬಳೇ ಮಗಳಾ ಜಲಜ?"

"ಸಂಗೊತ್ತಿಲ್ಲ ತುಂಗಕ್ಕ. ತಾಯಿನ ಯಾರು ನೋಡಿದಾರೆ?"

"ಪಾಪ! ನೀನು ಕೂಸಾಗಿದ್ದಾಗಲೇ ತೀರಿಕೊಂಡ್ರೆ?"

"ಆ ವಿಷಯ ನಂಗೇನು ಗೊತ್ತು ತುಂಗಕ್ಕ?"

ತುಂಗಮ್ಮನ ಗಂಟಲು ಕಟ್ಟಿಕೊಂಡಿತು. ಮುಂದೇನು ಹೇಳಬೇಕೋ ಆಕೆಗೆ ಹೊಳೆಯಲಿಲ್ಲ.

ಜಲಜೆಯೇ ತಡೆ ತಡೆದು ಉಗುರಿನಿಂದ ನೆಲ ಕೆರೆಯುತ್ತ ಒಂದೆರಡು ವಿಷಯ ಹೇಳಿದಳು....

....ಕಡು ಬಡವರಾದ ತಾಯಿತಂದೆ ತಮ್ಮ ಏಳು ಮಕ್ಕಳೊಡನೆ ಗುಳೆ ಹೊರಟು ಎಲ್ಲಿಂದಲೋ ಬಂದಿದ್ದರಂತೆ. ಜಲಜ ಆಗ ನಾಲ್ಕು ವರ್ಷಗಳ ಮುದ್ದಾದ ಮಗು. ಶ್ರೀಮಂತರೊಬ್ಬರ ಮಕ್ಕಳಿಲ್ಲದ ಯುವಕ ಹೆಂಡತಿ ಬೇಡಿ ಕಾಡಿ ಆ ಮಗುವನ್ನು ಇಸಕೊಂಡಳಂತೆ. ಆಕೆಯ ಪರವಾಗಿ ಮನೆಯ ಕೆಲಸದವಳು ಮಗುವನ್ನು ಸಾಕಿದಳು. ಆ ಶ್ರೀಮಂತರ ಮನೆಯ ವರಿಟ್ಟ ಹೆಸರು ಜಲಜ. ಆ ಮೇಲೆ ಎರಡು ವರ್ಷಗಳಲ್ಲೆ ಮನೆಯೊಡತಿ ಹೆಣ್ಣು ಮಗುವನ್ನೆ ಹೆತ್ತಳು. ಆ ಹೊಸ ಬೊಂಬೆಯ ಆಗಮನದ ಸಂಭ್ರಮ ದಲ್ಲಿ ಹಳೆಯ ಬೊಂಬೆ ಮೂಲೆ ಪಾಲಾಯಿತು. ದೊಡ್ಡ ಮನೆಯ ಆವರಣದ

ಮೂಲೆಯ ಸಣ್ಣ ಹಟ್ಟಿಯಲ್ಲಿ ಕೆಲಸದವರ ನಡುವೆ ಪುಟ್ಟ ಹುಡುಗಿ ಜಲಜ ಬೆಳೆದಳು. ಮನೆಯ ಮಗಳ ಜತೆಗಾತಿಯೆಂದು ಶಾಲೆಗೂ ಹೋದಳು. ಬೇಗನೆ ಮನೆಯ ಕೆಲಸದವಳೂ ಆದಳು. ಅದು ಸಾವಿನಂತಹ ಬದುಕು.... ಆ ಸಂಕಟ ಸಹಿಸಲಾರದೆ, ಲಂಗ ಕಳೆದು ಸೀರೆಯುಡುವ ಹೊತ್ತಿಗೆ ಜಲಜ ಓಡಿ ಹೋದಳು. ಹೊರಗೆ ಪಿಶಾಚಿಗಳು ಆಕೆಗಾಗಿ ಕಾದಿದ್ದುವು. ಒಳ್ಳೆಯ ವರೊಬ್ಬರು ಹುಡುಗಿಯನ್ನು ರಕ್ಷಿಸಿ ಅಭಯಧಾಮದ ವಶಕ್ಕೊಪ್ಪಿ ಸಿದರು....

"ಏಳು ಜನವಂತೆ ನಾವು. ನನಗಿಂತಲೂ ಚಿಕ್ಕದು ಒಂದಿತ್ತಂತೆ. ಕೈಗೂಸು. ಅದೂ ಹೆಣ್ಣೇ. ಉಳಿದ ಐವರಲ್ಲಿ ಅಣ್ಣಂದಿರೆಷ್ಟೋ ಅಕ್ಕಂದಿ ರೆಷ್ಟೋ! ತಂದೆ-ತಾಯಿ ನೋಡೋಕೆ ಹ್ಯಾಗಿದ್ದರೊ!....ಇಷ್ಟನ್ನೂ ನಂಗೆ ಹೇಳಿದ್ದು ನನ್ನ ಸಾಕಿ ದೊಡ್ಡೋಳಾಗಿ ಮಾಡ್ದ ಕೆಲಸದೋಳು. ನಂಗೆ ಹತ್ತು ವರ್ಷವಾಗಿದ್ದಾಗ್ಲೆ ಅವಳು ಸತ್ಹೋದ್ಲು ಪಾಪ! ಆಕೆ ಬದುಕಿ ಇದ್ದಿದ್ರೆ ಬಹುಶಃ ನಾನು ಇಲ್ಲಿಗೆ ಬರ್‍ತಿರ್‍ಲಿಲ್ವೊ ಏನೊ!...."

ಅಷ್ಟು ಹೇಳಿ ಜಲಜೆ ನಿಟ್ಟುಸಿರು ಬಿಟ್ಟಳು.

"ಹೋಗಲಿ ಬಿಡಿ ಇದೆಲ್ಲಾ....ಹೇಳೋಕೆ ಬೇಜಾರು," ಎಂದಳು.

ಹಾಗಲ್ಲವೆಂದು ಸಂತೈಸುವ ಮಾತನ್ನಾಡಬೇಕೆಂದು ತುಂಗಮ್ಮನಿಗೆ ಅನಿಸಿತು. ಆದರೆ ತಡವರಿಸಿತು ನಾಲಿಗೆ.

ಎರಡು ನಿಮಿಷಗಳಲ್ಲೆ ಜಲಜ, ದುಃಖವನ್ನು ಹೊತ್ತು ತಂದಿದ್ದ ಮೋಡ ದೂರ ಸರಿಯಿತೇನೊ ಎಂಬಂತೆ, ಮುಗುಳ್ನಕ್ಕಳು.

"ನಿಮಗೊಂದು ತಮಾಷೆ ಗೊತ್ತಾ ತುಂಗಕ್ಕ?"

"ಏನಮ್ಮಾ?"

"ನಾನು ಬೇರೆ ಹುಡುಗೀರಿಗೆ ರಾಜಕುಮಾರ-ರಾಜಕುಮಾರಿ ಕತೆ ಹೇಳ್ತಾ ಇದ್ದರೆ ದೊಡ್ಡಮ್ಮ ಯಾವಾಗ್ಲೂ ನನ್ನ ಗೇಲಿ ಮಾಡ್ತಾರೆ, ರಾಜಕುಮಾರಿ-ಅಂತಾರೆ!"

"ಒಳ್ಳೆಯವರು ದೊಡ್ಡಮ್ಮ."

"ಅವರು ಏನಂತಾರೆ ಗೊತ್ತೇನು? ನಿಜವಾದ ಜೀವನಕ್ಕಿಂತ ಹೆಚ್ಚು ಸ್ವಾರಸ್ಯವಾದ ಕಥೆಯೇ ಬೇರೆ ಇಲ್ಲವಂತೆ. ನಾವೀಗ ಇಲ್ಲಿ, ನಿಮ್ಮನ್ನೂ

ಸೇರಿಸಿ, ಮೂವತ್ತೊಂದು ಜನ ಇದೀವಲ್ಲ. ನಮ್ಮ ಒಬ್ಬೊಬ್ಬರ ಜೀವನ ಚರಿತ್ರೇನೂ ಒಂದು ಒಳ್ಳೊಳ್ಳೆ ಕತೆ ಆಗತ್ತೇಂತ ಅವರ ಅಭಿಪ್ರಾಯ."

ಆ ಮಾತು ನಿಜವೇ-ಅನಿಸಿತು ತುಂಗಮ್ಮನಿಗೆ. ಉದಾಹರಣೆಗೆ ತನ್ನದೇ ಕತೆ. ತನಗಾದುದನ್ನೆಲ್ಲ ಬರೆದಿಟ್ಟರೆ, ಯಾವ ಒಳ್ಳೆಯ ಕಾದಂಬರಿ ಗಿಂತ ಕಡಿಮೆ ಎನಿಸೀತು ಆ ವಿಷಯ ?

"ದೊಡ್ಡಮ್ಮ ತುಂಬಾ ತಿಳ್ಕೊಂಡೋರು ಜಲಜ."

"ಆದರೆ ರಾಜಕುಮಾರ ರಾಜಕುಮಾರಿ ಇಲ್ದೆ ಕತೆ ಹ್ಯಾಗಾಗುತ್ತೆ ತುಂಗಕ್ಕ ?"

ವಯಸ್ಸಿನಲ್ಲಿ ಜಲಜೆಗಿಂತ ತುಸುಮಾತ್ರ ಹಿರಿಯಳಾದರೂ, ತಾನು ನಿಜವಾಗಿಯೂ ಹೆಚ್ಚು ವಯಸ್ಸಾದ ಹಿರಿಯಕ್ಕನೇ ಎಂಬ ಭಾವನೆಯಿಂದ ತುಂಗಮ್ಮ, ಪ್ರೀತಿಯಿಂದ ಮುಗುಳ್ನಗುತ್ತ ಜಲಜೆಯ ಮುಗ್ಧ ಮುಖವನ್ನೆ ದಿಟ್ಟಿಸಿದಳು.

ಮೌನಕ್ಕೂ ಜಲಜೆಗೂ ಕಡುದ್ವೇಷವೋ ಏನೊ !

ಮತ್ತೊಮ್ಮೆ ಆಕೆಯೇ ಬಾಯಿ ತೆರೆದಳು.

"ನಿನ್ನೆ ರಾತ್ರಿ ನಿಮ್ಹೆಸರೇನ್ರೀ ಅಂತ ಕೇಳ್ದೆ."

"ಹೂಂ. ಹೌದು."

"ನೀವು ತುಂಗಮ್ಮಾಂದ್ರಿ."

ಮಾತಿನ ಈ ಹೊಸರೀತಿ ಅರ್ಥವಾಗಲಿಲ್ಲ ತುಂಗಮ್ಮನಿಗೆ. ಆದರೆ, ಆಕೆಗೆ ಅರ್ಥವಾಯಿತೋ ಇಲ್ಲವೋ ಎಂದು ಜಲಜ ಯೋಚಿಸಬೇಕಲ್ಲವೆ ?

"ನೀವು ತುಂಗಮ್ಮಾಂತ ಅಂದಾಗ ನನಗೆಷ್ಟು ನಿರಾಶೆಯಾಯ್ತೂಂತ ?"

ಈಗ ತುಂಗಮ್ಮನಿಗೆ ಆಶ್ಚರ್ಯವೇ ಆಯಿತು. ಎಂತಹ ವಿಚಿತ್ರ ಹುಡುಗಿ ಈ ಜಲಜ !

"ಯಾಕಮ್ಮ ?"

"ನಿಮ್ಮ ಹೆಸರು ಪ್ರೇಮಲತಾನೋ ಪುಷ್ಪಲತಾನೋ ಇರಬಹುದೂಂತಿದ್ದೆ."

"ಹೂಂ !!"

"ಆ ಹೆಸರು ಚೆನ್ನಾಗಿರತ್ತೆ ಅಲ್ವಾ ?"

"ಅಂತೂ ತುಂಗಮ್ಮ ಅನ್ನೋದು ಲಾಯಕ್ಕಾಗಿಲ್ಲಾನ್ನು."

"ಹಾಗಲ್ಲ ತುಂಗಕ್ಕ. ನಿಮ್ಹೆಸರು ಚೆನ್ನಾಗೆ ಇದೆ. ಆದರೂ ಪ್ರೇಮಲತಾ ಅಥವಾ ಪುಷ್ಪಲತಾಂತ ಇದ್ದಿದ್ರೆ ?"

"ಏನಾಗ್ತಿತ್ತೊ ?"

"ಒಬ್ಬ ರಾಜಕುಮಾರ ಒಬ್ಬಳು ರಾಜಕುಮಾರೀನ ಪ್ರೀತಿಸೋದು. ಪ್ರೀತಿಸಿ ಆದ್ಮೇಲೆ ಕೈ ಬಿಟ್ಬಿಡೋದು. ರಾಜಕುಮಾರಿ ಗರ್ಭಿಣಿ ಆಗಿ ಸಂಕಟ ಪಟ್ಕೊಂಡು ಅಭಯಾಶ್ರಮಕ್ಕೆ ಬರೋದು.... ಹಾಗೆ ಬಂದೋಳಿಗೆ ಪ್ರೇಮಲತಾ ಅಥವಾ ಪುಷ್ಪಲತಾ ಅಂತ ಹೆಸರಿದ್ದಿದ್ರೆ ?"

"ಥೂ ! ಥೂ !"

ತುಂಗಮ್ಮನ ಮುಖ ಕೆಂಪಗಾಯಿತು.

"ನಿಮ್ಮನ್ನ ನೋಡಿದ್ಮೇಲೆ ನೀವು ರಾಜಕುಮಾರಿ ಅಲ್ಲ ಅನ್ನೋದು ನನಗೆ ಗೊತ್ತಾಯ್ತೂಂತಿಟ್ಕೊಳ್ಳಿ. ರಾಜಕುಮಾರಿ ಇಂಥಾ ಸೀರೇಲೆ ಬರೋದು ?"

"ಹೋಗಮ್ಮ! ನೀನೊಬ್ಬಳು ಹುಚ್ಚಿ !"

ಆ ಮಾತು ಕೇಳಿ ಜಲಜೆಯ ತೆರೆದಬಾಯಿ ಹಾಗೆಯೇ ನಿಂತಿತು. ತೇವವಾಗಿದ್ದ ಕಣ್ಣುಗಳು ಮಿನುಗಿದುವು.

"ಇನ್ನೊಮ್ಮೆ ಹೇಳಿ ಅಕ್ಕ ಅದನ್ನ."

"ಏನು ?"

"ಅದೇ, ಅಂದ್ರಲ್ಲ."

"ಅಂದದ್ದು ತಪ್ಪಾಯ್ತು ಜಲಜ."

"ಅಯ್ಯೊ ಅಕ್ಕ ! ನೀನು - ನೀನು - ಅನ್ನಿ ಅಕ್ಕ ನನ್ನ !.... ಥೂ ! ನಿಮಗೊಂದೂ ತಿಳಿಯೋಲ್ಲ."

ತುಂಗಮ್ಮನಿಗೀಗ ಅರ್ಥವಾಯಿತು. ಆಕೆ ಜಲಜೆಯನ್ನು ಸಂಬೋಧಿಸಿದಾಗ, ಸಲಿಗೆಯ ಸುಳಿಯಲ್ಲಿ ಒಮ್ಮೆಂಮೊಮ್ಮೆಲೆ ನೀವು ನೀನಾಗಿತ್ತು.

ತುಂಗಮ್ಮ ಬಳಿಗೆ ಬಂದು ಜಲಜೆಯ ಮುಂಗುರುಳು ನೇವರಿಸಿದಳು.

"ನೀನೂ ಅಷ್ಟೆ ಜಲಜ. ಅಕ್ಕನಾದರೇನಂತೆ? ಹೋಗು ಬಾ ಅಂತ಼್ೇ ಮಾತಾಡಮ್ಮ."

"ನನ್ನಕ್ಕ!"

....ಅದು ಎರಡು ಜೀವಗಳನ್ನು ಜತೆಯಾಗಿ ಹೊಸೆದ, ಒಂದಾಗಿ ಬೆಸೆದ, ಮಧುರ ಬಂಧನ.

ಅದಕ್ಕಿಂತಲೂ ಮಿಗಿಲಾದುದು ಬದುಕಿನಲ್ಲಿ ಬೇರೊಂದು ಉಂಟೆ—ಎಂದು ತೋರಿತು ತುಂಗಮ್ಮನಿಗೆ.

ಆಗೊಮ್ಮೆ ಮೌನ ತನ್ನ ವಿಜಯವನ್ನು ಸಾರಿತು. ಅಮೃತವನ್ನೆ ತುಂಬಿಕೊಂಡ ಜಲಜೆಯ ಹೃದಯದ ಕೊಡ ಮತ್ತೆ ತುಳುಕಲಿಲ್ಲ.

ಬಹಳ ಹೊತ್ತಾದ ಮೇಲೆ ಸರಸಮ್ಮ ಬಂದರು. ಬಂದವರೇ, ಏನನ್ನೋ ಬರೆಯುವುದರಲ್ಲಿ ಮಗ್ನರಾದರು.

ಪಾಠ ಮುಗಿಸಿಕೊಂಡು ಅಧ್ಯಾಪಿಕೆ ಒಳ ಬರುತ್ತಲೇ ಸರಸಮ್ಮ "ಹೊರಡ್ತೀರಾ ರಾಜಮ್ಮ?" ಎಂದು ಕೇಳಿದರು.

"ಹೂಂ ಕಣ್ರೀ...."

ಆದರೂ ಆಕೆ ಹೊರಡುವ ಲಕ್ಷಣ ಕಾಣಿಸಲಿಲ್ಲ. ಅವರ ದೃಷ್ಟಿ ತುಂಗಮ್ಮನ ಮೇಲೆಯೇ ನೆಟ್ಟಿತು.

"ಈ ಹುಡುಗಿ ಹಿಸ್ಟರೀ ಶೀಟು ಬರಕೊಂಡ್ರಾ ?"

ತುಂಗಮ್ಮ ಗಾಬರಿಯಾದಳು. ಆದರೆ ಅಂತಹ ಪ್ರಶ್ನೆಯೊಂದೂ ಸರಸಮ್ಮನಿಗೆ ಇಷ್ಟವಿರಲಿಲ್ಲವೆನ್ನುವುದು ಅವರ ಮುಖ ಚರ್ಯೆಯಿಂದಲೇ ಸ್ಪಷ್ಟವಾಗಿತ್ತು.

"ಇನ್ನೂ ಇಲ್ಲ...."

"ನಿನ್ನೆ ರಾತ್ರೇನೆ ಅಲ್ವೆ ಆಕೆ ಬಂದಿದ್ದು ?"

ಉತ್ತರವಿತ್ತ ಸರಸಮ್ಮನ ಸ್ವರ ಸ್ವಲ್ಪ ಏರಿದಂತೆ ಕೇಳಿಸಿತು. ರಾತ್ರೆ ಬಂದ ತುಂಗಮ್ಮ ಯಾವ ಸ್ಥಿತಿಯಲ್ಲಿದ್ದಳು ? ಆಗ ಅವಳ ಚರಿತ್ರೆಯನ್ನು ಕೇಳಿ ಬರೆದುಕೊಳ್ಳುವುದು ಸಾಧ್ಯವಿತ್ತೆ ? ಅಷ್ಟೂ ತಿಳಿಯ ಬಾರದೆ ಈ ರಾಜಮ್ಮನಿಗೆ ? - ಎಂದೆಲ್ಲಾ ಯೋಚಿಸಿದರು ಸರಸಮ್ಮ, ಮುಗುಳು ನಗಲೆತ್ನಿಸಿ ಅಂದರು :

"ಬಂದೋರಿಗೆ ಸ್ವಲ್ಪ ವಿಶ್ರಾಂತಿ ಕೊಡೋಣಾಂತ ಹಾಗೆಯೇ ಬಿಟ್ಟಿದೀನಿ!"

"ಓ ಸರಿ! ಬರ್ತೀನಿ ನಾನು...."

ಸರಸಮ್ಮ ಬರೆಯುವುದನ್ನು ನಿಲ್ಲಿಸಿ, ಬಾಗಿಲಬಳಿ ಹೋಗಿ ರಾಜಮ್ಮನನ್ನು ಕಳುಹಿಸಿ ಕೊಟ್ಟು ಬಂದರು.

ಹಿಂತಿರುಗಿ ಬಂದು ಬರೆಯುವುದನ್ನು ಮುಂದುವರಿಸುತ್ತಲೇ ಅವರು ಕೇಳಿದರು:

"ಏನಮ್ಮ ತುಂಗ, ಎಲ್ಲರ್‍ನೂ ಪರಿಚಯ ಮಾಡ್ಕೊಂಡ್ಯಾ?"

"ಹೂಂ ದೊಡ್ಡಮ್ಮ...."

ಜಲಜ, ಹಾಲು ಚೆಲ್ಲಿದ ಹಾಗೆ, ಎಲ್ಲ ಹಲ್ಲುಗಳನ್ನೂ ತೋರಿಸಿ ನಕ್ಕಳು.

"ಸುಳ್ಳು ದೊಡ್ಡಮ್ಮ. ಜಲಜಾ ಪರಿಚಯ ಆದ್ರೆ ಎಲ್ಲರ್‍ನೂ ಆದ ಹಾಗೇಂತ ತಿಳಿಕೊಂಡಿದಾಳೆ ಈ ತುಂಗಕ್ಕ."

ಆ ಮಾತಿನಲ್ಲಿದ್ದ ಆತ್ಮೀಯತೆಯ ಸಲಿಗೆಯ ಧ್ವನಿಕೇಳಿ ಸರಸಮ್ಮ ಸಂತುಷ್ಟರಾದರು.

"ಅಂತೂ ನೀವಿಬ್ಬರೂ ಒಳ್ಳೇ ಸ್ನೇಹಿತರಾಗಿದೀರಲ್ಲ. ಅಷ್ಟು ಸಾಕು ಸದ್ಯಃ!"

....ಆ ಬಳಿಕ ಒಂದು ಘಂಟೆಯ ಹೊತ್ತಿಗೆ ಊಟದ ಗಂಟೆ ಬಾರಿಸಿತು.

"ನಾವು ಎಲ್ಲಿ ಕೂತ್ಕೋಬೇಕು ದೊಡ್ಡಮ್ಮ?" ಎಂದಳು ಜಲಜ.

"ನೀನು ಇಲ್ಲೇ ಇರು. ತುಂಗ ಬೇಕಾದರೆ—"

"ಊ ಹೂಂ ದೊಡ್ಡಮ್ಮ. ನಾನು ಇಲ್ಲಿರ್‍ಬೇಕಾದರೆ ಆಕೇನೂ ಇಲ್ಲೇ ಇರ್‍ಲಿ."

"ಸರೀನಮ್ಮ."

ಹಾಗೆ ಒಪ್ಪಿಗೆಯನ್ನಿತ್ತು ಸರಸಮ್ಮ ಹೊರಗೆ ಊಟದ ಉಸ್ತುವಾರಿಗೆ ಹೋದರು. ಹಜಾರದಲ್ಲಿ ತಮ್ಮ ತಮ್ಮ ತಟ್ಟೆಗಳೆದುರು ಸಾಲಾಗಿ ಕುಳಿತಿದ್ದರು ಹಸಿದ ಹುಡುಗಿಯರು....ಬಡಿಸುವ ವರೆಗೂ ಸಣ್ಣ ಪುಟ್ಟ ಜಗಳ. ಆಮೇಲಿನ ಜಗಳವೆಲ್ಲ ಕೈ-ಬಾಯಿಗೆ.

....ಮೂಗಿ, ಜಲಜೆಗಾಗಿ ಒಂದು ತಟ್ಟೆಯಲ್ಲಿ ಇಷ್ಟು ಹಾಲನ್ನ ತಂದಳು. ಬಡಿಸಿ ಸಿದ್ಧವಾಗಿದ್ದ ಇನ್ನೊಂದು ತಟ್ಟೆಯೂ ಲೋಟನೀರೂ ತುಂಗಮ್ಮನಿಗಾಗಿ ಬಂದುವು.

ಹೊಸಬಳಿಗೆ ಹೀಗೆ ಬಡಿಸಲು ತನಗೆ ಸಂತೋಷವಾಗಿದೆ ಎನ್ನುವಂತೆ ಆ ಮೂಗಿ ಸದ್ದುಮಾಡಿದಳು. ಆಕೆಯ ಹೂಂ - ಹೀಂ - ಕಿಕಿ - ಪಿಕಿ ಸ್ವರ ಕೊಠಡಿಯ ತುಂಬ ಅಲೆದಾಡಿತು. ತುಂಗಮ್ಮನಿಗಾಗಿ ತಂದಿಟ್ಟ ತಟ್ಟೆಯಲ್ಲಿ ನಜ್ಜಾಗಿದ್ದ ಒಂದು ಭಾಗವನ್ನು ಬೊಟ್ಟು ಮಾಡಿ ತೋರಿಸಿ ಮೂಗಿ ನಕ್ಕಳು.

ತುಂಗಮ್ಮನಿಗೆ ಅರ್ಥವಾಗಲಿಲ್ಲ.

" ಜಲಜ, ಇದೇನೆ ಈಕೆ ಹೇಳ್ತಿರೋದು ?" .

- ಎಂದು ತುಂಗಮ್ಮ ಜಲಜೆಯನ್ನು ಕೇಳಿದಳು.

ಮತ್ತೂ ಹೆಚ್ಚಿನ ಸದ್ದುಮಾಡಿದಳು ಮೂಗಿ. ತಟ್ಟೆಯನ್ನು ಜಲಜೆಗೆ ತೋರಿಸುತ್ತಾ, 'ನಿನಗೆ ಗೊತ್ತಿಲ್ಲವೇನೆ ? ಈ ತುಂಗನಿಗೆ ಅರ್ಥವೇ ಆಗಲ್ವಂತೆ....ನೀನು ಸ್ವಲ್ಪ ವಿವರಿಸಿ ಹೇಳೇ....' ಎನ್ನುವಂತೆ ಮೂಗಿ ಅಭಿನಯಿಸಿದಳು.

ಜಲಜೆಗೆ ವಿಷಯ ಅರ್ಥವಾಯಿತು. ಮುಖ ಅರಳಿತು. ಆದರೂ ಆಕೆ ಬಾಯಿ ಬಿಡಲಿಲ್ಲ.

" ಏನಮ್ಮಾ ಅದು ?"

- ಎಂದು ತುಂಗಮ್ಮ ಮತ್ತೊಮ್ಮೆ ಕೇಳಿದಳು.

'ಹೇಳೇ ಹೇಳೇ' ಎಂದು ಮೂಗಿ ಅಭಿನಯಿಸಿದಳು ಮತ್ತೊಮ್ಮೆ.

'ನೀನು ಹೋಗಿ ಊಟಮಾಡು. ಆಮೇಲೆ ಹೇಳ್ತೀನಿ. ಊಟ ವಾದ್ಮೇಲೆ ಹೇಳ್ತೀನಿ' ಎಂಬ ಅಭಿನಯದ ಆಶ್ವಾಸನೆಯ ಬಳಿಕ ಮೂಗಿ ಕೊಠಡಿಯ ಹೊರಹೋದಳು.

ಜಲಜೆ ಸುಮ್ಮನಿದ್ದುದನ್ನು ನೋಡಿ ತುಂಗಮ್ಮ ಕೇಳಿದಳು :

" ಅದೇನು ಅನ್ತಾ ಇದ್ದಿದ್ದು ಆಕೆ ?"

ಜಲಜ ನಕ್ಕಳು.

" ಹೇಳ್ಲೀ ಬೇಕೇನು ? ಅದು ಇನ್ನೊಂದು ಕಥೆಯೇ ಆಗತ್ತೆ."

" ರಾಜಕುಮಾರ - ರಾಜಕುಮಾರಿ ಕಥೇನೇನೊ !"

ತುಂಗಮ್ಮನ ಆ ಉತ್ತರಕ್ಕಿಂತಲೂ ತಾನು ಹೇಳಬೇಕಾದುದನ್ನು ಸ್ಮರಿಸಿಕೊಂಡು ಜಲಜ 'ಹೊ ಹ್ಹೊ' ಎಂದು ಬಿದ್ದು ಬಿದ್ದು ನಕ್ಕಳು. ಆ ಗದ್ದಲದಲ್ಲಿ, ಗಂಟಲಿನ ಹಾದಿಯಲ್ಲಿ ಸಾಗಿದ್ದೊಂದು ಅನ್ನದ ಅಗಳು ಅಡ್ಡವಾಗಿ ಹಿಡಿದು 'ಎಕ್ಕತ' ವೆಬ್ಬಿಸಿತು. ತುಂಗಮ್ಮ ತನ್ನ ಎಡ ಅಂಗೈಯಿಂದ ಜಲಜೆಯ ನಡುನೆತ್ತಿಗೆ ತಟ್ಟಿ, ಪರಿಸ್ಥಿತಿಯನ್ನು ಹತೋಟಿಗೆ ತರಲು ನೆರವಾದಳು.

ಅದಾದಮೇಲೆಯೂ ಜಲಜ ಸಣ್ಣನೆ ನಗುತ್ತಲೇ ಇದ್ದಳು.

ತುಂಗಮ್ಮನಿಗೆ ರೇಗಿತು.

"ಸಾಕು ಸಾಕೇ. ನಗೋದನ್ನಾದರೂ ನಿಲ್ಸು. ಹೇಳದೇ ಹೋದರೆ ಅಷ್ಟೇ ಹೋಯಿತು. ಎಷ್ಟೊಂದು ಬಡಿವಾರ!"

"ಕೋಪಿಸ್ಕೋಬೇಡ ನನ್ನಕ್ಕ,"

— ಎಂದಳು ಜಲಜ. ಆ ಬಳಿಕ ಸೂಕ್ಷ್ಮವಾಗಿ ತುಂಗಮ್ಮನನ್ನೊಮ್ಮೆ ನೋಡಿ ಹೇಳಿದಳಾಕೆ:

"ಇವತ್ತು ಬೇಡ ಅಕ್ಕ. ಇನ್ನೊಂದು ದಿನ ಹೇಳ್ತೀನಿ. ಆದರೆ ಇವತ್ತು ಖಂಡಿತ ಬೇಡ."

ನಿರ್ಧಾರದ ಆ ಧ್ವನಿಯ ಮುಂದೆ ತುಂಗಮ್ಮ ಹೆಚ್ಚು ವಾದಿಸಲಿಲ್ಲ.

ಸರಸಮ್ಮ ಒಳ ಬಂದವರು ಕೇಳಿದರು:

"ಅಡುಗೆ ರುಚಿಯಾಗಿದೆಯೆ ತುಂಗಾ?"

ಉಣ್ಣುತ್ತಲಿದ್ದ ತುಂಗಮ್ಮ ಅದನ್ನು ಗಮನಿಸಿಯೇ ಇರಲಿಲ್ಲ. ಆದರೆ ಹಾಗೆಂದು ಹೇಳುವ್ರುದುಂಟೆ?

"ಚೆನ್ನಾಗಿದೆ ದೊಡ್ಡಮ್ಮ."

ಅದೇ ಸರಿಯಾದ ಉತ್ತರವೆಂಬಂತೆ ಸರಸಮ್ಮ ಹೇಳಿದರು:

"ನಮ್ಮ ಹುಡುಗೀರ್ದೆ ಅಡುಗೆ. ದಿನಕ್ಕೆ ಮೂವರಹಾಗೆ ಬ್ಯಾಚ್ ಗೊತ್ತು ಮಾಡಿದೀವಿ."

"ಹೂಂ."

ತುಂಗಮ್ಮ 'ಹೂಂ' ಎಂದುದಕ್ಕೆ ಏನೂ ಅರ್ಥವಿರಲಿಲ್ಲವೇನೋ. ಆದರೆ ಇಷ್ಟು ಮಾತ್ರ ನಿಜ. ಅಡುಗೆಯನ್ನು ಯಾರು ಮಾಡಿದವರು, ಯಾವ ಜನ, ಎಂಬ ಯೋಚನೆಯೇ ಆಕೆಗೆ ಹೊಳೆದಿರಲಿಲ್ಲ.

ತನ್ನಲ್ಲಾದ ಬದಲಾವಣೆಯನ್ನು ಗುರುತಿಸಿ ತುಂಗಮ್ಮನಿಗೇ ಆಶ್ಚರ್ಯ ವಾಯಿತು.

....ಎಲ್ಲರ ಊಟವಾದ ಬಳಿಕ ಸರಸಮ್ಮನ ಊಟ.

....ಅದಾದ ಮೇಲೆ ಹಜಾರದಲ್ಲಿ ಸಾರಿಸುವುದು, ತೊಳೆಯುವುದು.... ವಿರಾಮ.

ಜಲಜೆಯೂ ತುಂಗಮ್ಮನೂ ಸ್ವಲ್ಪಹೊತ್ತು ಅಡ್ಡಾದರು.

ತುಂಗಮ್ಮನಿಗೆ ನಿದ್ದೆ ಬರಲಿಲ್ಲ. ಆಕೆ ಎದ್ದು, ಅಲ್ಲೇ ಇದ್ದ ಬೀರುವಿನಿಂದ ಕೈಗೆ ದೊರೆತೊಂದು ಕನ್ನಡ ಪುಸ್ತಕವನ್ನೆತ್ತಿಕೊಂಡಳು.

ಅದನ್ನು ಕಂಡ ಜಲಜ ಹೇಳಿದಳು:

"ಅಕ್ಕಾ. ನಾನು ನಿದ್ದೆ ಹೋಗ್ತೀನಿ. ಆ ಕಥೇನೆಲ್ಲ ಓದ್ಬಿಟ್ಟು ಆಮೇಲೆ ನಂಗೆ ಹೇಳಕ್ಕ."

"ಹೂಂ. ಜಲಜ."

ಆ ಆಶ್ವಾಸನೆ ದೊರೆತ ಬಳಿಕ ಆಕೆಗೆ ನಿದ್ದೆ ಬರುವುದು ತಡವಾಗಲಿಲ್ಲ.

ಆದರೆ ಕಥೆ ಪುಸ್ತಕವನ್ನು ಓದುವುದಾಗಲಿಲ್ಲ ತುಂಗಮ್ಮನಿಗೆ.

ದೊಡ್ಡಮ್ಮ ಕುರ್ಚಿಯಲ್ಲಿ ಕುಳಿತು, ಮೇಜಿನಮೇಲೆ ದಾಖಲೆಯ ದೊಡ್ಡ ಪುಸ್ತಕವನ್ನು ಬಿಡಿಸುತ್ತಾ, ತುಂಗಮ್ಮನನ್ನು ಬಳಿಗೆ ಕರೆದರು.

"ಮಂಚದ ಮೇಲೆ ಕೂತ್ಕೊ ತುಂಗಾ" ಎಂದರು.

ಆಕೆ ಬಂದು ಕುಳಿತೊಡನೆ ಅವರು ಹೇಳಿದರು.

"ನಿನ್ನ ಹಿಸ್ಟರೀ ಷೀಟು ಬರೆಯೋಣವೇನೆ?"

"ಅಂದರೇನು ದೊಡ್ಡಮ್ಮ?"

"ನಿನ್ನ ಈವರೆಗಿನ ಜೀವನದ ಸೂಕ್ಷ್ಮಪರಿಚಯ."

"ಹೂಂ ದೊಡ್ಡಮ್ಮ...."

೫

"ನಾನು ದುರ್ಭಾಗ್ಯೆ ದೊಡ್ಡಮ್ಮ, ನನ್ನ ವಿಷಯ ಏನುಹೇಳ್ಲಿ?"

"ಎಲ್ಲರೂ ಈ ಪ್ರಪಂಚದಲ್ಲಿ ಭಾಗ್ಯವಂತರಾಗೋದು ಸಾಧ್ಯವೆ ತುಂಗ?"

"ನಾನು ತಪ್ಪು ಮಾಡಿದೀನಿ ದೊಡ್ಡಮ್ಮ."

"ಮಗೂ, ತಪ್ಪು ಮಾಡದೇ ಇರೋರ್‍ನ ಯಾರನ್ನಾದರೂ ತೋರಿಸ್ತೀಯ?"

"........."

"ನಿಂಗ್ಗೊತ್ತಿಲ್ಲ ತುಂಗ. ಯಾವತ್ತಾದರೊಮ್ಮೆ ಪ್ರತಿಯೊಬ್ಬರೂ ತಿಳಿದೋ ತಿಳೀದೆಯೋ ಏನಾದರೊಂದು ತಪ್ಪು ಮಾಡಿಯೇ ಮಾಡ್ತಾರೆ."

ಎಷ್ಟೋ ತಿಂಗಳ ಮೇಲೆ ತಿಳಿವಳಿಕೆಯ ಹಿರಿಯರೊಬ್ಬರಿಂದ ಬಂದ ಸಹಾನುಭೂತಿಯ ಈ ಮಾತುಗಳು, ತುಂಗಮ್ಮನ ಅಳಲಿನ ಅಣೆಕಟ್ಟನ್ನು ಕುಲುಕಿದುವು. ಫಳಕ್ಕನೆ ಚಿಮ್ಮಿಬಂದ ಕಣ್ಣೀರು, ಬತ್ತದ ಒರತೆಯಾಗಿ ನಿರ್ಲಜ್ಜವಾಗಿ ಎರಡೂ ಕೆನ್ನೆಗಳ ಮೇಲಿಂದ ಹರಿಯಿತು.

ಸರಸಮ್ಮ, ಅಭಯಧಾಮದ ನಿವಾಸಿಗಳ ಪೂರ್ವ ಚರಿತ್ರೆ ಬರೆದು ಕೊಳ್ಳುವ ಆ ದೊಡ್ಡ ಪುಸ್ತಕವನ್ನು ಮುಚ್ಚಿದರು. ಕನ್ನಡಕವನ್ನು ತೆಗೆದು ಮೇಜಿನಮೇಲಿರಿಸಿದರು. ಒಂದು ಅಂಗೈಯಲ್ಲಿ ಇನ್ನೊಂದನ್ನು ಇರಿಸಿ ಕುರ್ಚಿಗೊರಗಿ ಕಾಲು ನೀಡಿ ತುಂಗಮ್ಮನನ್ನೇ ದಿಟ್ಟಿಸುತ್ತ ಕುಳಿತರು. ಆಡಳಿತದ ಸಮಿತಿಯವರೇನೋ ನಿಯಮ ನಿಬಂಧನೆಗಳನ್ನು ಗೊತ್ತುಮಾಡಿದ್ದರು. ಏಕಪ್ರಕಾರವಾದ ಪ್ರಶ್ನಾವಳಿ....ಆ ಪ್ರಶ್ನೆಗಳಿಗೆ ದೊರಕಿಸಿಕೊಳ್ಳಬೇಕಾದ ಉತ್ತರಗಳು...ಎಲ್ಲವೂ ವ್ಯವಸ್ಥಿತ, ಕ್ರಮಬದ್ಧ. ಆದರೆ ಮಾನವ ಜೀವಿಗಳು ಏಕ ಪ್ರಕಾರವಾಗಿಲ್ಲ ಅಲ್ಲವೆ? ಒಂದಕ್ಕಿಂತ ಇನ್ನೊಂದು ಎಷ್ಟೊಂದು ವಿಭಿನ್ನ! ಸರಸಮ್ಮ ಅದನ್ನು ತಿಳಿದಿದ್ದರು. ಹೆಚ್ಚು ಕಡಿಮೆ ಪ್ರತಿಸಾರೆಯೂ

ಅವರಿಗೆ ಅದೇ ಅನುಭವವಾಗಿತ್ತು. ಒಂದೊಂದೇ ಪ್ರಶ್ನೆಕೇಳಿ ಅನುಕ್ರಮ ವಾಗಿ ಉತ್ತರ ದೊರಕಿಸಿಕೊಳ್ಳುವುದು ಸಾಧ್ಯವಾಗುತ್ತಲೇ ಇರಲಿಲ್ಲ.

ಈ ಸಲವೂ ಅಷ್ಟೇ....

ಯಾವುಯಾವುದೋ ನೆನಪಾಗಿ ತುಂಗಮ್ಮ ಬಿಕ್ಕಿ ಬಿಕ್ಕಿ ಅತ್ತಳು.

ಆಕೆಗೆ "ಅಳಬೇಡ" ಎನ್ನಲಿಲ್ಲ ಸರಸಮ್ಮ. ಅಂತಹ ಸಂದರ್ಭಗಳಲ್ಲಿ ಯಾವಾಗಲೂ ಅವರು ಹಾಗೆ ಹೇಳುತ್ತಿರಲಿಲ್ಲ. ಕಣ್ಣೀರು ಒಂದಷ್ಟು ಸುರಿದು ಹೋದರೇನೆ, ದುಃಖಿನಿಯಾದ ಹೆಣ್ಣಿಗೆ ಸಮಾಧಾನವಾಗುತ್ತದೆಂಬುದನ್ನು ಅವರು ತಿಳಿದಿದ್ದರು.

ಆದರೆ, ಹುಡುಗಿಯರು ಅಳದೇ ಇದ್ದ ಸಂದರ್ಭಗಳೂ ಇದ್ದುವು. ಪೋಲೀಸರು ಸೂಳೆಗೇರಿಯಿಂದಲೋ ಬೀದಿಗಳಿಂದಲೋ ಹಿಡಿದು ತಂದ ಹುಡುಗಿಯರು ಮಾತನಾಡಲು ನಿರಾಕರಿಸುತಿದ್ದರು; ಸರಸಮ್ಮ ಅಂಥವರ ದೃಷ್ಟಿಯಲ್ಲಿ ವೈರಿ; ವೈರಿಯನ್ನು ದುರುಗುಟ್ಟ ನೋಡುವುದೇ ಅವರು ಕೊಡುತ್ತಿದ್ದ ಉತ್ತರ. ಆಗ ಸರಸಮ್ಮನ ಸಹಾನುಭೂತಿಗಿಂತಲೂ ಪೋಲೀಸರ ದಂಡ ಹೆಚ್ಚು ಕೆಲಸ ಮಾಡುತಿತ್ತು. ಸರಸಮ್ಮನೂ ಹೆಚ್ಚು ಚಾಕಚಕ್ಯತೆಯನ್ನುಪಯೋಗಿಸಿ ವರ್ತಿಸುತಿದ್ದರು.

ತುಂಗಮ್ಮನೋ, ತಾನಾಗಿಯೇ ಬಂದು ಅಭಯ ಕೇಳಿದ ಹೆಣ್ಣು. ಹಿಂದಿನ ರಾತ್ರೆ ತುಂಗಮ್ಮನನ್ನು ಒಳಕ್ಕೆ ಹೊತ್ತು ತಂದಾಗಲೇ ಸರಸಮ್ಮನಿಗೆ ತಿಳಿದಿತ್ತು - ಆಕೆ ಅನ್ಯಾಯಕ್ಕೆ ಒಳಗಾದ ಸಾಧು ಜೀವವೆಂಬುದು. ಅಂಥವ ರಿಂದಲೇ ಅಭಯಧಾಮಕ್ಕೆ ಒಳ್ಳೆಯ ಹೆಸರು ಬರುತಿತ್ತು. ಸುತ್ತು ಮುತ್ತಲೂ ಅಂಥವರಿದ್ದಾಗಲೇ ಬಲ ಬರುತಿತ್ತು ಸರಸಮ್ಮನ ಬಾಹು ಗಳಿಗೆ; ತನ್ನ ಬದುಕು ಸಾರ್ಥಕ ಎನಿಸುತ್ತಿತ್ತು.

....ಮತ್ತೂ ಕೆಲವು ನಿಮಿಷ ಅತ್ತು ತುಂಗಮ್ಮ ಸುಮ್ಮನಾದಳು. ಕ್ರಮೇಣ ಉಸಿರಿನ ಸುಂಯ್ ಸುಂಯ್ಲಾಟವೂ ನಿಂತಿತು.

" ಯಾವುದಮ್ಮ ನಿಮ್ಮೂರು ?"

"....ತುಮಕೂರು ದೊಡ್ಡಮ್ಮ...."

ಆ ಊರಿನ ಹೆಸರು ಸರಸಮ್ಮನ ಮೇಲೆ ಬೇರೆಯೇ ಪರಿಣಾಮ ಮಾಡಿತು."

"ಓ!" ಎಂದರು ಅವರು. "ತುಮಕೂರ್‍ಏ! ನನ್ನ ಅಕ್ಕಿಗೇ ಕೊಟ್ಟಿದ್ರು ತುಂಗ."

ಕ್ಷಣಕಾಲ ತನ್ನದಲ್ಲದ ಬೇರೆ ವಿಷಯವನ್ನು ಯೋಚಿಸುವ ಅವಕಾಶ....

"ನಿಮಗೆ ತುಮಕೂರು ಗೊತ್ತಾ ದೊಡ್ಡಮ್ಮ?"

"ಊ ಹೂಂ. ಗೊತ್ತೂಂತ ಹ್ಯಾಗಮ್ಮ ಹೇಳ್ಲಿ? ಇಪ್ಪತ್ನೇ ವರ್ಷಕ್ಕೇ ನಾನು ವಿಧವೆಯಾದೆ. ಆಗ ವಾಪಸು ಬಂದವಳು ತಿರ್ಗಾ ಆ ಊರಿನ ಮುಖ ನೋಡಿಲ್ಲ....ಇವೆಲ್ಲಾ ಮೂವತ್ತು ವರ್ಷಗಳ ಹಿಂದಿನ ಮಾತು."

ಸರಸಮ್ಮ ಮಾತು ನಿಲ್ಲಿಸಿದ ಬಳಿಕ ತಾನು ಮುಂದೇನು ಹೇಳ ಬೇಕೆಂಬುದು ತುಂಗಮ್ಮನಿಗೆ ತೋಚಲಿಲ್ಲ. ಆಕೆಯ ಆ ಅಸಹಾಯತೆಯನ್ನು ಗಮನಿಸಿ ಸರಸಮ್ಮನೇ ಮಾತನಾಡಿದರು.

"ಊರಲ್ಲಿ ನಿಮ್ಮನೇಲಿ ಯಾರ್‍ಯಾರು ಇದಾರಮ್ಮ?"

"ತಂದೆ. ಮೇಷ್ಟ್ರು. ಈ ಏಪ್ರಿಲ್‌ನಲ್ಲೇ ರಿಟೈರಾಗುತ್ತೆ. ತಮ್ಮ, ಮಿಡ್ಲ್ ಸ್ಕೂಲು ಪರೀಕ್ಷೆ ಕಟ್ಟಿದಾನೆ ಈ ವರ್ಷ. ಇವರಿಬ್ಬರೇ ದೊಡ್ಡಮ್ಮ.

"ಓ! ಎಷ್ಟು ವರ್ಷವಾಯ್ತು ತಾಯಿಹೋಗಿ?"

"ನಾನು ಚಿಕ್ಕೋಳಿದ್ದಾಗ್ಲೇ ಹೊರಟು ಹೋದ್ರು."

"ಪಾಪ! ಏನಾಗಿತ್ತು?"

"ಬಾಣಂತಿತನ ದೊಡ್ಡಮ್ಮ, ನನ್ನ ತಮ್ಮ ಹುಟ್ಟಿದ್ಮೇಲೆ ಬಹಳ ವರ್ಷ ಗರ್ಭ ನಿಂತಿರ್ಲಿಲ್ಲ....ಗರ್ಭಿಣಿಯಾದಾಗ ಅದೇ ಕೊನೆಯಾಯ್ತು."

....ಸಮಿತಿಯವರು ಗೊತ್ತುಮಾಡಿದ್ದ ಪ್ರಶ್ನಾವಳಿಗೆ ಈ ಮಾಹಿತಿ ಯೊಂದೂ ಬೇಕಾಗಿರಲಿಲ್ಲ. ಆದರೆ, ಹೀಗೆ ಮಾತು ಆರಂಭಿಸಿದರೆ ಮಾತ್ರ ತಮಗೆ ಬೇಕಾದ ಉತ್ತರಗಳು ಸಿಗುತ್ತವೆಂಬುದನ್ನು ಸರಸಮ್ಮ ಅನುಭವ ದಿಂದ ತಿಳಿದಿದ್ದರು.

"ನೀನು ಇಲ್ಲಿಗೆ ಬಂದಿರೋದು ನಿಮ್ಮ ತಂದೆಗೆ ಗೊತ್ತೆ ತುಂಗಾ?"

ಆ ಪ್ರಶ್ನೆ ತುಂಗಮ್ಮನ ಹೃದಯವನ್ನು ಹಿಂಡಿತು. ಕಣ್ಣೆವೆಗಳು ಮತ್ತೊಮ್ಮೆ ಒದ್ದೆಯಾದುವು. ಕಂಠ ಗದ್ಗದಿತವಾಯಿತು.

“ಇಲ್ಲ ದೊಡ್ಡಮ್ಮ. ಈ ಐದು ತಿಂಗಳು ನಾನು ಈ ಊರಲ್ಲೇ ಇದ್ದೆ, ಮಾವಳ್ಳೀಲಿ. ಇಲ್ಲಿಂದಲೇ ಬಂದೆ. ಅಪ್ಪನಿಗೆ ಗೊತ್ತಿಲ್ಲ. ಇನ್ಮೇಲೆ ಕಾಗದ ಬರೀ ಬೇಕು ದೊಡ್ಡಮ್ಮ.”

“ಬರೆಯೋಣ, ಬರೆಯೋಣ.”

“ನಮ್ಮಪ್ಪ ನೊಂದ್ಕೋತಾರೆ. ಅವರಿಗೆ ನಾನು ಈಗಾಗ್ಲೇ ಕೊಡಬಾರದ ಹಿಂಸೆ ಕೊಟ್ಟಿದೀನಿ.”

“.......”

“ಆತ....ಆತ ಹೀಗ್ಮಾಡ್ತಾರೇಂತ ನನಗೆ ಗೊತ್ತಿರಲಿಲ್ಲ....”

ಕಿವಿಗೊಡುತ್ತಲಿದ್ದ ಸರಸಮ್ಮ ನಿಟ್ಟುಸಿರು ಬಿಟ್ಟರು. ಅದೇ ಮಾತನ್ನು ಹಿಂದೆಯೂ ಕೆಲವು ಸಾರೆ ಕೇಳಿದ್ದರಾಕೆ....‘ಆತ ಹೀಗ್ಮಾಡ್ತಾರೇಂತ.... ಗೊತ್ತಿರಲಿಲ್ಲ....’

....ತಡೆ ತಡೆಯುತ್ತ, ನಡುನಡುವೆ ಅಳುತ್ತ, ಸುಧಾರಿಸಿಕೊಳ್ಳುತ್ತ ಅಲ್ಲಿಂದ ಇಲ್ಲಿಂದ ಅಷ್ಟಿಷ್ಟು ಆಯ್ದು ತುಂಗಮ್ಮ ತನ್ನ ಬಾಳಿನ ಕತೆ ಹೇಳಿದಳು. ಕೇಳುತ್ತ ಕೇಳುತ್ತ, ಒಂದಕ್ಕೊಂದು ಜೋಡಿಸಿ ಸರಿಪಡಿಸಿ ಅರ್ಥ ಮಾಡಿಕೊಂಡರು ಸರಸಮ್ಮ....

....ಆಕೆಯ ಬದುಕಿನ ಈ ಅಧ್ಯಾಯದ ಆರಂಭವಾದುದು ನಾಲ್ಕು ವರ್ಷಗಳ ಹಿಂದೆ, ಅಕ್ಕನ ಮದುವೆಯದಿನ. ಹದಿನಾಲ್ಕು ದಾಟಿದ್ದ ಹುಡುಗಿ ತುಂಗ ಆ ಸಂಭ್ರಮದಲ್ಲಿ ಲವಲವಿಕೆಯಿಂದ ಓಡಿಯಾಡುತಿದ್ದಳು. ಮೈಸೂರಿನಿಂದ ವರನ ದಿಬ್ಬಣ ಬಂದಿತ್ತು. ಆ ದಿಬ್ಬಣದಲ್ಲಿ ವರನ ಸಂಬಂಧಿಕರೊಬ್ಬರ ಸಂಸಾರವಿತ್ತು. ಆ ಸಂಸಾರದವಳಾಗಿದ್ದ ಹುಡುಗಿಯೊಬ್ಬಳು ತುಂಗನ ಗೆಳೆತನ ಸಂಪಾದಿಸಿಕೊಂಡಳು. ಬೃಂದಾವನ, ಚಾಮುಂಡಿಬೆಟ್ಟ, ಮೃಗಾಲಯ, ಅರಮನೆಗಳ ವರ್ಣನೆಯನ್ನು ಕೇಳುತ್ತ, ಆ ಸಮವಯಸ್ಕಳಿಗೆ ತುಂಗ ಮಾರು ಹೋದಳು.

ಅಕ್ಕನ ಮದುವೆಯ ಓಡಾಟದಲ್ಲಿ ಆ ದಿನ ತಂಗಿಗೆ ಬಿಡುವಿರಲಿಲ್ಲ. ಆದರೂ ಆಕೆ ಆಗೊಮ್ಮೆ ಈಗೊಮ್ಮೆ ಮೈಸೂರಿನ ಗೆಳತಿಯೊಡನೆ ಮಾತನಾಡದೆ ಇರುತಿರಲಿಲ್ಲ.

ಅಂತಹ ಒಂದು ಮಾತುಕತೆಯಲ್ಲಿ ಆತನ ವಿಚಾರ ಬಂತು.

"ನಮ್ಮಣ್ಣನ್ನ ನೋಡಿದ್ಯಾ ತುಂಗಮ್ಮಾ?"

"ನಿಮ್ಮಣ್ಣ? ಎಲ್ಲಿ? ಬಂದಿದಾರೇನು?"

"ಅಲ್ನೋಡು ವರನ ಹತ್ತಿರ ಕೂತಿರೋದು."

"ಅವರೇನಾ?"

"ಯಾಕೆ ಹಾಗಂತೀಯ? ಚೆನ್ನಾಗಿಲ್ವೇನು?"

ತುಂಗಮ್ಮನ ಮುಖ ಕೆಂಪೇರಿತು.

"ನೀನು ಹೋಗಮ್ಮ. ಹಾಗಂದ್ನೇ ನಾನು?"

"ಹಾಗ್ಬಾ. ತುಂಬಾ ಷೋಕಿಯವನು ನಮ್ಮಣ್ಣ. ನೋಡು ನಿನ್ನೇ ನೋಡ್ತಿದಾನೆ!"

"ಥೂ ಹೋಗೆ!"

"ಓ! ನಾಚ್ಕೆ ಅಷ್ಟರಲ್ಲೇ? ನಮ್ಮಣ್ಣ ನಿನಗೊಳ್ಳೇ ಜೋಡಿ ತುಂಗಮ್ಮ."

ಸೊಗಸುಗಾರನ ಹಾಗೆಯೇ ಇದ್ದ ಆ ಯುವಕ. ತನ್ನನ್ನು ಆತ ನೋಡುತ್ತಿದ್ದುದೂ ನಿಜವಾಗಿತ್ತು. ಆ ಮದುವೆಯ ಚಪ್ಪರದಲ್ಲಿ, ನೆರೆದಿದ್ದ ಜನರೆಡೆಯಲ್ಲಿ, ಮಂಗಳವಾದ್ಯದ ಹಿನ್ನೆಲೆಯಲ್ಲಿ ತುಂಗಮ್ಮನೂ ಆತನನ್ನು ಕದ್ದುಕದ್ದು ನೋಡಿದಳು. ಆತ ಮುಗುಳ್ನಗುತ್ತಿದ್ದ. ಲಜ್ಜೆ ತಡೆಯಾದರೂ ನೋಡಿದಷ್ಟೂ ನೋಡಬೇಕೆನಿಸುತಿತ್ತು.

ಮದುವೆಯ ಪೂರ್ಣಕಲ್ಪನೆ ತುಂಗಮ್ಮನಿಗೆ ಆಗ ಇರಲಿಲ್ಲ. ಆದರೂ ಮದುವೆಯ ಯೋಚನೆಯಿಂದ ಆಕೆಗೆ ಸಂತೋಷವಾಗುತಿತ್ತು. ವಧುವಾಗಿ ಸಿಂಗರಿಸಿಕೊಂಡು ಕುಳಿತಿದ್ದ ಅಕ್ಕ ಸುಖಿಯಾಗಿದ್ದುದನ್ನು ಕಂಡಾಗ, ಆ ಸುಖ ಒಂದು ದಿನ ತನ್ನದೂ ಆಗುವುದೆಂದು ತುಂಗಮ್ಮ ನಂಬಿದ್ದಳು.

ಮೈಸೂರಿನ ಹುಡುಗಿ ಹೇಳಿದ್ದಳು:

"ಬಿ. ಎ. ಲಿ ಓದ್ತಿದಾನೆ ನಮ್ಮಣ್ಣ. ಇನ್ನೆರಡುವರ್ಷ....ಆಮೇಲೆ ದೊಡ್ಡ ಕೆಲ್ಸ ಸಿಗತ್ತೆ. ಆಗ ಸಿದ್ಧವಾಗಿರ್ಬೇಕಮ್ಮ ನೀನು!"

ಮದುವೆಯದಿನ ಆ ವಿಷಯ ಅಷ್ಟರಲ್ಲೇ ಮುಕ್ತಾಯವಾಗಿರಲಿಲ್ಲ.

ಆ ಸಂಜೆ ಸಂಗೀತ ಕಛೇರಿ ನಡೆಯಿತು. ಗಾಯಕ ವಿದ್ವಾಂಸರು ಚೆನ್ನಾಗಿ ಹಾಡಿದರೋ ಇಲ್ಲವೋ ತುಂಗಮ್ಮನಿಗೆ ತಿಳಿದಿರಲಿಲ್ಲ.

ವಧೂವರರಿಗೆ ಎಷ್ಟೋಜನ ಉಡುಗೊರೆ ಓದಿಸಿದರು. ತನ್ನ ಅಕ್ಕನಿಗೆ ಬಂದುದನ್ನೆಲ್ಲ ಎತ್ತಿಕೊಂಡ ತುಂಗಮ್ಮ, ಅಕ್ಕನ ಟ್ರಂಕಿನಲ್ಲಿಡಲೆಂದು ಒಳಹೋದಳು. ಮನೆಯ ಒಳ ಕೊಠಡಿಗಳೆಲ್ಲ ನಿರ್ಜನವಾಗಿದ್ದುವು. ಉಡುಗೊರೆಗಳನ್ನು ಟ್ರಂಕಿನೊಳಗಿಟ್ಟು ಬೀಗಹಾಕಿ ಬಾಗಿಲಿನತ್ತ ತಿರುಗಿದ ತುಂಗಮ್ಮ ನಿಶ್ಚೇಷ್ಟಿತಳಾಗಿ ಅಲ್ಲೇ ನಿಂತಳು.

ಆತ ಬಾಗಿಲಿಗೆ ಅಡ್ಡವಾಗಿದ್ದ. ನಗುತ್ತಲಿದ್ದ.

ತುಂಗಮ್ಮನಿಗೆ ಗಾಬರಿಯಾಯಿತು. ನಾಲಿಗೆಯೇ ಹೊರಳಲಿಲ್ಲ.

ಆತ ಕೇಳಿದ:

"ನನ್ನ ತಂಗಿ ಬಂದ್ಲಾ ಇಲ್ಲಿಗೆ?"

"ಹಾಂ? ಹೂಂ?...."

"ನನ್ನ ತಂಗಿ ಬಂದ್ಲಾ ಅಂದೆ. ಅಯ್ಯೊ, ಇಷ್ಟೊಂದು ಹೆದರ್ಕೊಂಡ್ಯಾ?"

ತನ್ನ ಮನೆಯಲ್ಲೇ ತಾನಿದ್ದೂ ಇಷ್ಟು ಅಧೈರ್ಯವೆಂದರೆ! ತುಂಗಮ್ಮ ಸುಧಾರಿಸಿಕೊಂಡು ಮುಗುಳು ನಗಲೆತ್ನಿಸಿದಳು.

ಆತನೇ ಮುಂದುವರಿಸಿದ:

"ಬರೋಕೆ ಹೇಳಿದ್ಯಂತೆ!"

"ಯಾರು? ನಾನೆ? ಇಲ್ವಲ್ಲಾ!"

"ಓ! ಸುಳ್ಳು ಬೇರೆ...."

"ಸುಳ್ಳು? ನಾನು—"

ತುಂಗಮ್ಮ ಪೂರ್ತಿಯಾಗಿ ಉತ್ತರ ಕೊಡಲು ಆತ ಬಿಡಲಿಲ್ಲ. ಕಣ್ಣವೆ ಮುಚ್ಚಿ ತೆರೆಯುವುದರೊಳಗಾಗಿ ಒಳಬಂದವನು ತುಂಗಮ್ಮನನ್ನು ತಬ್ಬಿಕೊಂಡು ಮುತ್ತಿಟ್ಟ.

ಆ ಕ್ಷಣವೆ ಆಕೆ ಹಿಡಿತದಿಂದ ಬಿಡಿಸಿಕೊಂಡಳು. ಆದರೆ ಕೂಗಾಡಲಿಲ್ಲ. ಅವನೂ ಗಾಬರಿಯಾದವನಂತೆ ಹೊರಟು ಹೋದ.

ಕಚ್ಚಿದ ಹಲ್ಲು ತೆರೆದ ತುಟಿಗಳೊಡನೆ ತುಂಗಮ್ಮ ಬಚ್ಚಲು ಮನೆಗೆ

ಹೋದಳು. ಹಂಡೆಯಿಂದ ನೀರು ತೆಗೆದು ಬಾಯಿ ತೊಳೆದಳು, ತುಟಿ ತೊಳೆದಳು. "ಥೂ! ಎಂಜಲು! ಎಂಜಲು!" ಎಂದಳು.

ಆದರೆ ಸೆರಗಿನಿಂದ ಮುಖ ಒರೆಸಿಕೊಳ್ಳುತಿದ್ದಾಗ ಏನೋ ಒಂದು ವಿಧವಾಯಿತು ತುಂಗಮ್ಮನಿಗೆ. ಅದೇ ಆಗ ಪುಟ್ಟದಾಗಿ ರೂಪುಗೊಳ್ಳುತಿದ್ದ ಎದೆ, ವೇಗದ ಉಸಿರಾಟಕ್ಕೆ ಸರಿಯಾಗಿ ಏರಿ ಇಳಿಯುತಿತ್ತು.

ಆತನನ್ನು ದ್ವೇಷಿಸಲು ಆಗಲೆ ತೀರ್ಮಾನಿಸಿದ್ದಳಾಕೆ. ಆದರೆ ಒಂದೆರಡು ನಿಮಿಷದೊಳಗೇ ಆ ತೀರ್ಮಾನ ಕುಸಿದುಬಿತ್ತು. ಮನೆಯೊಳಗೆ ಒಂದುಕ್ಷಣ ಗೋಡೆಗೊರಗಿ ಕಣ್ಣು ಮುಚ್ಚಿ ನಿಂತಳು ತುಂಗಮ್ಮ.... ಸಂತೋಷ ಪಡಬೇಕೆ ದುಃಖಪಡಬೇಕೆ ಎಂಬುದೇ ತಿಳಿಯದೆ ಹೋಯಿತು ಆಕೆಗೆ....ಆಕೆಯ ಮುಖ ಮೈ ಉರಿಯುತಿದ್ದುವು. ಹೆಚ್ಚು ಹೊತ್ತು ಅಲ್ಲಿಯೆ ನಿಂತಿರುವುದು ಸಾಧ್ಯವಿರಲಿಲ್ಲ. ಹೊರಗೆ ಅಕ್ಕ ತನ್ನ ಹಾದಿನೋಡುತಿದ್ದಳಲ್ಲವೆ? ತಂದೆ ಯಾವ ಕ್ಷಣವಾದರೂ ಬಂದು ಕರೆಯಬಹುದಲ್ಲವೆ?

ತುಂಗಮ್ಮ ಚಪ್ಪರದತ್ತ ಬಂದಳು. ಆದರೆ ಎಲ್ಲರೂ ತನ್ನನ್ನೇನೋಡುತ್ತಿದ್ದಂತೆ ಆಕೆಗೆ ಭಾಸವಾಯಿತು. ಆದರೆ ನಿಜವಾಗಿ ಮೈಸೂರಿನ ಆತನನ್ನು ಹೊರತು, ಬೇರೆಯಾರೂ ತುಂಗಮ್ಮನನ್ನು ದಿಟ್ಟಿಸುತ್ತಿರಲಿಲ್ಲ. ತುಂಗಮ್ಮ ತಲೆ ಎತ್ತಲೇ ಇಲ್ಲ. ಆತನೆಲ್ಲಾದರೂ ತನ್ನ ಕಣ್ಣಿಗೆ ಬೀಳಬಹುದೆಂದು ಆಕೆಗೆ ಭಯವಾಯಿತು.

ಅಕ್ಕ ಕೇಳಿದಳು:

"ಎಲ್ಹೋಗಿದ್ಯೇ ಇಷ್ಟೊತ್ತು?"

"ಹೂಂ?"

"ಏನ್ಮಾಡ್ತಿದ್ದೆ ಒಳಗೆ?"

"ಬಚ್ಚಲು ಮನೆಗೆ ಹೋಗಿದ್ದೆ ಅಕ್ಕಾ."

ಸತ್ಯ ಮತ್ತು ಸುಳ್ಳು-ಎರಡೂ. ಆದರೆ ಏನೆಂದು ಹೇಳಬೇಕು ಅಕ್ಕನಿಗೆ? ತುಂಗಮ್ಮನಿಗೆ ಗೊತ್ತಿತ್ತು. ಅಕ್ಕನನ್ನು ಯಾರೂ ಆವರೆಗೆ ಮುದ್ದಿಟ್ಟಿರಲಿಲ್ಲ. ಆ ದಿನವಷ್ಟೇ ಮದುವೆ....ಆದರೆ ತನ್ನನ್ನು ಮಾತ್ರ ಆತ—

ಒಣಗಿದ್ದ ತುಟಿಗಳನ್ನು ತನ್ನ ನಾಲಿಗೆಯ ಎಂಜಲಿನಿಂದ ಸವರಿಕೊಂಡಳು ತುಂಗಮ್ಮ.

ಮನೆಯೊಳಗೆ ನಡೆದುದನ್ನು ಯಾರಿಗೂ ಹೇಳುವ ಹಾಗಿರಲಿಲ್ಲ,—ಯಾರಿಗೂ.

....ವರನ ಕಡೆಯವರು ಎಲ್ಲಾ ಶಾಸ್ತ್ರಗಳನ್ನೂ ಮುಗಿಸಿ ಮರುದಿನವೇ ಹೊರಟರು.

ಹೊರಡುವುದಕ್ಕೆ ಮುಂಚೆ ಮೈಸೂರಿನ ಹುಡುಗಿ ಬಂದು ಕೇಳಿದಳು:

"ನಾಣಿ ಮತ್ತು ನಾನು ಹೋಗ್ತೀವಿ ತುಂಗಮ್ಮ."

ಆವರೆಗೂ ಆತನ ಹೆಸರು ತುಂಗಮ್ಮನಿಗೆ ತಿಳಿದಿರಲಿಲ್ಲ. ಈಗ ತಿಳಿದ ಹಾಗಾಯಿತು. ಆದರೂ ಆಕೆ ಕೇಳಿದಳು:

"ಯಾರು ನಾಣಿ ಅಂದ್ರೆ?"

"ಓ! ಇದ್ಬೇರೆ! ನಾರಾಯಣಮೂರ್ತಿ ಕಣೇ - ನಮ್ಮಣ್ಣ!"

"ಹಾಗೋ ಅವರ ಹೆಸರು?"

"ಹ್ಯಾಗೆ ಹೇಳು?"

"ನಾರಾಯಣ ಮೂರ್ತೀಂತ."

"ಹೆಸರು ಹೇಳ್ಬಿಟ್ಟೆಯಲ್ಲೇ....!"

"ಸಾಕು. ಹೋಗು!"

"ಏನ್ಹೇಳ್ಲಿ ನಮ್ಮಣ್ಣಿಗೆ?"

"ಇನ್ನೊಂದ್ಸಲಿ ಈ ಮನೆಗೆ ಬಂದ್ರೆ ಹಲ್ಲು ಮುರ್ದು ಕೈಗೆ ಕೊಡ್ತೀನೀಂತ ಹೇಳು!"

ನಗುತ್ತ ತಮಾಷೆಯಾಗಿ ಹಾಗೆ ಹೇಳಬೇಕೆಂದುಕೊಂಡಿದ್ದರೂ ತುಂಗಮ್ಮ, ಆ ಮಾತು ಹೇಳಿದಾಗ ಗಂಭೀರಳಾಗಿಯೇ ಇದ್ದಳು.

ಆ ಹುಡುಗಿಗೆ ಚೇಳು ಕುಟುಕಿದ ಹಾಗಾಯಿತು.

"ಓ" ಎಂದವಳು ಮುಖ ತಿರುಗಿಸಿಕೊಂಡು ತನ್ನ ಪರಿವಾರ ಸೇರಿದಳು. ಪರಿವಾರವನ್ನು ರೈಲು ನಿಲ್ದಾಣಕ್ಕೆ ಕರೆದೊಯ್ಯಲೆಂದು ಜಟಕಾಗಾಡಿಗಳು ಬಂದು ಸಾಲಾಗಿ ನಿಂತುವು. ಗುರಿಯಿಲ್ಲದೆ ಅಲೆಯುತಿದ್ದ ತುಂಗಮ್ಮನ ದೃಷ್ಟಿಗೆ ನಾರಾಯಮೂರ್ತಿ ಬೀಳದೆ ಇರಲಿಲ್ಲ. ತನ್ನ ತಂಗಿಯಿಂದ, ತುಂಗಮ್ಮನ ಬೆದರಿಕೆಯ ಸಂದೇಶವನ್ನು ಕೇಳಿ ತಿಳಿದಿದ್ದ ಆತ ಮುಗುಳು ನಗಲು ಪ್ರಯತ್ನಿಸಲಿಲ್ಲ.

ತುಂಗಮ್ಮನಿಗೆ ನಿರಾಶೆಯಾಯಿತು. ಎಲ್ಲರೂ ಹೊರಟು ಹೋದ ಮೇಲೆ ಅಳುಮೋರೆ ಹಾಕಿಕೊಂಡು ಮನೆಯೊಳಕ್ಕೆ ಬಂದಳು. ಅಲ್ಲಿ ಅಕ್ಕ ಅಳುತಿದ್ದಳು. ಅಕ್ಕನ ಜತೆಯಲ್ಲಿ ತಂಗಿಯೂ ಅತ್ತಳು.

ಆಮೇಲೆ ಎರಡು ವರ್ಷಗಳಕಾಲ ಆತನ ಪ್ರಸ್ತಾಪವೇ ಬರಲಿಲ್ಲ. ಆ ಅವಧಿಯಲ್ಲಿ ತುಂಗಮ್ಮನ ಅಕ್ಕ ಗಂಡನ ಮನೆಗೆ ಹೋದಳು. ಅಲ್ಲಿಂದ, ಬೆಳಗಾಂವಿಯ ಕಾಲೇಜಿನಲ್ಲಿ ಪ್ರಾಧ್ಯಾಪಕ ಕೆಲಸ ದೊರೆತ ಗಂಡನೊಡನೆ ಆ ಊರಿಗೆ ಹೋದಳು. ಮನೆಗೆಲಸ ನೋಡಿಕೊಳ್ಳಲೆಂದು ತುಂಗಮ್ಮ ಹೈಸ್ಕೂಲಿನ ಓದು ನಿಲ್ಲಿಸಬೇಕಾಯಿತು

ಆ ಅವಧಿಯ ಮೇಲೊಂದು ದಿನ ತುಂಗಮ್ಮನ ತಂದೆ ಕೇಳಿದರು:

"ತುಂಗಾ, ಆವತ್ತು ಪದ್ಮಾ ಮದುವೆಗೆ ಮೈಸೂರಿನಿಂದ ನಾರಾಯಣ ಮೂರ್ತಿಯಂತ ಒಬ್ಬ ಬಂದಿದ್ದ. ನೆನಪಿದೆಯೇನೆ?"

"ಎರಡು ವರ್ಷದ ಹಿಂದೆ?"

ಆ ಅವಧಿ ಎಷ್ಟೆಂಬುದನ್ನು ತುಂಗಮ್ಮ ಮರೆಯುವುದು ಸಾಧ್ಯವಿತ್ತೆ?

"ಹೂಂ, ಪದ್ಮಾ ಮದುವೆಗೆ—"

"ಅದೇ, ಯಾರೋ ಹುಡುಗಿ ಬಂದು ನನ್ಜತೇಲಿ ಮಾತಾಡ್ತಿದ್ಲು. ಅವಳಣ್ಣ ಇರ್ಬೇಕು."

"ಹೂಂ, ಹೂಂ. ಅವರೇನೇ. ಆ ಹುಡುಗಿಗೆ ಮದುವೆಯಾಯ್ತಂತೆ. ಮೈಸೂರ್ನಿಂದ ಬಂದೋರು ಯಾರೋ ಹೇಳಿದ್ರು ಮೊನ್ನೆ."

"ಓ!" ಎಂದಳು ತುಂಗಮ್ಮ. ಅಷ್ಟೇನೆ - ಎಂದು ನಾಲಿಗೆ ಮೌನ ವಾಗಿ ತೊದಲಿತು.

ಆದರೆ ಆಕೆಯ ತಂದೆ, ಒಂದು ಕ್ಷಣ ತಡೆದು ಹೇಳಿದರು:

"ನಾರಾಯಣಮೂರ್ತಿಗೆ ಪಾಸಾಯ್ತಂತೆ."

ತಾನು 'ಹೂಂ' ಎಂದರೆ ಮಾತು ಅಲ್ಲಿಗೇ ನಿಂತು ಹೋಗುವುದೇನೋ ಎಂದು ಹೆದರಿ ತುಂಗಮ್ಮ ಕೇಳಿದಳು:

"ಯಾವ ಪರೀಕ್ಷೆ ಅಣ್ಣ?"

ಉತ್ತರ ತನಗೆ ತಿಳಿದೇ ಇತ್ತು. ಆದರೂ ಕೇಳಿದ್ದಳಾಕೆ.

"ಬಿ.ಎ., ಮತ್ಯಾವುದು?"

"ಓ!...."

ಆ ಮಾತು ಮುಂದುವರಿಯಲಿಲ್ಲ.

ಆ ನಾರಾಯಣ ಮೂರ್ತಿಯ ನೆನಪು ಮರೆತು ಹೋಗುವುದು ಸಾಧ್ಯ ವಿರಲಿಲ್ಲ. ಹಳೆಯ ಘಟನೆಯ ವಿವರ ಈಗ ಹೆಚ್ಚು ವಿಸ್ತಾರವಾದ ಅರ್ಥ ದೊಡನೆ ಮರುಕಳಿಸಿ ಬರುತಿತ್ತು.

ಅಕ್ಕ ಬೆಳಗಾಂವಿಯಲ್ಲಿ ಹೆಣ್ಣುಮಗು ಹೆತ್ತಳು.

ಮನೆಯನ್ನು ಒಪ್ಪ ಓರಣವಾಗಿಟ್ಟು ತಮ್ಮ- ತಂದೆಯರ ಆರೈಕೆಮಾಡಿ ಕತೆ ಕಾದಂಬರಿಗಳನ್ನೋದಿ ದಿನ ಕಳೆಯುತಿದ್ದ ತುಂಗಮ್ಮ, ತಾನು ಮುಂದೆ ಗೃಹಿಣಿಯಾಗಲಿರುವ ದಿನವನ್ನೆ ಹೆಚ್ಚು ಹೆಚ್ಚಾಗಿ ಚಿತ್ರಿಸಿ ಕೊಂಡಳು.

ತಂದೆ, ಹೊರಗೆ ಎಲ್ಲಾದರೂ ತನ್ನ ವಿವಾಹದ ಪ್ರಸ್ತಾಪ ಮಾಡುವ ರೇನೋ ಎಂದು ತಿಳಿಯಲು ತುಂಗಮ್ಮ ಕುತೂಹಲ ತಳೆದಳು. ತಮಗೆ ಬರುತಿದ್ದ ಕಾಗದಗಳನ್ನು ತಂದೆ ಓದಿ ಮಡಚಿ ಇಟ್ಟಮೇಲೆ, ತಾನು ಕದ್ದು ಓದಿದಳು.

ಒಮ್ಮೆ ಒಂದು ಕಾಗದದಲ್ಲಿ ನಾರಾಯಣಮೂರ್ತಿಯ ಪ್ರಸ್ತಾಪವೇ ಇತ್ತು.

"ಆಗಲಿ ಅವಸರವೇನು, ವಿಚಾರ ಮಾಡೋಣ," ಎಂದು ಬರೆದಿದ್ದರು ನಾರಾಯಣ ಮೂರ್ತಿಯ ತಂದೆ.

ಆ ಬಳಿಕ, ಅಳಿಯದೇವರಿಂದ ತನ್ನ ತಂದೆಗೆ ಬಂದ ಒಂದು ಕಾಗದ ದಲ್ಲೂ ಆ ವಿಷಯವಿತ್ತು:

"ಅವನ ತಂದೆ ಜಿಪುಣಾಗ್ರೇಸರ. ಎರಡುಸಾವಿರ ಕೈಗೆ ಬೀಳದೆ ಇದ್ದರೆ ಅವರು ಒಪ್ಪುವವರೇ ಅಲ್ಲ."

ಆದರೆ ಕಡುಬಡವರಾದ ತುಂಗಮ್ಮನ ತಂದೆ ಅಷ್ಟು ಹಣದ ಯೋಚನೆಯನ್ನೇ ಮಾಡುವಂತಿರಲಿಲ್ಲ.

ಆ ವಿಷಯವನ್ನೆತ್ತದೆ, ಅಂತೂ ಮದುವೆಗೆ ಸಂಬಂಧಿಸಿಯೇ, ಅವರು ಮತ್ತೊಮ್ಮೆ ನಾರಾಯಣ ಮೂರ್ತಿಯ ತಂದೆಗೆ ಬರೆದಿರಬೇಕು. ಯಾಕೆಂದರೆ ಅವರಿಗೆ ಬಂದ ಮತ್ತೊಂದು ಕಾಗದದಲ್ಲಿ ಹೀಗಿತ್ತು:

"ಇನ್ನೊಂದು ವರ್ಷ ಚಿರಂಜೀವನ ಮದುವೆಯ ಯೋಚನೆಯನ್ನೇ ನಾವು ಮಾಡಬಾರದೆಂದಿದ್ದೇವೆ. ಅಲ್ಲದೆ, ನಮ್ಮ ಎರಡು ಕುಟುಂಬಗಳೊಳಗೆ ಸಂಬಂಧವೂ ಸರಿ ಹೋಗಲಾರದು. ದಯವಿಟ್ಟು ಒತ್ತಾಯಿಸಬಾರದು."

.... ತುಂಗಮ್ಮನಿಗೆ ಯಾವ ಆಸೆಯೂ ಉಳಿದಿರಲಿಲ್ಲ.

ಮನಸಿನಿಂದ ಮರೆಯಾಗಲೇ ಬೇಕಾದ ಪರಿಸ್ಥಿತಿ ಬಂದಾಗ, ನಾರಾಯಣಮೂರ್ತಿಯ ಚಿತ್ರ ಮೆಲ್ಲಮೆಲ್ಲನೆ ಮಸಕು ಮಸಕಾಯಿತು.

ಆದರೂ ಅದು ಪೂರ್ತಿ ಅಳಿಸಿ ಹೋಗಲಿಲ್ಲ.

ತುಂಗಮ್ಮನ ತಂದೆ ಬೇರೆ ಕಡೆ ವರ ನೋಡುತ್ತಲೇ ಇದ್ದರು; ಒಂದೆರಡು ಕನ್ಯಾ ಪರೀಕ್ಷೆಗಳೂ ಆದುವು. ಇಷ್ಟನ್ನೆಲ್ಲಾ ಯಾವ ಪ್ರತಿ ಕ್ರಿಯೆಯೂ ಇಲ್ಲದೆ ಜೀವಂತ ಯಂತ್ರದಂತೆ ಸಹಿಸಿಕೊಳ್ಳಲು ತುಂಗಮ್ಮ ಕಲಿತಳು. .

ತಂದೆ ಶ್ರೀಮಂತರಾಗಿದ್ದರೆ ತುಂಗಮ್ಮ ಕಾಲೇಜಿಗಾದರೂ ಹೋಗುವುದು ಸಾಧ್ಯವಿತ್ತು. ಆಗ, "ಹುಡುಗಿ ಇನ್ನೂ ಓದ್ತಿದಾಳೆ" ಎಂದು ತಂದೆ ಸ್ವಜಾತಿ ಬಾಂಧವರಿಗೆ ಸಮಾಧಾನ ಹೇಳಬಹುದಿತ್ತು.

ಅಂತಹ ಅವಕಾಶ ಅವರಿಗಿರಲಿಲ್ಲ.

ಹುಡುಗಿಗೆ ವಯಸ್ಸಾಯಿತೆಂದು ಬರಬಹುದಾಗಿದ್ದ ಆಕ್ಷೇಪಕ್ಕೇನೂ ಅವರು ಹೆದರುತ್ತಿರಲಿಲ್ಲ. ಆ ಕಾಲ ಕಳೆದು ಹೋಗಿತ್ತು. ಬದಲು, ಇವತ್ತಲ್ಲ ನಾಳೆ ಆಗಲೇ ಬೇಕಾದ ಮದುವೆಯನ್ನು ಹೇಗೆ ಮಾಡಿ ಮುಗಿಸ ಬೇಕೆಂಬ ಯೋಚನೆಯೇ ಅವರನ್ನು ಹಣ್ಣು ಮಾಡಿತು.

ತುಂಗಮ್ಮನನ್ನು ಹೆತ್ತಾಕೆಯನ್ನು ಅವರು ಮದುವೆಯಾದ ದಿನ ಬೇರೆ; ಈಗಿನದು ಬೇರೆ. ಈ ಇಪ್ಪತ್ತೈದು ವರ್ಷಗಳಲ್ಲಿ ಮದುವೆಯ ವಿಚಾರದಲ್ಲೂ ಅದೆಷ್ಟೋ ಬದಲಾವಣೆಗಳು ಆಗಿದ್ದುವು. ಮದುವೆಯ ಮಾರುಕಟ್ಟೆಯಲ್ಲಿ ಗಂಡಿನ ಬೆಲೆ ವಿಪರೀತವಾಗಿ ಏರಿತ್ತು. ಅಳಿಯನಾಗ ಬೇಕಾಗಿದ್ದವನ ಹಾಗೂ ಅವನ ತಾಯ್ತಂದೆಯರ ಮನವೊಲಿಸಿಕೊಳ್ಳುವುದು ಸಾಮಾನ್ಯ ಕೆಲಸವಾಗಿರಲಿಲ್ಲ. ಅವರ ಬೇಡಿಕೆಗಳನ್ನು ಪೂರೈಸುವುದರೊಳಗೇ ಹೆಣ್ಣು ಹೆತ್ತವರ 'ಜನ್ಮಾಂತರದ ಋಣ' ಸಂದಾಯವಾಗುತಿತ್ತು. ಶಹರಗಳಲ್ಲಿ ಹುಡುಗಿ ಇಂಟರ್‌ಮೀಡಿಯೆಟ್ ಪಾಸುಮಾಡುವುದಂತೂ

ಮದುವೆಗೆ ಬೇಕಾದ ರಹದಾರಿಯಾಗಿತ್ತು... .ಹುಡುಗಿಯರನ್ನು ಪರೀಕ್ಷಿಸುವ ವಿಧಾನಗಳೊ ! ಕುಳುಕುಂದದ, ಹಾಸನದ ಇಲ್ಲವೆ ಸೋಮೇಶ್ವರದ ಜಾನುವಾರು ಜಾತ್ರೆಯಲ್ಲೂ ಗಿರಾಕಿ ಅಂತಹ ಪರೀಕ್ಷೆ ನಡೆಸಲಾರ....!

ತುಂಗಮ್ಮನ ಮೃದು ಮನಸ್ಸು ಮುದುಡಿಕೊಂಡು ಕಹಿಯಾಯಿತು. ಪ್ರತಿಸಾರೆಯೂ ಪರಾಜಿತರಾಗುತಿದ್ದ ಆಕೆಯತಂದೆ ಮನಸ್ಸಿನ ನೆಮ್ಮದಿ ಕೆಡಿಸಿಕೊಂಡರು. ಸದಾಕಾಲವೂ ಸಹನಶೀಲರಾಗಿದ್ದ ಆ ಬಡ ಉಪಾಧ್ಯಾಯರಲ್ಲೂ ಸಿಡುಕು ಮನೆಮಾಡಿತು.

ತುಂಗಮ್ಮನಿಗೆ ತಾನು ಉಂಡ ಅನ್ನ ಮೈಸೇರಲಿಲ್ಲ. ಆಕೆ ಸೊರಗಿದಳು.

ಅಂತಹ ಪರಿಸ್ಥಿತಿಯಲ್ಲಿ, ಆಕೆಯ ಬಾಳ್ವೆಯ ಕಾರಿರುಳಲ್ಲಿ ಒಮ್ಮೆಲೆ ಚಂದ್ರೋದಯವಾಯಿತು.

ಆ ವರ್ಷದ ಚಳಿಗಾಲ ಕಳೆದು ಮತ್ತೊಂದು ವರ್ಷದ ಬೇಸಗೆ ಮುಖ ತೋರಿಸಿತ್ತು. ಆದಿನ ಭಾನುವಾರ. ಸಂಜೆಯ ಹೊತ್ತು ತುಂಗಮ್ಮನ ತಂದೆ, ಸ್ನೇಹಿತರು ಯಾರನ್ನೋ ಕಾಣಬೇಕಾಗಿದೆಯೆಂದು ಹೊರ ಹೋದರು. ತುಂಗಮ್ಮನ ತಮ್ಮ, ಹೈಸ್ಕೂಲಿನ ಆಟದ ಬಯಲಿನಲ್ಲಿ ನಡೆಯುತಿದ್ದ ಕ್ರಿಕೆಟ್ ಪಂದ್ಯಾಟ ನೋಡಲು ಹೋಗಿದ್ದ. ಮನೆಯಲ್ಲಿ ತುಂಗಮ್ಮನೊಬ್ಬಳೇ "ಕಣ್ಣೀರು" ಕಾದಂಬರಿ ಕೈಯಲ್ಲಿ ಹಿಡಿದು ಕುಳಿತಿದ್ದಳು.

ಆಗ ಬಾಗಿಲುತಟ್ಟಿದ ಸದ್ದಾಯಿತು.

"ಯಾರದು ?"

—ಎಂದು ಕೇಳಿದಳು ತುಂಗಮ್ಮ ಒಳಗಿಂದಲೆ.

ಉತ್ತರದ ರೂಪವಾಗಿ ಎರಡನೆಯ ಬಾರಿ ಬಾಗಿಲೇ ಸದ್ದುಮಾಡಿತು.

"ಯಾರು ?"

—ಎಂದು ಮತ್ತೊಮ್ಮೆ ತುಂಗಮ್ಮ ಕೇಳಿದಳು. ಪರಿಚಿತರು ಯಾರಾದರೂ ಬಂದು, ಪುಸ್ತಕ ಓದುವುದು ನಿಲ್ಲುವುದಲ್ಲಾ ಎಂದು ಆಕೆಗೆ ಕೆಡುಕೆನಿಸಿತು.

"ನಾನು"

—ಎಂದಿತು ಹೊರಗಿನೊಂದು ಸ್ವರ.

ಆ ಸ್ವರ ಯಾರದೋ ತುಂಗಮ್ಮನಿಗೆ ತಿಳಿಯಲಿಲ್ಲ. ಆದರೂ ಆಕೆ ಧಿಗ್ಗನೆದ್ದಳು. ಓದುತ್ತಿದ್ದ ಪುಟಸಂಖ್ಯೆಯನ್ನೊಮ್ಮೆ ನೋಡಿ ಪುಸ್ತಕ ಮುಚ್ಚಿಟ್ಟು ಬಾಗಿಲ ಬಳಿಗೆ ಬಂದಳು.

ಆಕೆ ಬರುತ್ತಿದ್ದಾಗಲೆ ಮೂರನೆಯ ಬಾರಿ ಟಕ್‌ಟಕ್ ಬಾಗಿಲಸದ್ದಾಯಿತು. ಆ ಅಸಹನೆ ತುಂಗಮ್ಮನಿಗೆ ಸೋಜಿಗವೆನಿಸದಿರಲಿಲ್ಲ.

....ತೆರೆದ ಬಾಗಿಲಿಗೇ ಆತುಕೊಂಡು ಆಕೆ ನಿಂತಳು....ಸೊಗಸಾದ ಪೋಷಾಕು. ತೀಡಿ ತಿದ್ದಿದ ಕ್ರಾಪು. ಇದ್ದ ಸೌಂದರ್ಯಕ್ಕೇ ಒಪ್ಪವಿಟ್ಟಿದ್ದ ಯೌವನ....

ಆತ—ನಾರಾಯಣ ಮೂರ್ತಿ—ಮುಗುಳುನಗುತ್ತಿದ್ದ.

ತುಂಗಮ್ಮನ ಮುಖ ಲಜ್ಜೆಯಿಂದ ಕೆಂಪೇರಿತು. ಕಣ್ಣಿಗೆ ಕತ್ತಲು ಕವಿದ ಹಾಗಾಯಿತು ಕ್ಷಣಕಾಲ. ಇದು ನೆನಸೆ ಕನಸೆ ಎಂಬ ಭ್ರಮೆಯೂ ಆಯಿತು.

ನಾರಾಯಣ ಮೂರ್ತಿ ತುಂಗಮ್ಮನನ್ನೆ ಬೆರಗು ದೃಷ್ಟಿಯಿಂದ ನೋಡುತ್ತಿದ್ದ.

ಒಳಕ್ಕೆ ಬನ್ನಿ-ಎನ್ನ ಬೇಕೆಂದು ತುಂಗಮ್ಮನಿಗೆ ತೋರಿತು. ಆದರೆ ಮಾತು ಹೊರಡಲಿಲ್ಲ.

ಬೆಳೆದು ನಿಂತಿದ್ದ ತುಂಗಮ್ಮ ಆತನ ಕಣ್ಣಿಗೆ ಹಬ್ಬವಾಗಿರಬೇಕು. ತಲೆಯನ್ನೊಮ್ಮೆ ಮಾಟವಾಗಿ ಕೊಂಕಿಸಿ, ತುಟಿಯಲುಗಿಸಿ, ಕಣ್ಣು ಮಿಟುಕಿಸಿ ನಾರಾಯಣ ಮೂರ್ತಿ ಕೇಳಿದ:

"ಮನೇಲಿ ಯಾರೂ ಇಲ್ವೆ?"

"ಇಲ್ಲ"

—ಎಂದಳು ತುಂಗಮ್ಮ ತಟಕ್ಕನೆ.

"ಎಷ್ಟೊತ್ತಾಗುತ್ತೆ ಬರೋದು?"

"ಎಷ್ಟೊತ್ತಾಗುತ್ತೊ?"

"ಚೆನ್ನಾಗಿದೀರಾ?"

"ಹೂಂ....ಹೀಗಿದೀವಿ....ಬನ್ನಿ....!"

ಆಕೆಯ ಮನಸ್ಸಿನ ಒಂದು ಭಾಗ ಕೇಳುತ್ತಿತ್ತು: ಅವಮಾನಿಸಿ ಬೈದು

ಓಡಿಸು ಈತನನ್ನು. ಸಹಸ್ರಗಟ್ಟಲೆ ವರದಕ್ಷಿಣೆಕೇಳಿದವನು ಇವನೆ ಅಲ್ಲವೆ? ಎಳೆಯ ಹೃದಯದ ಮೇಲೆ ಕಾದ ಕಬ್ಬಿಣದಿಂದ ಬರೆ ಎಳೆದವನು ಈತನೆ ಅಲ್ಲವೆ? ...ಆದರೆ ಮನಸ್ಸಿನ ಇನ್ನೊಂದು ಭಾಗ ಕೊಳಲನ್ನೂದುತ್ತಾ ವೈಯಾರವಾಗಿ ಹೇಳುತಿತ್ತು: ಎಷ್ಟೊಂದು ಸಾರೆ ಸ್ಮರಿಸಿಕೊಂಡಿದ್ದೆ ಈ ಗಾರುಡಿಗನನ್ನು. ಇಗೋ ಈ ಮನ್ಮಥ ಈಗ ಬಂದು ನಿಂತಿದ್ದಾನೆ. ಬಿಡ ಬೇಡ. ಕರೆ. ಒಳಗೆ ಕರೆ.

ಬನ್ನಿ—ಎಂದಿದ್ದಳು ತುಂಗಮ್ಮ.

ಆದರೆ ಅವನು ಬರಲಿಲ್ಲ.

"ನೀವು ಒಬ್ರೇ ಇರೋವಾಗ ಬರೊಲ್ವಮ್ಮಾ! ಹಲ್ಲು ಮುರಿದು ಕೈಗೆ ಕೊಡ್ತೀನೀಂತ ಹೇಳಿದ್ರಿ!"

ಮೂರು ವರ್ಷಗಳಿಗೂ ಹೆಚ್ಚು ಕಾಲವಾಗಿತ್ತು ಆಕೆ ಆ ಮಾತನ್ನಾಡಿ.

ಆತ ನಗುತಿದ್ದ ನಿಜ. ಆದರೂ ಅಂತಹ ಮಾತನ್ನು ಹಾಗೆ ಆಡ ಬಹುದೆ?

ತುಂಗಮ್ಮನೂ ನಕ್ಕಳು. ಯಾವುದರ ಸಂಕೇತವೆಂಬುದು ತನಗೇ ಅರ್ಥವಾಗದೆ ಇದ್ದ ಕಂಬನಿ, ಆಕೆಯ ಕಣ್ಣಂಚಿನಲ್ಲಿ ತುಳುಕಾಡಿತು.

"ಬನ್ನಿ!"

"ಈಗಲೇ ಮುರಿದು ಕೈಗೆ ಕೊಡ್ತೀರೇನು?"

"ಅಯ್ಯೊ, ಎಷ್ಟು ಹೇಳ್ತೀರ ಅದನ್ನೆ."

ನಾರಾಯಣ ಮೂರ್ತಿ ಸ್ವರ ಬದಲಿಸಿದ.

"ಮೇಲಿನ ಭಾನುವಾರ ಬರ್ತೀನೀಂತ ನಿಮ್ಮಂದೆಗೆ ಹೇಳಿ. ನನ್ನನ್ನ ಇಲ್ಲಿಗೇ ಪೋಸ್ಟುಮಾಡಿದಾರೆ. ಹೊಸಉದ್ಯೋಗ. ಡಿ. ಸಿ. ಯವರ ಕಚೇರಿ ಲಿದೀನಿ. ಒಂದು ವಾರವಾಯ್ತು ಬಂದು."

"ಓ!"

"ಸರಿ, ಹೊರಡ್ತೀನಿ...."

ಒತ್ತಾಯಿಸಿ ಕರೆಯುವ ಇಚ್ಛೆಯಾಯಿತು ತುಂಗಮ್ಮನಿಗೆ. ಆದರೆ ಮಾತು ಹೊರಡಲೇ ಇಲ್ಲ. ಆತನೊ? ಅಷ್ಟರಲ್ಲೇ ಬೀದಿಗಿಳಿದು ಶೀಘ್ರ ಯಿಂದ ನಡೆದುಹೋಗುತಿದ್ದ.

ಎದುರು ಮನೆ ರುಕ್ಮಿಣಿಯಮ್ಮ ಕಿಟಕಿಯ ಸರಳುಗಳೆಡೆಯಿಂದಲೆ ಕೇಳಿದರು :

"ಯಾರೆ ಬಂದಿದ್ದು ?"

"ಮೈಸೂರ್ನೋರು. ನಮ್ಮ ಭಾವನ ಕಡೆಯೋರು."

"ಭಾವನ ಕಡೆಯೋರು ? ಓ....!"

ತುಂಗಮ್ಮನಿಗೆ ಲಜ್ಜೆಯಾಯಿತು.

"ಒಳ್ಳೇ ಹುಡುಗ ಪಾಪ....ಹಾಗೇ ಹೊರಟೋದ್ನಲ್ಲೇ."

ಒಳ್ಳೆಯ ಹುಡುಗನಲ್ಲದೆ ಮತ್ತೆ !

ರುಕ್ಮಿಣಿಯಮ್ಮನ ಪ್ರಶ್ನೆಗೆ ಉತ್ತರವೆಂಬಂತೆ ತುಂಗಮ್ಮ ಹೇಳಿದಳು :

"ಆ ಮೇಲೆ ಬರ್ತೀನಿ ಅಂದ್ರು."

ರುಕ್ಮಿಣಿಯಮ್ಮ ನಕ್ಕಳು.

ಆದರೆ, ಆ ಮೇಲೆ ಬರುವೆನೆಂಬ ಮಾತು, ತನಗೆ ತಾನೇ ಹೇಳಿಕೊಂಡ ಸಮಾಧಾನದ ನುಡಿಯಾಗಿತ್ತಲ್ಲವೆ ?

ತುಂಗಮ್ಮ ಬಾಗಿಲು ಮುಚ್ಚಿದಳು. "ಕಣ್ಣೀರು" ಕಾದಂಬರಿಯನ್ನು ಮತ್ತೆ ಆಕೆ ಎತ್ತಿಕೊಳ್ಳಲಿಲ್ಲ. ಮನಸ್ಸು ಹಗುರವಾಗಿತ್ತು. ಕನ್ನಡಿಯ ಲ್ಲೊಮ್ಮೆ ಮುಖನೋಡಿಕೊಂಡಳು. ತುರುಬಿನ ಮೇಲೆ ಕೈಯಾಡಿಸಿದಳು. ಎದೆಯ ಮೇಲಿನಿಂದ ಹಾದು ಬೆನ್ನಿನುದ್ದಕ್ಕೂ ಹಾರಾಡುತಿದ್ದ ಸೀರೆಯ ಸೆರಗನ್ನು ಸರಿಪಡಿಸಿದಳು.

ಅಕ್ಕನ ಮದುವೆಯ ಆ ದಿನ....ಮನೆಯೊಳಗೆ ತಾನೊಬ್ಬಳೇ ಇದ್ದಾಗ....ಆಗ ತನಗೆ ಹೆಸರು ಕೂಡಾ ತಿಳಿಯದೇ ಇದ್ದ ಆತ ಬಂದು.... ಥೂ....

ತನ್ನನ್ನು ನೋಡುತ್ತ, ಮನಸ್ಸಿನಲ್ಲಿರುವುದನ್ನೆಲ್ಲ ಯಾರಾದರೂ ತಿಳಿದು ಕೊಳ್ಳುವರೇನೋ ಎಂದು ತುಂಗಮ್ಮ ಹೆದರಿದಳು....

ಹೃದಯ ಮಾತ್ರ ಗುಣುಗುಣಿಸಿ ನಾದ ಚಿಮ್ಮಿಸಿತು. ತುಂಗಮ್ಮ ಇಂಪಾದ ಇಳಿಸ್ವರದಲ್ಲಿ ಹಾಡಿದಳು :

"ತಾರಕ್ಕ ಬಿಂದಿಗೆ ನೀರಿಗೆ ಹೋಗುವಾಗ...."

....ಕತ್ತಲಾದಂತೆ ಸ್ವಪ್ನಲೋಕದಿಂದ ತುಂಗಮ್ಮ ಇಳಿದು ಬಂದಳು.

ನಾರಾಯಣ ಮೂರ್ತಿ ಬಂದಿರುವ ವಿಷಯವನ್ನು ತಂದೆಗೆ ಹೇಗೆ ತಿಳಿಸ ಬೇಕೆಂಬುದೇ ಆಕೆಯ ಪಾಲಿಗೆ ಬಗೆಹರಿಯದ ಸಮಸ್ಯೆಯಾಯಿತು.

ಮನೆಗೆ ಬಂದ ತಂದೆ, ಪ್ರಸನ್ನಳಾಗಿದ್ದ ಮಗಳನ್ನು ನೋಡುತ್ತಾ ಕೇಳಿದರು :

"ಏನೆ ಖುಷೀಲಿದೀಯಾ? ಯಾರಾದರೂ ಗೆಳತೀರು ಬಂದಿದ್ದ ರೇನು?"

"ಯಾರೂ ಇಲ್ಲಪ್ಪ. ಗೆಳತೀರು ಇಲ್ಲಿಗೆ ಬರದೆ ಒಂದು ವರ್ಷ ವಾಯ್ತೋ ಏನೋ."

ಅದೇ ಸಂದರ್ಭದಲ್ಲಿ, ನಾರಾಯಣ ಮೂರ್ತಿ ಬಂದಿದ್ದ ವಿಷಯ ಹೇಳುವುದು ಸಾಧ್ಯವಿದ್ದರೂ ತುಂಗಮ್ಮ ತಡವರಿಸಿದಳು.

ಊಟಕ್ಕೆ ಕುಳಿತಾಗ ಬಲುಪ್ರಯಾಸಪಟ್ಟು ಆಕೆ ಆ ವಿಷಯವನ್ನೆತ್ತ ಬೇಕಾಯಿತು.

"ಒಂದು ವಿಚಾರ ಹೇಳೋಕೆ ಮರ್ತ್ತೇ ಬಿಟ್ಟೆ ಅಣ್ಣ."

"ಏನೇ ಅದು?"

"ಪದ್ದಕ್ಕನ ಮದುವೆಗೆ ಬಂದಿದ್ರೂಂತ ನೀನು ಹೇಳಿರ್ಲಿಲ್ವೆ ಆ ದಿನ?"

ತಂದೆ, ಮುಂದೇನು ಎನ್ನುವಂತೆ ಮಗಳ ಮುಖನೋಡಿದರು.

"ನಾರಾಯಣ ಮೂರ್ತೀಂತಲೋ ಏನೋ."

"ಹೂಂ. ಹೌದು."

"ಅವರು ಬಂದಿದ್ರು ಸಾಯಂಕಾಲ."

"ನಾರಾಯಣ ಮೂರ್ತ್ತೀನೇ? ಇಲ್ಲಿಗೆ ಹ್ಯಾಗ್ಬಂದ?"

"ಇಲ್ಲೇ ಇದಾರಂತಲ್ಲ ಈಗ. ಕೆಲಸ ಸಿಕ್ಕಿದ್ಯಂತೆ...."

"ನಂಗೊತ್ತೇ ಇರ್ಲಿಲ್ವೆ!"

ನಾರಾಯಣಮೂರ್ತಿ ಹೇಳಿದುದನ್ನು ಮಗಳು ತಂದೆಗೆ ವರದಿಯೊಪ್ಪಿ ಸಿದಳು.

ಆ ತಂದೆಯ ಮನಸ್ಸಿನಲ್ಲಿ ಒಮ್ಮೆ ಕಮರಿ ಹೋಗಿದ್ದ ಆಸೆ ಮತ್ತೆ ಚಿಗುರಿಕೊಂಡಿತು.

"ಕೂತ್ಕೋ ಅಂತ ಹೇಳ್ಬಾರ್ದಾಗಿತ್ತೇನೆ?"

"ಹೇಳ್ದೆ. ಆದ್ರೂ ಬರ್ಲೇ ಇಲ್ಲ."

"ಒಳ್ಳೇ ಸಂಕೋಚ ಇದು."

ನಾರಾಯಣ ಮೂರ್ತಿ ಮತ್ತು ಸಂಕೋಚಪ್ರವೃತ್ತಿ! ತುಂಗಮ್ಮನಿಗೆ ನಗು ಬಂತು. ಪ್ರಯಾಸಪಟ್ಟು ಅದನ್ನು ತಡೆದಳಾಕೆ. 'ಪಾಪ! ಅಣ್ಣಂಗೆ ಏನೂ ತಿಳೀದು' ಎಂದುಕೊಂಡಳು.

ಮರುದಿನವೇನೂ ಆತ ಬರಲಿಲ್ಲ. ಮೇಲಿನ ಭಾನುವಾರ-ಎಂದಿದ್ದ ನಲ್ಲವೆ? ತಾವಾಗಿಯೇ ಹೋಗಿ ಕರೆದುಕೊಂಡುಬರಬೇಕು, ಎಂದು ತಂದೆ ಯೋಚಿಸಿದರು. ಆ ಯೋಚನೆಯಲ್ಲಿ ಎರಡುದಿನ ಕಳೆದುವು.

ಇನ್ನೇನು ಹೊರಡಲೇ ಬೇಕು ಎನ್ನುತಿದ್ದಾಗಲೆ, ಭಾನುವಾರಕ್ಕೆ ಮುಂಚೆಯೆ, ಒಂದು ಸಂಜೆ ನಾರಾಯಣಮೂರ್ತಿ ಬಂದ.

ಆತ ಮನೆಗೆ ಬರಲು ಆರಂಭಿಸಿದ್ದು ಹಾಗೆ.

ಮಗಳಿಗೆ ವರ ಹುಡುಕಿ ನಿರಾಶರಾಗಿದ್ದ ತಂದೆ ಈ ಬೇಟೆಯನ್ನು ಬಿಡಬಾರದೆಂದು ಸರ್ವಪ್ರಯತ್ನ ಮಾಡಿದರು.

"ಹೋಟೆಲಲ್ಲಿ ಯಾಕೆ ಊಟ ಮಾಡ್ತೀಯಾ? ನಮ್ಮನೇಲೆ ಇದ್ಬಿಡು," ಎಂದರು.

ನಾರಾಯಣಮೂರ್ತಿ ಒಪ್ಪಲಿಲ್ಲ. ವಾರಕ್ಕೊಮ್ಮೆ ಕಾಫಿಗೆ, ಎಂದಾದ ರೊಮ್ಮೆ ಊಟಕ್ಕೆ, ಬಂದು ಹೋಗುತಿದ್ದ ಅಷ್ಟೆ.

ಮತ್ತೊಮ್ಮೆ ನಾರಾಯಣಮೂರ್ತಿಯ ಮನೆಯವರಿಗೆ ಬರೆದು ಕೇಳೋಣವೆನ್ನಿಸಿತು ತುಂಗಮ್ಮನ ತಂದೆಗೆ. ಆದರೆ ಮರುಕ್ಷಣವೆ ವಿವೇಕ ಬುದ್ಧಿ ಹೇಳಿತು:

"ಹುಚ್ಚಪ್ಪ! ಸುಮ್ನಿರು. ಎಲ್ಲವೂ ಸರಿಹೋಗುತ್ತೆ...."

ಆಗೊಮ್ಮೆ ಈಗೊಮ್ಮೆ, ಮನೆಯಲ್ಲಿ ತುಂಗಮ್ಮನೊಬ್ಬಳೇ ಇದ್ದ ಹೊತ್ತಿನಲ್ಲೂ, ನಾರಾಯಣಮೂರ್ತಿ ಬಂದುಹೋದ. ಹಲ್ಲು ಮುಚಿದು ಕೈಗೆ ಕೊಡಲಿಲ್ಲ ತುಂಗಮ್ಮ. ಬದಲು, ತಾನೇ ಹಲ್ಲು ಕಿಸಿದು ನಕ್ಕು, ಮುದ್ದಾದ ತನ್ನ ಹಲ್ಲುಗಳನ್ನು ಆತನಿಗೆ ತೋರಿಸಿ, ಆಕೆ ಸ್ವಾಗತ ಬಯಸಿದಳು.

ತಾನೊಬ್ಬಳೇ ಇದ್ದಾಗ ನಾರಾಯಣಮೂರ್ತಿ ಬಂದಂತಹ ಮೊದಲ ಸಂದರ್ಭದಲ್ಲಿ ತುಂಗಮ್ಮ ಅಳುಕಿದಳು. ಆದರೆ ನಾರಾಯಣಮೂರ್ತಿ ಯೊಗ ಜವಾಬ್ದಾರಿಯುತನಾದ ಸದ್ಗೃಹಸ್ಥನಾಗಿದ್ದ. ಗೌರವದಿಂದ ದೂರಕುಳಿತು ಲೋಕಾಭಿರಾಮವಾಗಿ ಮಾತನಾಡಿ ಎದ್ದು ಹೋದ.

ಅಂತಹ ಪ್ರತಿಯೊಂದು ಭೇಟಿಯ ಬಳಿಕವೂ ಮುಂದಿನ ಭೇಟಿಗಾಗಿ ತುಂಗಮ್ಮನ ಹೃದಯ ತವಕಿಸುತ್ತಿತ್ತು. ಮಾಸಿ ಹೋಗತೊಡಗಿದ್ದ ಮೂರ್ತಿಯ ನೆನಪು ಎಲ್ಲ ವರ್ಣಗಳಲ್ಲೂ ಸ್ಫುಟಗೊಂಡು ತುಂಗಮ್ಮನನ್ನು ಕಾಡಿತು.

ಒಂದು ಹೆಜ್ಜೆಯಿಂದ ಇನ್ನೊಂದು ಹೆಜ್ಜೆ ಬಲು ದೂರವಿರಲಿಲ್ಲ, ಕಷ್ಟ ವಿರಲಿಲ್ಲ.

ನಾರಾಯಣಮೂರ್ತಿ ಆರಾಮ ಕುರ್ಚಿಯಮೇಲೆ ಕುಳಿತು ತನ್ನನ್ನೇ ನೋಡುತಿದ್ದಾಗಲೊಮ್ಮೆ ತುಂಗಮ್ಮ ಹೇಳಿದಳು :

" ಮರತೇ ಹೋಯಿತು ನಂಗೆ....ಬೆಳಗಾಂವಿಯಿಂದ ಪದ್ದಕ್ಕನ ಕಾಗದ ಬಂದಿದೆ."

" ಹ್ಯಾಗಿದಾರಂತೆ ಪ್ರೊಫೆಸರು ?"

" ಪ್ರೊಫೆಸರು ?"

" ಅಲ್ದೆ ! ಆ ಊರ್‍ನಲ್ಲಿ ಕಾಲೇಜು ಮೇಷ್ಟ್ರುಗಳಿಗೆಲ್ಲಾ ಪ್ರೊಫೆ ಸರೂಂತ್ಲೇ ಹೆಸರು."

" ಓ !.... ಚೆನ್ನಾಗಿದಾರಂತೆ ಪ್ರೊಫೆಸರು."

"ಹೊಂ...."

ಒಂದು ನಿಮಿಷ ತಡೆದು ತುಂಗಮ್ಮ ಹೇಳಿದಳು :

" ಗಂಡಸರೆಲ್ಲಾ ಸ್ವಾರ್ಥಿಗಳು !"

" ಯಾಕೋ ?"

" ಪ್ರೊಫೆಸರ್ ವಿಷಯ ಕೇಳಿದ್ರೇ ಹೊರತು, ಪದ್ದಕ್ಕ ಹ್ಯಾಗಿ ದಾಳೇಂತ—"

" ಕ್ಷಮಿಸು, ಹೀಗೇ ನೋಡ್ತಾ ಇದ್ದಾಗ ಎಲ್ಲೋ ಮರೆತ್ಹೋಯ್ತು."

ತುಂಗಮ್ಮ ಚಕಿತಳಾದಳು. ತಮ್ಮ ಮನೆಗೆ ಬರತೊಡಗಿದ ಇಷ್ಟು

ದಿನಗಳಲ್ಲಿ ಇದೇ ಮೊದಲು ಬಾರಿ ಆತ ತನ್ನನ್ನು ಏಕವಚನದಲ್ಲಿ ಸಂಬೋಧಿಸಿದ್ದ. ಸಂತೋಷದಿಂದಲೂ ಲಜ್ಜೆಯಿಂದಲೂ ಆಕೆಯ ಕತ್ತು ಬಾಗಿತು.

"ಏನು ವಿಶೇಷ?"

"ಪದ್ದಕ್ಕನಿಗೆ ಐದು ತಿಂಗಳಂತೆ?"

"ಓ! ಪರವಾಗಿಲ್ವೆ ಪ್ರೊಫೆಸರು?....ಅಕ್ಕ ಬರ್ತಾರಂತೇನು?"

ಆ ಅಕ್ಕ ಬಂದರೆ ಅಲ್ಲಿ ತನ್ನ ಏಕಾಂತಕ್ಕೆ ಭಂಗ ಬರುವುದೋ ಏನೋ ಎಂಬ ಭೀತಿಯ ಛಾಯೆಯೂ ಇದ್ದಿರಬೇಕು ಆ ಸ್ವರದಲ್ಲಿ!

"ಯಾಕ್ಬರ್ತಾಳೆ? ಇಲ್ಲಿ ಯಾವ ಅನುಕೂಲ ಇದೇಂತ? ಚೊಚ್ಚಲ ಬಾಣನ್ತನಕ್ಕೇ ಬರಲಿಲ್ಲ....ಗೊತ್ತೇ ಇದೆಯಲ್ಲ ನಮ್ಮನೇ ಸಮಾಚಾರ."

ಇನ್ನೇನು ಬರೆದಿದಾರೆ ಕಾಗದದಲ್ಲಿ?"

ಆ ಕಾಗದದಲ್ಲಿ ನಾರಾಯಣಮೂರ್ತಿಯ ವಿಷಯವೂ ಇತ್ತು. 'ಆತ ನಮ್ಮ ಮನೆಗೆ ಆಗಾಗ್ಗೆ ಬರ್ತಾರೆ' ಎಂದು ತಂಗಿ ಬರೆದುದಕ್ಕೆ 'ಆತನಿಗೆ ಮದುವೆಯಾಯ್ತೆ?' ಎಂದು ಅಕ್ಕ ಕೇಳಿದ್ದಳು. ಆ ವಾಕ್ಯದ ನೆನಪಾಗುತ್ತಲೇ ತುಂಗಮ್ಮ ಕೆಂಪು ಕೆಂಪಾದಳು.

"ಯಾಕೆ, ಬೇರೇನೂ ಬರೆದಿಲ್ವೇನು?"

ಆ ಕಾಗದ ಕೊಠಡಿಯೊಳಗಿತ್ತು. ಅದನ್ನು ತಂದು "ಓದಿನೋಡಿಕೋ" ಎಂದು ಕೊಡಬಹುದಲ್ಲವೆ? ಅದನ್ನು ತರಲು ತಾನು ಕೊಠಡಿಗೆ ಹೋದಾಗ....

"ತಾಳಿ, ಒಳಗಿದೆ ತರ್ತೀನಿ."

ತುಂಗಮ್ಮ ಒಳಹೋಗಿ ಕಾಗದವನ್ನೆತ್ತಿಕೊಂಡಳು. ಎಣಿಕೆ ತಪ್ಪಾಗಿರಲಿಲ್ಲ....ಹಿಂಬಾಲಿಸಿ ಬಂದ ಕಳ್ಳ ಹೆಜ್ಜೆಯ ಸಪ್ಪಳ....ಮೂರು ವರ್ಷಗಳ ಹಿಂದೆ ನಡೆದಿದ್ದ ಘಟನೆಯ ಪುನರಾವೃತ್ತಿ....

ಈ ಸಲ, ತನಗೇನೂ ತಿಳಿಯದು ಎಂಬಂತೆ ತುಂಗಮ್ಮ ಕಣ್ಣು ಮುಚ್ಚಿ ಮೈಮರೆತಳು. ತುಟಿಗೆ ಎಂಜಲಾಯಿತೆಂದು ಆಕೆಗೆ ತೋರಲಿಲ್ಲ. ಆವನೂ ಗಾಬರಿಯಾಗಿ ಓಡಿ ಹೋಗುವ ಅವಸರದಲ್ಲಿರಲಿಲ್ಲ.

ಬಂಧನವನ್ನು ಸಡಿಲಗೊಳಿಸುತ್ತಾ ನಾರಾಯಣಮೂರ್ತಿ ನಕ್ಕು ಹೇಳಿದ:

" ಹಲ್ಲು ಮುರಿದು....ಕೈಗೆ—"

" ಥೂ !"

ಆದರೆ ಈ 'ಥೂ' ಕಾರದಲ್ಲಿ ಉಪೇಕ್ಷೆ ಇರಲಿಲ್ಲ, ಅದರಲ್ಲಿ 'ನನ್ನ ಜೀವವೆ' ಎನ್ನುವ ಸ್ವರದ ವಿಕೃತ ಪ್ರತಿಧ್ವನಿ ಇತ್ತು.

ಮುಗಿಲು ತುಂಗಮ್ಮನ ಕೈಗೆ ಎಟಕುತಿದ್ದರೂ ಈ ಪ್ರಪಂಚವನ್ನಾಕೆ ಮರೆತಿರಲಿಲ್ಲ.

"ಅಪ್ಪ ಬರೋ ಹೊತ್ತಾಯ್ತು."

" ನಡೀ ಹೊರಗೆ - ಅನ್ನೋದರ ಬದಲು ಈ ಪ್ರಯೋಗವೇನೋ ?"

" ಥೂ ನೀವೆ !"

ನಾರಾಯಣಮೂರ್ತಿ ಹೊರಬಂದು ಕುಳಿತ. ತಮ್ಮಿಬ್ಬರ ನಡುವೆ ಮುದ್ದೆಯಾಗಿ ಮಾನ ಕಳೆದುಕೊಂಡಿದ್ದ ಕಾಗದವನ್ನು ತುಂಗಮ್ಮ ಆತನಿಗೆ ಓದಲು ಕೊಟ್ಟಳು. ತನ್ನನ್ನು ಕುರಿತು ಕೇಳಿದ್ದ ಪ್ರಶ್ನೆಯನ್ನೋದಿ ನಾರಾಯಣಮೂರ್ತಿ ನಕ್ಕುಬಿಟ್ಟ.

" ಹೂಂ. ಏನೂಂತ ಉತ್ತರ ಬರೆದೆ ?"

" ಬರೆದೇ ಇಲ್ಲ. ಏನ್ಬರೀಲಿ ?"

" ಆಗಿದೇಂತ !"

ತುಂಗಮ್ಮನಿಗೆ ಗಾಬರಿಯಾಯಿತು.

" ಏನು ?"

" ಹೇಳಿದ್ನಲ್ಲಾ. ಆಗಿದೇಂತ....ನಾರಾಯಣಮೂರ್ತಿ ಎಂಬ ವರನಿಗೂ ತುಂಗಮ್ಮನೆಂಬ ವಧುವಿಗೂ ಈದಿನ ಶುಭಮುಹೂರ್ತದಲ್ಲಿ—"

" ಥೂ....ಹೋಗೀಂದ್ರೆ ನೀವು !"

ಕಾಫಿ ಮಾಡಲೆಂದು ತುಂಗಮ್ಮನೆದ್ದು ಒಳ ಹೋದಳು.

ಹೊರಗೆ, ಶಾಲೆ ಮುಗಿಸಿಕೊಂಡು ಬಂದ ತುಂಗಮ್ಮನ ತಮ್ಮನೊಡನೆ ನಾರಾಯಣಮೂರ್ತಿ ಹರಟೆ ಹೊಡೆದ....

....ತುಂಗಮ್ಮನ ತಂದೆ ಸೂಕ್ಷ್ಮವಾಗಿ ಈ ಎಳೆಯರನ್ನು ಪರೀಕ್ಷಿಸುತಿದ್ದರು. ಆದರೆ ಅವರಿಗೇನೂ ತಿಳಿಯುತ್ತಿರಲಿಲ್ಲ, ತೋಚುತ್ತಿರಲಿಲ್ಲ.

ನಾರಾಯಣಮೂರ್ತಿ ಮತ್ತು ತುಂಗಮ್ಮ ಆಗಾಗ್ಗೆ ಸಂದರ್ಭಸಾಧಿಸಿ

ತಾವಿಬ್ಬರೇ ಇರುತ್ತಿದ್ದರು. ಕಳ್ಳತನದಿಂದ ತಮಗೆ ಪ್ರಿಯವಾಗಿದ್ದುದನ್ನು ಕೊಟ್ಟು ಪಡೆಯುತ್ತಿದ್ದರು.

ಒಂದು ದಿನ ತುಂಗಮ್ಮ ಕೇಳಿದಳು:

"ಯಾವತ್ತು?"

"ಏನು?"

"....ಮದುವೆ."

"ಅಪ್ಪಯ್ಯನಿಗೆ ಕಾಗದ ಬರೀತೀನಿ ತುಂಗ."

"ಖಂಡಿತ?"

"ಅಲ್ದೆ!"

"ಆದಷ್ಟು ಬೇಗ್ನೆ ಆಗ್ಬೇಕು. ನಿಮ್ಮನ್ನ ಬಿಟ್ಟು ಇರೋಕೆ ಆಗಲ್ಲ ನಂಗೆ."

"ನಂಗಾಗುತ್ತೇನೊ ಬಿಟ್ಟಿರೋಕೆ!"

"ಪದ್ದಕ್ಕನಿಗೆ ಬರೀಲಾ?"

"ಏನೂಂತ?"

"ಅದೇ, ಈ ವಿಷಯ."

ಥಟ್ಟನೆ ಒಪ್ಪಿಗೆಯ ಉತ್ತರ ಬರುವುದೆಂದು ತುಂಗಮ್ಮ ನಿರೀಕ್ಷಿಸಿದ್ದಳು. ಆದರೆ ಹಾಗಾಗಲಿಲ್ಲ.

ತುಂಗಮ್ಮ ತಲೆಯೆತ್ತಿ, ಆಮನಸನ್ನು ಓದಬಯಸಿದವಳಂತೆ ಸೂಕ್ಷ್ಮವಾಗಿ ಆತನ ಮುಖವನ್ನೆ ದಿಟ್ಟಿಸಿದಳು.

"ಯಾಕೆ, ಇಷ್ಟವಿಲ್ವಾ ನಿಮಗೆ?"

"ಹಾಗಲ್ಲ ತುಂಗಾ."

"ಮತ್ತೆ?"

"ಇನ್ನೂ ಸ್ವಲ್ಪದಿನ ತಡಿ. ಏನೀಗ ಅವಸರ?"

ಅವಸರವೇನೂ ಇರಲಿಲ್ಲ ಅಲ್ಲವೆ! ಆಕೆ ತಡೆದಿದ್ದ ಅಷ್ಟೊಂದು ದಿನಗಳೂ ಅಲ್ಪವಾಗಿ ಹೋದುವು ಅಲ್ಲವೆ?

ತುಂಗಮ್ಮ ತಲೆಬಾಗಿಸಿದಳು. ಮನಸಿನ ಕ್ಷೋಭೆ ಕಣ್ಣೀರಿನ ರೂಪತಳೆದು ಒತ್ತರಿಸಿಕೊಂಡು ಬಂತು.

"ಅಳ ಬೇಡ ತುಂಗ"

—ಎಂದ ನಾರಾಯಣ ಮೂರ್ತಿ. ಅದು ಯಾಚನೆಯ ಧ್ವನಿ. ಅದರಲ್ಲಿ ದೈನ್ಯತೆ ಇತ್ತು.

ತುಂಗಮ್ಮ ಸೆರಗಿನ ತುದಿಯಿಂದ ಕಣ್ಣೊತ್ತಿಕೊಂಡಳು.

"ಇಲ್ಲ, ಅಳೋದಿಲ್ಲ."

"ಹಾಗಂದರೆ ಸಾಲದು. ಎಲ್ಲಿ ಇಲ್ನೋಡು."

ತುಂಗಮ್ಮ ಮುಖವೆತ್ತಿದಳು.

"ಹಾಗೆ. ನಗು ನೋಡೋಣ."

"............"

"ಎಲ್ಲಿ, ನಗು ಚಿನ್ನ."

"............"

"ಈವರ್ಷ ಡಿಸೆಂಬರ್‌ನೊಳಗಾಗಿ ಮದುವೆ ಖಂಡಿತ."

ತುಂಗಮ್ಮ ನಕ್ಕಳು. ನಾರಾಯಣ ಮೂರ್ತಿಯ ಕೈ ತುಂಗಮ್ಮನ ನಡುವನ್ನು ಬಳಸಿತು.

....ಒಂದು ಸಂಜೆ ನಾರಾಯಣಮೂರ್ತಿ ಬಂದಾಗ ತುಂಗಮ್ಮ 'ಹೊರಗೆ ಕುಳಿತಿ'ದ್ದಳು.

"ರಜಾನೇನೊ ?"

—ಎಂದ ಮೂರ್ತಿ.

"ಹೂಂ. ಹತ್ತಿರ ಬರ್ಬೇಡಿ."

"ಮುಟ್ಕೊಡ್ದೊ ?"

"ಥೂ-ಥೂ-"

"ಬರೇ ಗೊಡ್ಡು !"

"ಏನಂದಿರಿ ?"

"ಕೇಳಿಸ್ಲಿಲ್ಲಾಂತ ನಾಟಕ ಆಡ್ತೀಯಾ ?"

"ಆಧುನಿಕರು ! ಇನ್ನೊಮ್ಮೆ ಅನ್ನಿ ನೋಡೋಣ ಆ ಮಾತ್ನ."

ಮೂರ್ತಿ ಬೇರೆಯೇ ಮಾತುತೆಗೆದ :

"ಅಡುಗೆಮನೇಲಿ ಸದ್ದಾಗ್ತಿದೆಯಲ್ಲಾ, ಯಾರು ?"

"ತಮ್ಮ. ತಾವು ಬರಬಹುದೂಂತ ಕಾಫಿಮಾಡ್ತಿದಾನೆ."

"ಕುಡಿಯೋರು ಯಾರೊ ಆ ಕಾಫೀನ?"

"ಹಾಗೆಲ್ಲಾದರೂ ಅಂದ್ಬಿಂದೀರ ಅವನೆದುರು!"

"ಇಲ್ಲಪ್ಪೋ ಇಲ್ಲ."

ಒಂದು ನಿಮಿಷ ಸುಮ್ಮನಿದ್ದು ನಕ್ಕು ತುಂಗಮ್ಮ ಕೇಳಿದಳು:

"ಒಂದು ವಿಷಯ ಗೊತ್ತೆ?"

"ಏನು?"

"ನನ್ನಮ್ಮ ಕೇಳ್ದ ಇವತ್ತು, ಇನ್ನು ಮೂರ್ತೀನ ಭಾವ ಅಂತ ಕರೀಬಹುದೆ ಅಕ್ಕಾಂತ."

"ಓ! ಅಂತೂ ಡಂಗುರ ಹೊಡೀತಾ ಇದೀಯಾಂತನ್ನು."

ಆ ಧ್ವನಿಯಲ್ಲಿ ಅಸಮಾಧಾನದ ಛಾಯೆ ಇದ್ದುದನ್ನು ಕಂಡು ತುಂಗಮ್ಮ ಸುಮ್ಮನಾದಳು.

....ಆದರೆ ಪರಿಸ್ಥಿತಿ ಬಹಳ ದಿನ ಹಾಗೆಯೇ ಇರುವುದು ಸಾಧ್ಯವಿರಲಿಲ್ಲ. ತುಂಗಮ್ಮನ ತಂದೆ ಅನಿಶ್ಚಯತೆಯ ಹಲವಾರುದಿನಗಳನ್ನು ಕಳೆದು, ಕೊನೆಗೆ ಮಗಳೊಡನೆಯೇ ಆ ಪ್ರಸ್ತಾಪವೆತ್ತಿದರು.

"ಹೋದ ಭಾನುವಾರ ನಾರಾಯಣ ಮೂರ್ತಿ ಬಂದಿದ್ನೆ ತುಂಗಾ?"

"ಬಂದಿದ್ರು."

"ಯಾಕೋ, ಅವನು ಬರೋ ಹೊತ್ತಿಗೆ ಮನೇಲಿದ್ದು ಮಾತಾಡೋಣ ಅಂದರೆ ಸಾಧ್ಯವಾಗ್ತಾನೇ ಇಲ್ಲ."

"ಇವೆಯಲ್ಲಿ ನಿಮ್ಮ ಸಾವಿರ ಕೆಲಸಗ್ಳು...."

"ಮತ್ತೆ, ಮಾಡ್ಬೇಡ್ವೆ ತುಂಗ? ರಿಟೈರಾಗೋ ವರ್ಷ ಶೋಂಭೇರಿ ಅಂತ ಮಾತು ಕೇಳ್ಲಿ?"

ತುಂಗಮ್ಮ ನಕ್ಕಳು.

ಆಕೆಯ ತಂದೆ ಸ್ವಲ್ಪ ಹೊತ್ತು ತಡೆದು ಮತ್ತೆ ಆರಂಭಿಸಿದರು.

"ತುಂಗಾ, ನಾರಾಯಣ ಮೂರ್ತಿ ಹ್ಯಾಗಿದಾನೆ?"

ತುಂಗಮ್ಮನ ಎದೆ ಡವಡವನೆ ಹೊಡೆದುಕೊಂಡಿತು

"ಯಾಕೆ, ಚೆನ್ನಾಗಿಯೇ ಇದಾರಲ್ಲಾ!"

ಮತ್ತೆ ಕೆಲವು ನಿಮಿಷಕಾಲ ತಂದೆಯ ಮಾತು ನಿಂತಿತು.

"ತುಂಗಾ...."

"ಏನಣ್ಣ ?"

"ನಾರಾಯಣಮೂರ್ತಿ—....ಅವನೇನಾದರೂ ಈ ವಿಷಯ ಎತ್ತಿದ್ನೆ ತುಂಗ ?"

ಯಾವ ವಿಷಯ-ಎಂದು ತುಂಗಮ್ಮ ಕೇಳಬಹುದಾಗಿತ್ತು. ಆದರೆ ಹಾಗೆ ಕೇಳಲು ಮನಸಾಗಲಿಲ್ಲ. ತಂದೆಯ ಹೃದಯದ ಸಂಕಟ ಅವಳಿಗೆ ಅರ್ಥವಾಗುತಿತ್ತು.

ತಂದೆಯ ಪ್ರಶ್ನೆಗೆ ಉತ್ತರಕೊಡಬೇಕು ನಿಜ. ಆದರೆ ಏನೆಂದು ?

ಆಕೆ, ಸೀರೆಯ ಅಂಚಿನ ಚಿತ್ತಾರಗಳನ್ನೆ ನೋಡುತ್ತ ಕುಳಿತಳು.

"ಆ ಮಾತೇ ಬರ್ಲಿಲ್ಲಾಂತನ್ನು...."

ನಿರಾಸೆಯ ಭಾವನೆ ಸರಿಯಲ್ಲವೆಂದು ಹೇಳಲು ತುಂಗಮ್ಮ ತವಕ ಗೊಂಡಳು.

"ಇಲ್ಲಣ್ಣ. ಆ ವಿಷಯ ಬಂದಿತ್ತು."

"ಹೂಂ ? ನಿಜವಾಗ್ಲೂ ? ಮಾಡ್ಕೋತೀನೀಂತಂದ್ನೆ ?"

ತುಂಗಮ್ಮನಿಗೆ ನಾಚಿಕೆಯಾಯಿತು.

"ನೀನು ಕೇಳ್ಕೋಡು ಅಣ್ಣ...."

...ಶನಿವಾರದಿನ ನಾರಾಯಣಮೂರ್ತಿಗೆ ಬೆಳಿಗ್ಗೆ ಆಫೀಸು. ಮಧ್ಯಾಹ್ನ ಬಿಡುವು ಮಾಡಿಕೊಂಡು ತುಂಗಮ್ಮನ ತಂದೆ ಅವನನ್ನು ಕಾಣ ಹೋದರು.

ಅವರು ಬಂದೊಡನೆಯೆ, ಮುಂದೆ ಅವರಿಂದ ಬರಬಹುದಾದ ಪ್ರಶ್ನೆ ಯನ್ನೂ ಆತ ನಿರೀಕ್ಷಿಸಿಯೇ ಇದ್ದನೇನೊ !

ಮೂರ್ತಿಯ ಕೊಠಡಿಯಿಂದ ಹಿಂತಿರುಗಿದಾಗ, ಹೊತ್ತಿದ್ದ ಅರ್ಧ ಭಾರವನ್ನು ಕೆಳಕ್ಕೆ ಇಳುಹಿದ ಹಾಗೆ ಆಗಿತ್ತು ತುಂಗಮ್ಮನ ತಂದೆಗೆ.

ತನಗೆ ಒಪ್ಪಿಗೆ ಎಂದು ಮೂರ್ತಿ ತಿಳಿಸಿದ್ದ. ಬೇಗನೆ ಮೈಸೂರಿಗೆ ಹೋಗಿ ತನ್ನ ಮನೆಯವರನ್ನು ತಾನೆ ಒಪ್ಪಿಸುವುದಾಗಿ ಹೇಳಿದ್ದ.

ಬಹಳ ದಿನಗಳ ಬಳಿಕ ತಂದೆ ನಗತೊಡಗಿದುದನ್ನು ಕಂಡು ತುಂಗಮ್ಮ ನಿಗೆ ಬಲು ಸಂತೋಷವಾಯಿತು.

ಅನಂತರ ಮೂರ್ತಿ ಮನೆಗೆ ಬಂದಾಗ, ಕೊರಳು ಕೊಂಕಿಸಿ ತುಂಗಮ್ಮ ಕೇಳಿದಳು.

"ಅಂತೂ ನೀವೇ ಸೋತಿರಿ ಕೊನೇಲಿ."

"ಅದೇನು ?"

"ಅದೇನು-ಅಂದ್ರೆ ? ಹಿಂದೆ ಬೆಟ್ಟದಷ್ಟು ದಕ್ಷಿಣೇನೋ ಮತ್ತೇನೋ ಕೇಳಿದ್ರಂತಲ್ಲಾ ನಿಮ್ಮನೆಯುವರು ?"

"ಓ ಅದಾ ! ಬುದ್ಧಿ ಇಲ್ಲ ಅವರಿಗೆ."

"ಈಗ ನೀವೇನೂ ಕೇಳಲ್ವೆ ?"

ಮೂರ್ತಿ, ಬೀದಿಯಿಂದ ಮನೆಯ ಒಳ ಭಾಗವನ್ನು ಮರೆಮಾಡಿದ್ದ ಬಾಗಿಲ ಕಡೆಗೆ ನೋಡಿದ.

"ಕೇಳ್ತೀನಿ. ಕೊಡ್ತಿ ತಾನೆ ?"

ಆ ಸ್ವರದ ಉದ್ವೇಗವನ್ನು ತುಂಗಮ್ಮ ಗಮನಿಸಲಿಲ್ಲ.

"ನೀವೇನು ಕೇಳ್ತೀರಿ ಅನ್ನೋದು ಗೊತ್ತು."

"ಏನು ಹೇಳು ?"

"ಅದೇ ಮಾಮೂಲಿಂದು."

ಮಾಮೂಲಿನದನ್ನು ಮೂರ್ತಿ ಪಡೆದುಕೊಂಡ.

"ಇಷ್ಟೇ ಅಲ್ಲ ತುಂಗಾ...."

ಹುಡುಗಿಗೆ ಭಯವಾಯಿತು. ಆಕೆ ದೂರ ಸರಿದಳು.

ನಾರಾಯಣ ಮೂರ್ತಿಯೂ ಸುಮ್ಮನಾದ.

ಟೈಂ-ಪೀಸು ಮಾತ್ರ ಟಿಕಿ ಟಿಕಿ ಟಿಕಿ ಎಂದು ಹೊತ್ತಿನ ಮೇಲೆ ಸುತ್ತಿಗೆಯ ಹೊಡೆತ ಕೊಡುತಿತ್ತು.

"ನನ್ನ ಮೇಲೆ ನಂಬಿಕೆ ಇಲ್ವಾ ತುಂಗಾ ?"

"ಯಾಕೆ ಹಾಗಂತೀರಿ ?"

"ಮತ್ತೆ ?"

ಮತ್ತೆ ಭಯವಾಯಿತು ತುಂಗಮ್ಮನಿಗೆ. ಉತ್ತರ ಹೊಳೆಯಲಿಲ್ಲ.

"ನಾಳೆ ನಾನು ರಜಾ ತಗೋತೀನಿ ತುಂಗ. ಆಫೀಸಿಗೆ ಹೋಗಲ್ಲ."

ಮೂರ್ತಿಯ ಕಣ್ಣುಗಳಲ್ಲಿ ಆ ಮಾತಿನ ಅರ್ಥವನ್ನು ತುಂಗಮ್ಮ ಹುಡುಕಿದಳು.

"ನಾಳೆ ಬರ್ತೀನಿ ತುಂಗ. ನಿನ್ಜತೇಲಿ ತುಂಬಾ ಮಾತಾಡ್ಬೇಕು."

ಹಾಗೆ ಹೇಳಿ ಮೂರ್ತಿ ಹೊರಟು ಹೋದ.

....ಆ ನಾಳೆ ಬಂತು.

ಆತನೂ ಬಂದ.

ಭೀತಿ ಕಾತರ ಕುತೂಹಲಗಳಿಂದ ಸಂಕಟಪಡುತ್ತ ತುಂಗಮ್ಮ ಕಾದು ಕುಳಿತಿದ್ದಳು.

ಮನೆಯಲ್ಲಿ ಆಕೆಯೊಬ್ಬಳೇ ಇದ್ದ ಹೊತ್ತು ನೋಡಿಯೇ ಬಂದ ಆತ.

ಆ ದಿನ, ಆಗ ಆಗಬಾರದ್ದು ಆಗಿ ಹೋಯಿತು.

ಯೋಚನೆಗಳು ಈ ಭೂಮಿಗೆ ಮರಳಿ ಇಳಿದಾಗ ತುಂಗಮ್ಮ ಉಗುರಿನಿಂದ ಚಿವುಟಿ ಬಾಡಿಸಿದ ಎಳೆಯ ಬಳ್ಳಿಯಾಗಿದ್ದಳು.

ನಾರಾಯಣಮೂರ್ತಿ ಹೊರಟುನಿಂತಾಗ ಆಕೆ ಅತ್ತಳು.

ಆತ ಹೇಳಿದ:

"ಅಳಬೇಡ ತುಂಗ. ಈ ಭಾನುವಾರವೇ ನಾನು ಮೈಸೂರಿಗೆ ಹೋಗ್ತೀನಿ. ಎಲ್ಲಾ ಗೊತ್ಮಾಡ್ಕೊಂಡು ಬರ್ತೀನಿ."

"ಹೂಂ....ನನ್ನ ಕೈ ಬಿಡ್ಬೇಡಿ. ನನಗ್ಯಾರೂ ದಿಕ್ಕಿಲ್ಲ...."

ಆತ ಸ್ವಲ್ಪ ಬಾಗಿ, ಕುಳಿತಲ್ಲೆ ಇದ್ದ ಆಕೆಯ ತಲೆಗೂದಲನ್ನು ನಡುಗುತಿದ್ದ ಬೆರಳುಗಳಿಂದ ಸವರಿದ.

"ಹೂ....ತುಂಗ. ನೀನು ಯಾವ ಯೋಚ್ನೇನೂ ಮಾಡ್ಬೇಡ."

....ಆದರೆ ಯೋಚನೆ ಮಾಡಲೇ ಬೇಕಾಯಿತು ಮುಂದೆ.

ಆ ಭಾನುವಾರ ಮೂರ್ತಿ ಬರಲಿಲ್ಲ. ಮೈಸೂರಿಗೆ ಹೋಗಿರಬಹುದೆಂದು ಊಹಿಸಿ ಸಮಾಧಾನ ಪಟ್ಟಳು ತುಂಗಮ್ಮ. ತಂದೆ ಕೇಳಿದಾಗ ಅವರಿಗೂ ಹಾಗೆಯೇ ಉತ್ತರವಿತ್ತಳು.

ಆದರೆ ಎರಡು ದಿನಗಳ ಮೇಲೆ ತುಂಗಮ್ಮನ ಮನಸ್ಸು ಕ್ಷೋಭೆಯಿಂದ ನರಳಿತು. ಬೆಳಗ್ಗೆ ಬೇಗನೆದ್ದು, ಭಾವನ ಕೊಠಡಿಯನ್ನು ನೋಡಿಕೊಂಡು ಬರಲು ತಮ್ಮನನ್ನು ಆಕೆ ಕಳುಹಿದಳು.

ತಮ್ಮ ಒಂದು ಘಂಟೆಯ ಹೊತ್ತಿನೊಳಗೇ ಹಿಂತಿರುಗಿದ.

"ಇದಾರೆ ಅಕ್ಕ," ಎಂದ.

ತುಂಗಮ್ಮನ ಎದೆ ಧಸಕ್ಕೆಂದಿತು.

"ಏನಂದ್ರು?"

"ಭಾನುವಾರ ಮೈ ಚೆನ್ನಾಗಿರ್ಲಿಲ್ವಂತೆ. ಆದಕ್ಕೇ ಬರ್ಲಿಲ್ಲಾಂತ ಅಂದ್ರು."

ಅನಾರೋಗ್ಯದ ಮಾತುಕೇಳಿ, ಉಳಿದೆಲ್ಲ ಯೋಚನೆಗಳೂ ತುಂಗಮ್ಮ ನಿಂದ ಓಡಿ ಹೋದುವು.

"ಅಯ್ಯೊ! ಏನಾಗಿತ್ತಂತೆ! ಈಗ ಹ್ಯಾಗಿದಾರೆ?"

"ಏನಾಗಿತ್ತೊ! ಈಗಂತೂ ದಿನನಿತ್ಯದ ಹಾಗಿದಾರೆ. ನಾನು ಹೋದಾಗ ಮುಖಕ್ಕೆಲ್ಲ ಸೋಪು ಬಳಕೊಂಡು ಕನ್ನಡಿ ಮುಂದೆ ಕೂತಿದ್ರು.... ಅಲ್ಲ ಅಕ್ಕ, ಮುಖಕ್ಷೌರ ಮಾಡ್ಕೊಳ್ಳೋಕೆ ಎಷ್ಟೊಂದು ಟೈಮು ತಗೊಂಡ್ರೂಂತ ಅವರು!"

ತಮ್ಮನ ಟೀಕೆ ಕೇಳಿ ತುಂಗಮ್ಮನಿಗೆ ನಗು ಬಂತು.

"ಏನಂದ್ರು? ನಾಳೆ ಬರ್ತಾರಂತಾ?"

"ನಾಳೆ? ಅದ್ಯಾಕೊ? ಭಾನುವಾರ ಬರ್ತೀನೀಂತಂದ್ರು."

"ಹೂಂ...."

"ನಿಮ್ತಂದೆಗೂ ತಿಳಿಸೂಂತಂದ್ರು."

ಹಾಗಾದರೆ ಮುಂದಿನ ಭಾನುವಾರ ಏಕಾಂತದಲ್ಲೇನನ್ನೂ ಮೂರ್ತಿ ಯೊಡನೆ ಮಾತನಾಡುವುದು ಸಾಧ್ಯವಿರಲಿಲ್ಲ. ಯಾಕೆ ಹಾಗೆ ಹೇಳಿದರೊ?

ಭಾನುವಾರದವರೆಗೆ ಯಾಕೆ? ಮೊದಲೇ ಆತ ಬರಬಹುದು. ಬೇಕೆಂದೇ ತಮ್ಮನಿಗೆ ತಿಳಿಸಿಲ್ಲ ಅಷ್ಟೆ-ಎಂದು ತನ್ನನ್ನು ತಾನೇ ತುಂಗಮ್ಮ ಸಮಾಧಾನಪಡಿಸಿಕೊಂಡಳು.

ಆದರೆ ಆ ವಾರದಲ್ಲಿ ಯಾವ ದಿನವೂ ಆತ ಬರಲಿಲ್ಲ.

ಭಾನುವಾರ ಬಂದವನೂ ಕೂಡ, ನೇರವಾಗಿ ಕಣ್ಣೆತ್ತಿ ತುಂಗಮ್ಮ ನನ್ನು ನೋಡಲಿಲ್ಲ.

"ಮೈಸೂರಿನಿಂದೇನಾದರೂ ಕಾಗದ ಇಷ್ಟೆ ನಾಣಿ?"

—ಎಂದು ತುಂಗಮ್ಮನ ತಂದೆ ಸಹಜವಾಗಿಯೇ ಕೇಳಿದರು:

"ಏನೂ ಇಲ್ಲ...."

ಉತ್ತರಿಸಿದಾಗ ಆತ ತಡವರಿಸಿದಂತೆ ತೋರಿತು.

"ನೀನು ಹೋದ ಭಾನುವಾರವೇ ಮೈಸೂರಿಗೆ ಹೋಗಿರ್‍ಬಾದೂಂತ ತುಂಗ ಅಂತಿದ್ಲು...."

ಆ ಮಾತುಗಳ ಹಿಂದಿನ ತಿಳಿವಳಿಕೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸುತಿತ್ತು ಆತನ ನೋಟ.

"ಹೌದು. ಹೋಗ್ಬೇಕಾಗಿತ್ತು. ರಜಾ ಸಿಗಲಿಲ್ಲ. ಮೇಲಿನ ಶನಿವಾರ ಹೋಗ್ಬೇಕೊಂತಿದೀನಿ...."

ಮೂರ್ತಿ ಸುಳ್ಳು ಹೇಳುತಿದ್ದನೆಂದು ಯಾರೂ ಶಂಕಿಸಲಿಲ್ಲ.

"ಹೌದಪ್ಪಾ, ಬೇಗನೆ ಹೋಗಿಬಾ...."

ನಾರಾಯಣ ಮೂರ್ತಿ ಅವಸರದಲ್ಲಿದ್ದಂತೆ ತೋರಿತು. ಮಾತುಕತೆಯನ್ನು ಅಲ್ಲಿಗೇ ನಿಲ್ಲಿಸಿ ಆತ ಹೊರಟು ಹೋದ.

ಮೇಲಿನ ಶನಿವಾರವೂ ಮೂರ್ತಿ ಮೈಸೂರಿಗೆ ಹೋಗಲಿಲ್ಲ. ತುಂಗಮ್ಮ, ತಮ್ಮನ ಮೂಲಕ, ಬಂದು ಹೋಗೆಂದು ಹೇಳಿ ಕಳುಹಿದಳು. ಆತ ಬರಲಿಲ್ಲ.

ತುಂಗಮ್ಮನಿಗೆ ಗಾಬರಿಯಾಯಿತು. ಒಬ್ಬಳೇ ಇದ್ದಾಗ ಆಕೆ ಅತ್ತು ಅತ್ತು ಸೊರಗಿದಳು.

ಈ ಸಂಬಂಧ ಏರ್ಪಡುವುದೆಂಬುದರ ಬಗ್ಗೆ ತುಂಗಮ್ಮನ ತಂದೆಗೆ ಆವರೆಗೂ ಸಂದೇಹವಿರಲಿಲ್ಲ. ಈಗ ನಾರಾಯಣ ಮೂರ್ತಿಯ ಉಪೇಕ್ಷೆಯ ವರ್ತನೆಯನ್ನು ಕಂಡು ಅವರು ವ್ಯಾಕುಲಗೊಂಡರು.

"ಹುಡುಗ ಮುಂಡೇದು. ಮನಸ್ಸು ಬದಲಾಯಿಸ್ತೇನೊ"

—ಎಂದು ಗೊಣಗಿದರು.

"ನೀನೇನಾದರೂ ಕೆಟ್ಟಮಾತು ಅಂದಿಯೇನೆ?"

—ಎಂದು ಮಗಳನ್ನು ಕೇಳಿದರು.

ಎಂತಹ ಪ್ರಶ್ನೆ! ತುಂಗಮ್ಮ ಉತ್ತರಕೊಡಲಿಲ್ಲ.

ಆಕೆಯ ತಂದೆ ಮತ್ತೊಮ್ಮೆ ಕೇಳಿದರು ಅದೇ ಪ್ರಶ್ನೆಯನ್ನು.

"ಸಾಕಣ್ಣ ! ಸುಮ್ಸುಮ್ನೆ ಏನಾದರೂ ಅನ್ಬೇಡಿ!"

—ಎಂದು ತುಂಗಮ್ಮ ನುಡಿದಳು. ಸ್ವರ ಕರ್ಕಶವಾಗಿತ್ತು.

ಅಂತಹಸ್ಥಿತಿಯಲ್ಲೂ ವಿವೇಕ ಆಕೆಯ ಬಾಯಿಂದ ಒಂದು ಮಾತು ಹೊರಡಿಸಿತು:

"ನೀವೇ ಮೈಸೂರಿಗೆ ಕಾಗದ ಬರೀಬಾರ್ದಿ ಅಣ್ಣ ?"

....ತುಂಗಮ್ಮನ ತಂದೆ ಮೈಸೂರಿಗೆ ಕಾಗದ ಬರೆದು, ಕನ್ಯಾ ಸೆರೆ ಬಿಡಿಸಿಕೊಳ್ಳ ಬೇಕೆಂದು ಪ್ರಾರ್ಥಿಸಿದರು. ನಾರಾಯಣ ಮೂರ್ತಿ ಈಗಾಗಲೇ ಸಮಾಚಾರವನ್ನೆಲ್ಲ ತಿಳಿಸಿರಬಹುದೆಂದೂ ಬರೆದರು.

ನಾರಾಯಣಮೂರ್ತಿ ಏನನ್ನೂ ತಿಳಿಸಿರಲಿಲ್ಲ. ಅವನ ಮನೆಯವರು ತುಂಗಮ್ಮನ ತಂದೆಯನ್ನು ಅವಮಾನಿಸಿ ಉತ್ತರ ಕೊಟ್ಟರು. "ಅಯೋಗ್ಯ ಸಹವಾಸ! ಎಲ್ಲಿಯೋ ಒಮ್ಮೆ ಯಾರದೋ ನಿಮಿತ್ತದಿಂದ ಪರಿಚಯವಾದರೆ ಇಷ್ಟರವರೆಗೂ ಬಲೆ ಬೀಸಬೇಕೇನು? ನಮಗೂ ನಿಮಗೂ ಸಂಬಂಧ ಯಾವ ಕಾಲದಲ್ಲೂ ಸಾಧ್ಯವಿಲ್ಲ. ಮಗಳ ಮದುವೆಗೆ ಐದು—ಹತ್ತು ಸಾವಿರ ರೂಪಾಯಿ ಖರ್ಚುಮಾಡುವುದು ನಿಮ್ಮ ಹಣೆಯಲ್ಲಿ ಬರೆದೂ ಇಲ್ಲ. ಇಷ್ಟರ ಮೇಲೂ ನಮ್ಮ ಹುಡುಗನ ಮೇಲೇನಾದರೂ ಮಂಕುಬೂದಿ ಎರಚೋಕೆ ಪ್ರಯತ್ನಿಸಿದ್ರೆ ಆದರೆ, ನಾವು ಸುಮ್ಮನಿರೋದಿಲ್ಲ. ಸೂಕ್ತ ಕ್ರಮ ಕೈಗೊಳ್ಳ ಬೇಕಾದೀತು!"

ಸರಿಯಾಗಿ ಪಾಠ ಹೇಳಿಕೊಡುವ ಸಾಮರ್ಥ್ಯ ನಿಮಗಿಲ್ಲವೆಂದು ಹಿಂದೆ ವಿದ್ಯಾಧಿಕಾರಿಗಳಿಂದೊಮ್ಮೆ ಎಚ್ಚರಿಕೆ ಬಂದಿದ್ದಾಗ ತುಂಗಮ್ಮನ ತಂದೆ, ಆ ಅವಮಾನವನ್ನು ಸಹಿಸಲಾರದೆ ತಮ್ಮ ವೃತ್ತಿಗೇ ರಾಜಿನಾಮೆ ಕೊಡುವ ಯೋಚನೆ ಮಾಡಿದ್ದರು. ಅದು, ತುಂಗಮ್ಮನನ್ನು ಅವರಾಕೆ ಗರ್ಭದಲ್ಲಿ ಹೊತ್ತಿದ್ದ ಸಮಯ. ತಾವು ದುಡುಕಿ ಸಂಸಾರ ಬೀದಿ ಪಾಲಾಗಬಾರದೆಂದು, ಸಿಟ್ಟನ್ನೆಲ್ಲ ನುಂಗಿ, ಅವರು ತೆಪ್ಪಗಾಗಿದ್ದರು.

ಈಗ, ಅದನ್ನು ಮೀರಿಸುವಂತಹ ಅವಮಾನ!

ಆ ಕಾಗದವನ್ನೋದಿದರೆ ಮುಗ್ಧೆಯಾದ ಮಗಳ ಮನಸ್ಸಿಗೆ ನೋವಾಗುವುದೆಂದು, ಅದನ್ನು ಮಗಳಿಂದ ಬಚ್ಚಿಡಲು ಅವರು ಯತ್ನಿಸಿದರು. ಆದರೆ ಆ ಯತ್ನ ಸಫಲವಾಗಲಿಲ್ಲ.

ಆ ಕಾಗದವನ್ನೋದಿದಾಗ ತುಂಗಮ್ಮ ತುಟಿಪಿಟ್ಟೆನ್ನಲಿಲ್ಲ. ತಂದೆ ಶಾಲೆಗೆ ಹೊರಟ ಮೇಲೆ ಮಾತ್ರ ಆಕೆ ಗೋಳೋ ಎಂದು ಅತ್ತಳು.

ಆ ದಿನ ತಂದೆಗೆ ಮಗಳ ರೋದನದ ಅರಿವಾಯಿತು; ಆದರೆ ಅರ್ಥವಾಗಲಿಲ್ಲ.

ತುಂಗಮ್ಮನಿಗೆ ಭಯವಾಯಿತು. ಎಲ್ಲವೂ ತಿಳಿಯದೇ ಇದ್ದರೂ ಏನೂ ಅರಿಯದ ಹಸುಳೆಯಾಗಿರಲಿಲ್ಲ ಆಕೆ. ನಾರಾಯಣ ಮೂರ್ತಿಯನ್ನು ಕಂಡು ಮಾತನಾಡಿಯೇ ಬರಬೇಕೆಂದು ತುಂಗಮ್ಮ ತೀರ್ಮಾನಿಸಿದಳು.

"ರೂಮಿಗೆ ಬೀಗ ಅಕ್ಕ"

—ಎಂದ ತುಂಗಮ್ಮನ ತಮ್ಮ, ಕೊಠಡಿಯನ್ನು ನೋಡಿಬಂದು. ಅಕ್ಕನ ಮನಸ್ಸಿನ ಹೊಯ್ದಾಟವೇನೆಂಬುದು ಅವನಿಗೆ ಗೊತ್ತಿರಲಿಲ್ಲ. ಆದರೂ ನಾರಾಯಣ ಮೂರ್ತಿಯ ವಿಚಿತ್ರ ವರ್ತನೆಯಿಂದಾಗಿ, ಆ ಭಾವನ ಮೇಲಿದ್ದ ಮಮತೆ ಮಣ್ಣುಪಾಲಾಗಿತ್ತು.

"ಯಾಕೆ? ಊರಲ್ಲಿಲ್ವೇನು?"

"ಇಲ್ವಂತಕ್ಕಾ. ಮೈಸೂರಿಗೆ ಹೋಗಿದಾರಂತೆ."

ಮೈಸೂರಿಗೆ!

ಹೃದಯದ ಬೇಗುದಿಯನ್ನೆಲ್ಲ ತಣಿಸುವ ತಂಗಾಳಿಯೊಂದು ಬೀಸಿದ ಹಾಗಾಯಿತು ತುಂಗಮ್ಮನಿಗೆ. ಇರಬಹುದೆ? ಇದು ಸಾಧ್ಯವೆ? ಆತ ಒಳ್ಳೆಯವನೇ ನಿಜ—ಅಲ್ಲವೆ?

ಆ ಸುದ್ದಿ ಕೇಳಿ ತುಂಗಮ್ಮ ಮುಗುಳು ನಕ್ಕಳು.

ಆಕೆಯ ತಂದೆಯೇನೂ ಅದರಿಂದ ಸಂತುಷ್ಟರಾಗಲಿಲ್ಲ. ಅವರೆಂದರು:

"ನೀನು ಅವನ ಯೋಚ್ನೆ ಬಿಟ್ಬಿಡು ತುಂಗಾ! ನಮಗೂ ಮಾನ ಇದೆ, ಮರ್ಯಾದೆ ಇದೆ. ಬಡವರೂಂತ ಅದನ್ನೂ ಕಳಕೊಂಡಿಲ್ಲ ತಾನೆ?"

ಆ ಒಂದೊಂದು ಮಾತೂ ಶೂಲದಹಾಗೆ ತುಂಗಮ್ಮನನ್ನು ಇರಿಯುತಿತ್ತು.... ಮಾನ.... ಮರ್ಯಾದೆ....

ನಾರಾಯಣಮೂರ್ತಿ ವಿಶ್ವಾಸಘಾತ ಮಾಡಲಾರನೆಂಬ ನಂಬಿಕೆ

ಇನ್ನೂ ತುಂಗಮ್ಮನಲ್ಲಿ ಉಳಿದಿತ್ತು. ಬೀಸುತಿದ್ದ ಸುಂಟರಗಾಳಿ ಬೇಗನೆ ನಿಂತು, ವಾತಾವರಣ ನಿರ್ಮಲವಾಗುವುದನ್ನು ಆವಳು ಇದಿರು ನೋಡಿದಳು.

ಸುಂಟರಗಾಳಿ ನಿಲ್ಲಲೇ ಇಲ್ಲ....

ತುಂಗಮ್ಮ ತಮ್ಮನನ್ನು, ನಾರಾಯಣಮೂರ್ತಿ ಕೆಲಸ ಮಾಡುತಿದ್ದ ಆಫೀಸಿಗೆ ಕಳುಹಿ ಕೊಟ್ಟಳು.

ಆತ ಹಿಂತಿರುಗಿ ಬಂದು ಹೇಳಿದ:

"ಹೋದ ಭಾನುವಾರದಿಂದ ಅವರಿಗೆ ಮೂರು ವಾರ ರಜಾನಂತೆ ಅಕ್ಕಾ. ಸಿಕ್ ಲೀವ್....ಆತ ಏನಾದ್ರೇನು? ನಿನಗ್ಯಾಕಕ್ಕ ಇಷ್ಟೊಂದು ಚಿಂತೆ ಅವನ್ದು?"

ತಮ್ಮ ಅದೇನು ಕೇಳುತಿದ್ದನೊ? ತುಂಗಮ್ಮನ ಕಿವಿಗಳಲ್ಲಿ ಮೊರೆಯುತಿದ್ದುದೊಂದೇ—ಸಿಕ್ ಲೀವ್. ತನ್ನ ಮೂರ್ತಿಗೆ ಕಾಹಿಲೆಯೆ? ಅಯ್ಯೊ! ಅದೇನು ಸಂಕಟವೊ! ಆತ ತನಗೆ ಬರೆದು ತಿಳಿಸಬಾರದೆ? ತನ್ನನ್ನು ಕರೆಸಿಕೊಳ್ಳಬಾರದೆ?

ಮೂರು ವಾರಗಳ ಬಳಿಕ ತಮ್ಮ ಮತ್ತೊಮ್ಮೆ ವಿಚಾರಿಸಿಕೊಂಡು ಬಂದ.

"ಅಕ್ಕ! ಮೂರ್ತಿಗೆ ವರ್ಗವಾಯ್ತಂತೆ!"

"ಆ!"

"ವರ್ಗ."

ತುಂಗಮ್ಮನಿಗೆ ಬವಳಿ ಬಂದಂತಾಯಿತು. ಅವಳು ಗೋಡೆಗೊರಗಿ ಕುಸಿಕುಳಿತಳು.

ಅದೊಂದನ್ನೂ ಗಮನಿಸದೆ ತಮ್ಮ ವರದಿಯೊಪ್ಪಿಸುತ್ತಲಿದ್ದ.

"ಮೈಸೂರಿಗೆ ವರ್ಗವಾಯ್ತಂತೆ. ಇನ್ನು ಅಲ್ಲೇ ಕೆಲಸ ಮಾಡ್ತಾರಂತೆ."

ಕುಸಿಕುಳಿತಿದ್ದ ತುಂಗಮ್ಮನ ಕಣ್ಣುಗಳು ವಿಚಿತ್ರವಾಗಿ ಚಲಿಸುತಿದ್ದುವು. ಅದನ್ನು ಕಂಡ ತಮ್ಮನಿಗೆ ಗಾಬರಿಯಾಯಿತು.

"ಅಣ್ಣಾ!"

—ಎಂದು ಆತ ಕೂಗಿದ. ಆದರೆ ತಂದೆ ಮನೆಯಲ್ಲಿರಲಿಲ್ಲ.

"ಅಕ್ಕಾ! ಅಕ್ಕಾ!"

—ಎಂದು ತಮ್ಮ, ಸೋದರಿಯ ಭುಜಕುಲುಕಿದ.

"ಅಕ್ಕಾ! ಅಕ್ಕಾ! ನೋಡು, ಇಲ್ನೋಡು ಅಕ್ಕಾ!"

ತಮ್ಮನ ಕರೆಗೆ ತುಂಗಮ್ಮ ಚೇತರಿಸಿಕೊಂಡಳು.

ಆದರೆ ಮನಸ್ಸು ಕೇಳುತಿತ್ತು:

'ಯಾಕೆ? ಯಾಕೆ ಏಳ್ತಿದ್ದೀಯಾ? ಇಂಥ ಬದುಕಿಗಿಂತ ಯಾವಕಾಲ ದಲ್ಲೂ ಎಚ್ಚರವಾಗದೇ ಇರುವ ದೀರ್ಘನಿದ್ರೆಯೇ ಮೇಲಲ್ಲ?'

ಆದರೆ ಅದು, ಸ್ಮರಿಸಿದೊಡನೆ ಬರುವ ದೀರ್ಘನಿದ್ರೆಯಾಗಿರಲಿಲ್ಲ.

ಹೊಸಹೊಸ ಪದಗಳು ತುಂಗಮ್ಮನ ಮೆದುಳಿಗೆ ಲಗ್ಗೆ ಇಟ್ಟುವು.... ಪಾಪ....ಕಳಂಕ....ಮದುವೆಯಾಗದೆಯೇ ತಾಯ್ತನ....ಅಯ್ಯೋ!

ತನ್ನನ್ನು ಸಾಕಿಸಲಹಿದ್ದ ತಂದೆಗೆ ಎಂತಹ ದ್ರೋಹ ಬಗೆದಿದ್ದಳಾಕೆ! ಅವರ ವೃದ್ಧಾಪ್ಯದಲ್ಲಿ ಅದೆಂತಹ ಪರಮ ಸುಖವನ್ನು ತಾನು ಒದಗಿಸಿ ಕೊಟ್ಟ ಹಾಗಾಯಿತು!

ಈ ಅಪರಾಧಕ್ಕೆ ಶಿಕ್ಷೆಯುಂಟೆ? ಪ್ರಾಯಶ್ಚಿತ್ತವುಂಟೆ? ಪರಿಹಾರ ವುಂಟೆ?

ಘಂಟೆಘಂಟೆಗಳಕಾಲ ಯೋಚಿಸಿದ ಮೇಲೂ ಆಕೆಗೆ ಹೊಳೆಯುತಿದ್ದು ದೊಂದೇ—ಸಾವು.

ತಂದೆ, ಹುಚ್ಚಿಯಂತೆ ವರ್ತಿಸುತಿದ್ದ ಮಗಳನ್ನು ಕಂಡರು. ಏನೂ ತಿಳಿಯದ ಎಳೆಯಮಗು, ಮನಸ್ಸಿಗೆ ಹಚ್ಚಿಕೊಂಡಿದೆ, ಎಂದು ವ್ಯಥೆಪಟ್ಟರು. ಆ ಮಗಳ ಅಳಲಿನ ಆಳ ಎಷ್ಟೆಂಬುದು ಅವರಿಗೆ ತಿಳಿಯಲಿಲ್ಲ.

ಅಲ್ಪ ಸ್ವಲ್ಪ ತಿಳಿವಳಿಕೆಗೆ ಅನುಸಾರವಾಗಿ ಎಣಿಕೆ ಹಾಕುತ್ತಲೇ ಇದ್ದಳು ತುಂಗಮ್ಮ....ಮೂರನೆಯತಿಂಗಳು....ಸಂದೇಹವಿರಲಿಲ್ಲ.

ಯಾವುದು ಮೇಲು? ಬದುಕಿದರೂ ಮನೆತನಕ್ಕೆ ಕುಂದು—ಸತ್ತರೂ ಕುಂದು.

ಮನಸಿನರೋಗ ದೇಹಕ್ಕೆ ಅಂಟಿಕೊಂಡು ಮೈ ಕಾವೇರಿ ಜ್ವರ ಬಂದು ತುಂಗಮ್ಮ ಮಲಗಿಕೊಂಡಳು. ಗಾಬರಿಯಾದ ತಂದೆ ಕಣ್ಣಲ್ಲಿ ಎಣ್ಣೆ ಇಟ್ಟು ಆರೈಕೆ ನಡೆಸಿದರು.

ಆಕೆ ಚೇತರಿಸಿಕೊಂಡಾಗ, "ಮಗು ಸತ್ತು ಬದುಕಿತು" ಎಂದು ಸಮಾಧಾನದ ಉಸಿರೆಳೆದರು ತಂದೆ.

ಆದರೆ ಚೇತರಿಸಿಕೊಳ್ಳುತಿದ್ದ ದುರ್ಬಲಳಾಗಿದ್ದ ತುಂಗಮ್ಮ ಮಲಗಿದ್ದಲ್ಲಿಂದಲೆ ತಂದೆಯ ಕೈಗಳಿಗೆ ಆತುಕೊಂಡು, ವಯಸ್ಸಾಗಿದ್ದ ಆ ಬೆರಳುಗಳಿಗೆ ಕಣ್ಣೀರಿನ ಸ್ನಾನಮಾಡಿಸಿದಳು.

"ಯಾಕಮ್ಮ, ಯಾಕೆ ಅಳ್ತಿದ್ದೀಯಾ? ಬೇಗನೆ ಗುಣವಾಗತ್ತೆ. ಯಾವ ಹೆದರಿಕೇನೂ ಇಲ್ಲ...."

—ಎಂದು ತಂದೆ ರೋಗಿಯನ್ನು ಸಂತೈಸಿದರು.

ಕ್ಷೀಣವಾಗಿದ್ದರೂ ಸ್ವರ ಕೇಳಿಸಿತು.

"ನಂಗೆ ಗುಣವಾಗದೇ ಇದ್ರೂ ಮೇಲು ಅಣ್ಣ."

"ಯಾಕೆ, ಯಾಕೆ ಹಾಗಂತೀಯಾ ಮಗಳೆ."

"ಅಣ್ಣ, ಅಣ್ಣಯ್ಯ, ನಾನು ದೊಡ್ಡ ತಪ್ಪು ಮಾಡಿದೀನಿ ಅಣ್ಣಯ್ಯ."

ತುಂಗಮ್ಮನ ತಂದೆಗೆ ಆಕ್ಷಣ ಅರ್ಥವಾಗಲಿಲ್ಲ; ಆದರೆ ಮರುಕ್ಷಣವೆ ಅರ್ಥವಾಯಿತು. ಅರ್ಥವಾದಾಗ ಹೃದಯ ಕ್ರಿಯೆ ನಿಂತು ಚಲಿಸಿತು.

ತನ್ನ ಬಲಗೈಯನ್ನು ಮಗಳ ಬಿಗಿತದಿಂದ ಬಿಡಿಸಿಕೊಂಡು, ಆಕೆಯ ತಲೆಗೂದಲ ಮೇಲೆ ಆ ತಂದೆ ಕೈಯಾಡಿಸಿದರು. ಆ ವಯಸ್ಸಾದ ಕಣ್ಣುಗಳಲ್ಲಿ ಮೂಡಿ ಬಂದ ಬಿಸಿಯಾದ ಕಂಬನಿಗಳೆರಡು ಮಗಳ ಮೇಲೆ ತೊಟ್ಟಿಕ್ಕಿದುವು. ತಾನೂ ಹಾಸಿಗೆಯ ಮೇಲೆ ಬಾಗಿ, ಮಗಳ ತಲೆಯನ್ನು ಭಾರವಾದ ತನ್ನ ಹೃದಯಕ್ಕೆ ಆನಿಸಿಕೊಂಡು ಬಹಳ ಹೊತ್ತು ಅವರು ಹಾಗೆಯೇ ಕುಳಿತರು.

ಮಗಳು ಮತ್ತಷ್ಟು ಕ್ಷೀಣವಾದ ಸ್ವರದಲ್ಲಿ ಕೇಳಿದಳು:

"ತಪ್ಪಾಯ್ತು, ಕ್ಷಮಿಸ್ತೀಯಾ ಅಣ್ಣ, ಅಣ್ಣ, ಕ್ಷಮಿಸ್ತೀಯಾ?"

"ಮಾತಾಡ್ಬೇಡ ತುಂಗ. ಆಯಾಸವಾಗುತ್ತೆ...."

ಎನ್ನುತ್ತ ತಂದೆ ಬಲುಪ್ರೀತಿಯಿಂದ ತನ್ನ ತೋರು ಬೆರಳನ್ನು ಮಗಳ ತುಟಿಗಳಿಗೆ ಅಡ್ಡವಾಗಿ ಹಿಡಿದರು. ಆ ಸ್ವರವೂ ನಡುಗುತಿತ್ತು—ಬೆರಳೂ ಕೂಡಾ.

....ಮಗಳು ಬದುಕಿದಳು. ತಂದೆ ತಲೆಕೆಡಿಸಿಕೊಳ್ಳಲಿಲ್ಲ.

ಬಲು ತಾಳ್ಮೆಯಿಂದ ಶಾಂತವಾಗಿ ಅವರು ಯೋಚಿಸಿದರು. ನಾರಾಯಣ ಮೂರ್ತಿ ತಾನಾಗಿ ಈ ವಿಷಯದ ಬಗ್ಗೆ ಚಕಾರವೆತ್ತುವವನಲ್ಲ. ಅವನ ಮನೆಯವರ ಕಿವಿಗೆ ಇದನ್ನು ಹಾಕುವುದರಿಂದ ಯಾವ ಪ್ರಯೋಜನವೂ ಇರಲಿಲ್ಲ. ಆದರೆ ಮೂರ್ತಿಯನ್ನೇ ಹಿಡಿದು ಮಾತನಾಡಿಸಿ ನೋಡುವ ಕಡೆಯ ಯತ್ನವೊಂದಿತ್ತು.

ತುಂಗಮ್ಮನನ್ನು ಕೆಟ್ಟ ಔಷಧಿಗಳ ಕೃತಕಪ್ರಯತ್ನಗಳ ಪ್ರಯೋಗಕ್ಕೆ ಒಳಗುಮಾಡುವುದಕ್ಕಂತೂ ಅವರು ಸಿದ್ಧರಿರಲಿಲ್ಲ.

ಆದುದರಿಂದಲೆ, ಏನನ್ನೂ ಮಾಡದೆ ದಿನ ಕಳೆಯುವುದೂ ಸಾಧ್ಯವಿರಲಿಲ್ಲ.

ತುಂಗಮ್ಮನ ತಂದೆ ರಜೆಪಡೆದು ಬೆಳಗಾಂವಿಗೆ ಹೋದರು. ಅಲ್ಲಿ ಹಿರಿಯ ಮಗಳು ತುಂಬುಗರ್ಭಿಣಿ. ತಮ್ಮ ಮನೆತನಕ್ಕೆ ಒದಗಿದ್ದ ಆಪತ್ತಿನ ವಿಚಾರವಾಗಿ ಆಗ ಆಕೆಗೆ ಹೇಳುವುದು, ಆಕೆಯ ಮನೋಸ್ಥಿತಿ ದೇಹಸ್ಥಿತಿಗಳ ಮೇಲೆ ಕೆಟ್ಟ ಪರಿಣಾಮವಾಗಲು ಕಾರಣವಾಗುವುದು, ಮೂರ್ಖತನದ ಪರಮಾವಧಿಯೆಂದು ಅವರಿಗೆ ತೋರಿತು. ಅಳಿಯನಲ್ಲೂ ಬದಲಾವಣೆಗಳಾಗಿದ್ದುವು. ಆತನಿಗೆ ಈ ವಿಷಯ ಹೇಳಿದರೆ, ಸಹಾನುಭೂತಿ ದೊರೆಯದೇ ಹೋಗಬಹುದೆಂಬ ಶಂಕೆ ಮೂಡಿತು. ಹೇಳಿ ನಿರಾಶರಾಗುವುದಕ್ಕಿಂತ, ಹೇಳದೆ ಸುಮ್ಮನಿರುವುದೇ ಮೇಲು ಎಂದುಕೊಂಡರು.

ಹಿರಿಯ ಮಗಳು ಪದ್ಮ ಕೇಳಿದಳು :

"ತುಂಗ ಚೆನ್ನಾಗಿದಾಳ ಅಣ್ಣ ?"

"ಹೂನಮ್ಮಾ...."

"ಕರಕೊಂಡು ಬರ್‍ಬಾರ್‍ದಾಗಿತ್ತಾ ?"

"ಅದಕ್ಕೇನೇ, ಇನ್ನೊಂದ್ಸಲ ಇಬ್ರೂ ಬರ್‍ತೀವಿ."

"ತಮ್ಮನ್ನೂ ಕರಕೊಂಡು ಬನ್ನಿ."

"ಹೂಂ....ಹೂಂ...."

ಬಳಿಕ, ತಂದೆ ನಿರೀಕ್ಷಿಸಿದ್ದ ಪ್ರಶ್ನೆಯನ್ನೇ ಹಿರಿಯ ಮಗಳು ಕೇಳಿದಳು :

"ತುಂಗನ ಮದುವೆ ವಿಷಯ ಏನ್ಮಾಡ್ದೆ ಅಣ್ಣ ?"

"ನೋಡ್ತಾ ಇದೀನಮ್ಮ . ಒಂದೋ ಬೇಸಗೇಲಿ ಆಗ್ಬೇಕು."

"ನಾರಾಯಣ ಮೂರ್ತ್ತಿಂತ—"

"ಆತನಿಗೀಗ ಮೈಸೂರ್ಗೆ ವರ್ಗವಾಗಿದೆ. ಆ ಸಂಬಂಧ ಕುದುರೋ ಮಟ್ಟಿಗೆ ಕಾಣೆ. ಆದರೂ ಕಟ್ಟಕಡೇ ಪ್ರಯತ್ನ ಮಾಡಿ ನೋಡ್ತೀನಿ. ಫಲ ಕೊಡೋದೂ ಕೊಡದೇ ಇರೋದೂ ಭಗವಂತನ ಇಚ್ಛೆ."

....ಹಾಗೆ ಭಗವಂತನ ಮೇಲೆ ಭಾರ ಹಾಕಿ ತುಂಗಮ್ಮನ ತಂದೆ ಮೈಸೂರಿಗೆ ಬಂದರು. ಅಲ್ಲಿಗೆ ಬಂದುದಕ್ಕೊಂದು ಕುಂಟು ಕಾರಣ ಹೇಳಿ ಬೀಗರ ಮನೆಯಲ್ಲಿ ಇಳಿದುಕೊಂಡರು. ಒಂದುದಿನವೆಲ್ಲಾ ಪ್ರಯತ್ನಪಟ್ಟ ಮೇಲೆ ನಾರಾಯಣಮೂರ್ತಿಯೊಬ್ಬನನ್ನೇ ಹಿಡಿಯುವುದು ಸಾಧ್ಯವಾಯಿತು.

ಆತ ಅಪರಾಧಿಯೆಂಬುದು ಆತನ ಪ್ರತಿಯೊಂದು ಚಲನವಲನ ದಲ್ಲೂ ಸ್ಪಷ್ಟವಾಗಿತ್ತು.

ಆದರೂ ಆ ಭೂಪ ಹಾಡಿದ್ದೊಂದೇ ಹಾಡು :

"ನಾನೇನೂ ಮಾಡಿಲ್ಲ. ನೀವು ನನ್ನ ಏನು ಬೇಕಾದ್ರೂ ಮಾಡ್ಬಾದು."

ಮೊದಲು ತುಂಗಮ್ಮನ ತಂದೆ, ಆದುದರಲ್ಲಿ ತಪ್ಪೇನೂ ಇಲ್ಲ, ಮದುವೆಯಾದರಾಯಿತು, ಎಂದರು. ಆ ಬಳಿಕ ಬೆದರಿಸಿ ನೋಡಿದರು. ಕೊನೆಯಲ್ಲಿ ಕಣ್ಣಲ್ಲಿ ನೀರು ತಂದುಕೊಂಡು ಅಂಗಲಾಚಿದರು.

ನಾರಾಯಣಮೂರ್ತಿಯ ಮುಖ ಕಪ್ಪಿಟ್ಟಿತು. ಆದರೆ ಆತನ ಹೃದಯ ಕರಗಲಿಲ್ಲ.

ನಿರಾಶರಾಗಿ ತುಂಗಮ್ಮನ ತಂದೆ ಎದ್ದು ನಿಂತು ಹೇಳಿದರು :

"ಇನ್ನೆಷ್ಟು ಮನೆಗಳಿಗೆ ಬೆಂಕಿ ಇಡ್ತೀಯಪ್ಪಾ. ನೀನು ಮನುಷ್ಯನಲ್ಲ, ರಾಕ್ಷಸ!"

....ರಾಕ್ಷಸರಬದಲು ಮನುಷ್ಯರನ್ನು ಹುಡುಕಿಕೊಂಡು ಅವರು ಬೆಂಗಳೂರಿಗೆ ಬಂದರು. ಇನ್ನು ಹೆಚ್ಚು ದಿನ ತಡೆಯುವ ಹಾಗಿರಲಿಲ್ಲ....

ಮಾವಳ್ಳಿಯಲ್ಲಿ ಮನೆ ಮಾಡಿದ್ದ ತಮ್ಮ ಹಳೆಯ ಶಿಷ್ಯನೊಬ್ಬನನ್ನು ಅವರು ಹುಡುಕಿ ಹಿಡಿದರು.

ಅವರೇನೊ ಆತನ ಪಾದಕ್ಕೆ ಅಡ್ಡ ಬಿದ್ದು ಬೇಡಿಕೊಳ್ಳುವ ಸ್ಥಿತಿಗೂ ಬಂದಿದ್ದರು.

ಮದುವೆಯಾಗೆಂದು ಆ ಬೇಡಿಕೆಯಲ್ಲ. ಅದರ ಆಸೆ ಅವರಿಗಿರಲಿಲ್ಲ. ಸಪತ್ನೀಕನಾಗಿದ್ದ ಆತನೊಡನೆ ತನ್ನ ಮನೆತನದ ಮಾನರಕ್ಷಣೆಯ ಅಭಯವನ್ನು ಅವರು ಯಾಚಿಸಿದರು.

ಮೊದಲು ಅಳುಕಿದರೂ ಆತ ನಿರಾಕರಿಸಲಿಲ್ಲ.

....ಹಾಗೆ ತುಂಗಮ್ಮ, ಬೆಳಗಾಂವಿಯ ಅಕ್ಕನಮನೆಗೆಂದು ಹೊರಟು, ತಮ್ಮನನ್ನು ಬೀಳ್ಕೊಟ್ಟು ತಂದೆಯೊಡನೆ ಬೆಂಗಳೂರಿನ ಹಾದಿ ಹಿಡಿದಳು.

ಆಕೆಯನ್ನು ಶಿಷ್ಯನ ಮನೆಯಲ್ಲಿರಿಸಿ ತಂದೆ, ತಮ್ಮ ಒಂಟಿಯಾದ ಬರಡು ಜೀವನದತ್ತ ಹೊರಟರು.

ಹೊರಡುತ್ತ ಅವರೆಂದರು :

"ಹೋಗ್ತೀನಿ ತುಂಗಾ. ದೇವರಿದ್ದಾನೆ. ಮನೆಯವರಿಗೇನೂ ತೊಂದರೆ ಕೊಡ ಬೇಡವಮ್ಮ...."

ಬಿಕ್ಕಿ ಬಿಕ್ಕಿ ಅಳುತಿದ್ದುದೇ ತುಂಗಮ್ಮ ಕೊಟ್ಟ ಉತ್ತರ.

ತಂದೆಯ ಮನಸ್ಸು ಕಹಿಯಾಗಿತ್ತು. ಆದರೂ ಅವರು ಅಳುತಿದ್ದ ಮಗಳ ಬಳಿಗೆ ಬಂದು ಸಂತೈಸಿದರು.

"ಆಗಬಾರದ್ದು ಆಗಿ ಹೋಯ್ತು. ಅಳಬೇಡ ತುಂಗಾ. ಅಳ ಬೇಡ...."

ತುಂಗಮ್ಮ ಧ್ವನಿ ತೆಗೆದು ಅತ್ತಳು.

ತಂದೆ, ತನ್ನ ಮಗಳ ತಲೆಗೂದಲ ಮೇಲೆ ಬೆನ್ನಿನ ಮೇಲೆ ಕೈಯಾಡಿಸಿದರು. ಕಂಬನಿ ನಿರ್ಲಜ್ಜವಾಗಿ ಅವರ ಬತ್ತಿದ ಕಪೋಲಗಳ ಮೇಲಿಂದ, ನರೆತ ಕುರುಚಲುಗಡ್ಡದ ಮೇಲಿಂದ, ಹರಿಯಿತು.

೬

ಸರಸಮ್ಮ ಎಷ್ಟೋ ಹುಡುಗಿಯರ ಕರುಣ ಕಥೆಗಳನ್ನು ಕೇಳಿದ್ದ ಅನುಭವಿ. ಅಭಯಧಾಮಕ್ಕೆ ಬಂದ ಯಾವ ಹುಡುಗಿಯೂ ಭಾವನೆಗಳನ್ನು ಹತ್ತಿಕ್ಕಿ ತನ್ನ ಬದುಕಿನ ಬಗೆಗೆ ಒಣವರದಿಯನ್ನೆಂದೂ ಒಪ್ಪಿಸಿರಲಿಲ್ಲ. ಇಲ್ಲವೆ, ಉಪ್ಪುಖಾರ ಸೇರಿಸಿ ಸ್ವಕಪೋಲ ಕಲ್ಪಿತ ರಮ್ಯ ಕಥೆಯನ್ನೂ ಹೇಳಿರಲಿಲ್ಲ. ತುಂಗಮ್ಮನೂ ಅಷ್ಟೇ....

ಮಾತುಗಳು ತುಂಡು ತುಂಡಾಗಿ ಬರುತಿದ್ದುವು. ಘಟನೆಗಳ ನಿರೂಪಣೆಯಲ್ಲಿ ಕ್ರಮಬದ್ಧತೆ ಇರಲಿಲ್ಲ. ಯಾವುದಾದರೊಂದು ವಿಷಯ ಮೊದಲು ಮರೆತು ಹೋಗಿ, ನೆನಪಾದ ಮೇಲೆ ಹೊರಬರುತಿತ್ತು.

ಆದರೆ ಸರಸಮ್ಮ ಅಷ್ಟೆಲ್ಲವನ್ನೂ ಸರಿಯಾಗಿ ಜೋಡಿಸಲು ಸಮರ್ಥರಾಗಿದ್ದರು. ತುಂಗಮ್ಮನ ಮಾತಿನ ಸರಣಿ ಕಡಿಕಡಿದು ಬಂದಂತೆ, ಲಜ್ಜೆಗೊಂಡು ಆಕೆ ಹೇಳದೇ ಇದ್ದುದನ್ನೂ ಸರಸಮ್ಮ ಊಹಿಸಿಕೊಳ್ಳುತಿದ್ದರು. ಅವರ ಪಾಲಿಗೆ ತುಂಗಮ್ಮನ ಜೀವನ ತೆರೆದ ಪುಸ್ತಕವಾಗಿತ್ತು.

ತಂದೆ ತನ್ನನ್ನು ಮಾವಳ್ಳಿಯಮನೆಯಲ್ಲಿ ಬಿಟ್ಟು ಹೋದುದನ್ನು ತಿಳಿಸಿದ ಮೇಲೆ ತುಂಗಮ್ಮ ಸುಮ್ಮನಾದಳು.

ಸರಸಮ್ಮನೂ ಮಾತನಾಡಲಿಲ್ಲ.

ಆ ಮೌನದ ವಿರಾಮ ಅವಶ್ಯವಾಗಿತ್ತು.

ನಿದ್ದೆ ಹೋಗಿದ್ದ ಜಲಜ ಅತ್ತಿಂದಿತ್ತ ಹೊರಳಿದಳು. ಹುಡುಗಿ ಎದ್ದಳೇನೋ ಎಂದು ಕೊಂಡರು ಸರಸಮ್ಮ. ಆವರ ಕೆಲಸವಾಗಿಯೇ ಇರಲಿಲ್ಲ. ಬರೆದುಕೊಳ್ಳುವ ದೊಡ್ಡ ಪುಸ್ತಕ ಮುಚ್ಚಿಕೊಂಡು ಮೇಜಿನ ಮೇಲೆ ನಿದ್ದೆ ಹೋಗಿತ್ತು. ವೃತ್ತಿ ಶಿಕ್ಷಣದ ತರಗತಿ ನಡೆಯುತಿತ್ತು ಹೊರಗೆ. ಅಲ್ಲಿ ಸಣ್ಣನೆ ನಗುತಿದ್ದರು ಯಾರೋ. ಮೂಗಿ ಕಲ್ಯಾಣಿಯ ಕಿಕಿವಿಕಿ ಮಾತೂ ಕೇಳಿಸುತಿತ್ತು....

ಮುಂದಿನ ಕೆಲಸವನ್ನು ನೆನೆಸಿಕೊಳ್ಳುತ್ತಾ ಸರಸಮ್ಮ ಕೇಳಿದರು:

"ನೀನು ಹೊರಟ್ಬಂದಿರೋದು ಮಾವಳ್ಳಿ ಮನೆಯವರಿಗೆ ಗೊತ್ತಾ?"

"ಗೊತ್ತು ದೊಡ್ಡಮ್ಮ, ಕಾಗದ ಇಟ್ಟು ಬಂದಿದೀನಿ."

"ಏನು ಬರೆದಿದೀಯಾ ಅದರಲ್ಲಿ?"

ಅದರಲ್ಲಿ ತಾನು ಬರೆದಿದ್ದುದನ್ನು ತುಂಗಮ್ಮ ಸ್ಮರಿಸಿಕೊಂಡಳು.... 'ನನ್ನ ವಿಚಾರವಾಗಿ ಯಾವ ಯೋಚ್ನೇನೂ ಮಾಡ್ಬೇಡಿ....ನಾನೇನೂ ಮಾಡಿಕೊಳ್ಳಲ್ಲ....ಸುರಕ್ಷಿತವಾಗಿರ್ತೀನಿ....ತಂದೆಗೂ ಈ ವಿಷಯ ನಾನೇ ತಿಳಿಸ್ತೀನಿ....ನೀವು ನಿಶ್ಚಿಂತವಾಗಿರಬೇಕು....ಅಕ್ಕ ಪಕ್ಕದವರ ಕುತೂಹಲ ಕೆರಳದಂತೆ ನೋಡಿಕೊಳ್ಳಿ....ನನಗಾಗಿ ಈ ಐದು ತಿಂಗಳು ನೀವು ಪಟ್ಟ ಶ್ರಮ ಅಷ್ಟಿಷ್ಟಲ್ಲ. ಆ ಋಣವನ್ನು ಈ ಜನ್ಮದಲ್ಲಿ ನಾನು ತೀರಿಸುವೆನೋ ಇಲ್ಲವೋ....'

"ಇಷ್ಟೆ ದೊಡ್ಡಮ್ಮಾ, ಇಷ್ಟೇ...."

"ಸರಿ ತುಂಗಾ, ಆದರೆ ಅವರೇನಾದರೂ ನೀನು ನಾಪತ್ತೇಂತ ಪೋಲೀಸರಿಗೆ ದೂರು ಕೊಟ್ಟರೆ, ನಾವೂ ವಿಷಯ ವರದಿ ಮಾಡ್ಬೇಕಾಗುತ್ತೆ."

"ಅಂದರೆ—?"

"ಹೆದರ್ಬೇಡ....ನಿನ್ನನ್ನ ಯಾರೂ ಇಲ್ಲಿಂದ ಎಳಕೊಂಡು ಹೋಗಲ್ಲ. ಆದರೆ ಪೋಲೀಸರಿಗೆ ನೀನು ಇಲ್ಲಿದೀಂತ ತಿಳಿಸ್ಬೇಕು ಅಲ್ವೆ?"

"ಇಲ್ಲ ದೊಡ್ಡಮ್ಮ. ಈ ವಿಷಯ ಬಹಿರಂಗವಾದ್ರೆ ನಮ್ಮ ತಂದೆಗೆ ಕೆಟ್ಟ ಹೆಸರು ಬರತ್ತೆ."

"ಇರಲಿ ಬಿಡು....ನಿನ್ನ ಕಾಗದ ನೋಡಿದ್ಮೇಲೆ, ನಿನ್ನ ತಂದೆಗೆ ತಿಳಿಸ್ದೆ ಅವರು ದೂರುಗೀರು ಕೊಡಲಾರರು...."

"ನನಗೂ ಹಾಗೇ ಅನಿಸುತ್ತೆ ದೊಡ್ಡಮ್ಮ...."

"ನೀನು ಯಾವಯೋಚ್ನೇನೂ ಇಲ್ದೆ ಸುಮ್ನಿರು."

"ಇಲ್ಲಿಗ್ಬಂದ್ಮೇಲೆ ನನಗೆ ಪುನರ್ಜನ್ಮ ಆದ ಹಾಗಾಯ್ತು ದೊಡ್ಡಮ್ಮ."

ಪುನರ್ಜನ್ಮ. ಮುಗ್ಧಹುಡುಗಿಗೇನೂ ತಿಳಿಯದು. ಆಕೆಗೆ ಸುಖ ಪ್ರಸವವಾಯಿತೆಂದರೆ ಅನಂತರದ ಜೀವನವನ್ನು ಪುನರ್ಜನ್ಮವೆಂದು ಕರೆಯುವುದರಲ್ಲಿ ಅರ್ಥವಿತ್ತು. ಸುಖಪ್ರಸವ....

ಸರಸಮ್ಮ, ತುಂಗಮ್ಮನನ್ನು ದಿಟ್ಟಿಸಿ ನೋಡಿದರು.

“ ದಿನ ತುಂಬ್ತೆ ತುಂಗಾ ?”

“ ಇರಬೇಕು ದೊಡ್ಡಮ್ಮ....ಬೇಜಾರು....ಅಂತೂ ಬದುಕಿದೀನಲ್ಲ.”

“ ಹಾಗನ್ಬಾರದು ಮಗೂ. ಈಗ ನಿನ್ನದೊಬ್ಬಳದೇ ಅಲ್ಲ - ಇನ್ನೊಂದು ಜೀವದ ಜವಾಬ್ದಾರಿಯೂ ಇದೆ ನಿನ್ಮೇಲೆ. ನೀನು ನಗುನಗುತ್ತ ಸುಖ ವಾಗಿರ್ಬೇಕು.”

ತುಂಗಮ್ಮ ನೋವಿನ ನಗೆ ನಕ್ಕಳು.

ಸರಸಮ್ಮ ಪುಸ್ತಕ ತೆರೆದು ಬರೆದುಕೊಂಡರು :

ಹೆಸರು - ತುಂಗಮ್ಮ; ವಯಸ್ಸು - ಹದಿನೇಟು, ಹತ್ತೊಂಭತ್ತು ; ದೇಹಸ್ಥಿತಿ-ಆರೋಗ್ಯವಂತೆ, ಗರ್ಭಿಣಿ ; ಕರೆದುಕೊಂಡು ಬಂದವರು-ಸ್ವತಃ ಬಂದಳು ; ಪೂರ್ವ ಇತಿಹಾಸ—

ಸರಸಮ್ಮ ಚುಟುಕಾಗಿ ತುಂಗಮ್ಮನ ಪೂರ್ವ ಇತಿಹಾಸವನ್ನೂ ಬರೆದರು.

ಆ ಪುಟದಲ್ಲಿ ತನ್ನ ಹೆಸರಿನೆದುರು ತುಂಗಮ್ಮ ಇಂಗ್ಲಿಷಿನಲ್ಲಿ ಸಹಿ ಹಾಕಿದಳು.

ಆಕೆಯ ಕಿವಿ - ಕೈಗಳಮೇಲಿದ್ದ ಅಲ್ಪ ಆಭರಣದ ಟಿಪ್ಪಣಿಯೂ ಆಯಿತು.

ಆ ಕ್ರಿಯೆಗಳೆಲ್ಲ ಮುಗಿದ ಮೇಲೆ ಸರಸಮ್ಮ ಹೇಳಿದರು :

“ ಬಚ್ಚಲಿಗೆ ಹೋಗಿ ಮುಖ ತೊಳೆದುಕೊಂಡು ಬಾ ತುಂಗ. ಅತ್ತಿದ್ದು ಸಾಕಿನ್ನು .”

ತುಂಗಮ್ಮ ಬಚ್ಚಲುಮನೆಗೆ ಹೋದಮೇಲೆ ಜಲಜ ಕಣ್ಣು ತೆರೆದಳು.... ಆಕೆಗೆ ಎಚ್ಚರವಾಗಿತ್ತು. ಆ ಮಧ್ಯಾಹ್ನದ ನಿದ್ದೆಯಲ್ಲೂ ಆಕೆಗೊಂದು ಕನಸು ಬಿದ್ದಿತ್ತು. ಆ ಕನಸಿನಲ್ಲಿ, ಸುಂದರಿಯಾಗಿ ಅಲಂಕೃತಳಾಗಿದ್ದ ತುಂಗಮ್ಮನನ್ನೂ ಆಕೆಯ ಎತ್ತರದ ಯುವಕ ಪತಿರಾಯನನ್ನೂ ಜಲಜ ಕಂಡಿದ್ದಳು. ಆಗ ತುಂಗಮ್ಮನಿಗೆ ಬಸಿರು ಇರಲಿಲ್ಲ....

ಆ ಕನಸು ಅರ್ಥವಾಗದೆ, ಇದೆಲ್ಲ ಎಷ್ಟೊಂದು ವಿಚಿತ್ರ ಎನ್ನುತ್ತ, ಜಲಜ ಬೆರಗು ನೋಟದಿಂದ ಬರಿಯ ಛಾವಣಿಯನ್ನೇ ನೋಡುತ್ತ ಮಲಗಿದಳು.

ಆಗ ಆಕೆಗೆ, ಮಾತು ಬಾರದ ಕಲ್ಯಾಣಿ ಮಧ್ಯಾಹ್ನ ಒಂದೆಡೆ ಜಜ್ಜಿ ಹೋಗಿದ್ದ ತಟ್ಟೆಯಲ್ಲಿ ತುಂಗಮ್ಮನಿಗೆ ಊಟ ತಂದುಕೊಟ್ಟುದು ನೆನಪಾಯಿತು. ಜಲಜ ಪಕ್ಕಕ್ಕೆ ಹೊರಳಿ, ದಿಂಬಿಗೆ ಕೆನ್ನೆಯಾನಿಸಿ, ಒಂದು ಅಂಗೈಯನ್ನು ಇನ್ನೊಂದರಿಂದ ಅಪ್ಪಿಕೊಂಡು, ನಕ್ಕಳು.

ಅದೇನೆಂದು ಕೇಳಿದ್ದಳು ತುಂಗಮ್ಮ ಆಗ. ತಾನು ಹೇಳಿರಲಿಲ್ಲ. ಹೇಳುವುದಾದರೂ ಹೇಗೆ? ಅದೂ ತುಂಗಮ್ಮನ ಈಗಿನ ಸ್ಥಿತಿಯಲ್ಲಿ?

ಜಲಜ ಎಚ್ಚರಗೊಂಡುದನ್ನು ಗಮನಿಸಿದರು ಸರಸಮ್ಮ.

"ಎದ್ದಿಯೇನೆ ಜಲಜಾ?"

"ಏನು ದೊಡ್ಡಮ್ಮಾ?"

"ತುಂಗಮ್ಮನ ಬಾಣಂತಿತನಕ್ಕೆ ಏನು ಮಾಡೋಣವೆ?"

ಜಲಜೆ ಎದ್ದು ಕುಳಿತಳು. ಆಕೆಯ ಮುಖ ಗಂಭೀರವಾಯಿತು.

"ಆಸ್ಪತ್ರೆಗೆ ಸೇರಿಸೋಣಾಂತೀಯ?"

"ಅಯ್ಯೊ, ಬೇಡಿ ದೊಡ್ಡಮ್ಮ...ಅಲ್ದೆ ಆಕೆ ಮನೆಯವರು—"

"ಈ ಊರಲ್ಲಿ ಯಾರೂ ಇಲ್ಲ. ಆದರೂ ನೀನು ಹೇಳೋದು ನಿಜ, ಇಲ್ಲೇ ನಮ್ಜತೇಲೆ ಇದ್ರೆ ಆಕೆ ಮನಸ್ಸು ಗಟ್ಟಿಯಾಗಿರುತ್ತೆ."

"ಹೂಂ, ಹೌದು."

"ಯಾರು ಆಕೆ ಆರೈಕೆ ನೋಡೋರು?"

"ಇದೊಳ್ಳೇ ಕೇಳ್ತೀರಲ್ಲ! ನಾನಿಲ್ವೆ ದೊಡ್ಡಮ್ಮ?"

"ಸರಿ, ಆಗಲಮ್ಮ."

ಜಲಜಳಿಗೆ ಸಂತೋಷವಾಯಿತು. ಆ ಸಂತೋಷದಿಂದ ನಗುತಿದ್ದ ಚಿಗರೆ ಕಣ್ಣುಗಳಿಂದಲೇ ಜಲಜ, ಮುಖತೊಳೆದುಕೊಂಡು ಒಳಬಂದ ತುಂಗಮ್ಮನನ್ನು ನೋಡಿದಳು.

"ತುಂಗಕ್ಕಾ! ಎಲ್ಲಿ, ಕೊಡು."

"ಏನು ಕೊಡ್ಲಿ ಜಲಜ?"

"ನಿನ್ನ ಚಾಕರಿಗೆ ದೊಡ್ಡಮ್ಮ ನನ್ನ ನೇಮಿಸಿದಾರೆ. ಸಂಬಳ ಕೊಡು ಈ ತಿಂಗಳಿಂದು - ಅಡ್ವಾನ್ಸ್?"

ತುಂಗಮ್ಮನಿಗೂ ನಗು ಬಂತು.

"ಅಯ್ಯೊ! ನಾನೇನು ಕೊಡ್ಲಿ ಜಡವಳು?"

"ಓ ಹೊ ಹೊ ಹೊ," ಎಂದಳು ಜಲಜ; "ನೋಡಿ ಪ್ರಾ ದೊಡ್ಡಮ್ಮ, ಹ್ಯಾಗೆ ಮೋಸ ಮಾಡ್ಬೇಕೊಂತಿದಾಳೆ! ಅಷ್ಟು ಸುಲಭವಾಗಿ ಈ ಶನಿ ತೊಲಗುತ್ತೆ ಅಂತ ತಿಳಕೊಂಡಳೇನೊ! ಹುಂ....ಈಗ್ಲೇ ಹೇಳಿದೀನಿ ತುಂಗಕ್ಕ. ಕೆಲಸ ಮುಗಿದ್ಮೇಲಾದ್ರೂ ನನ್ಸಂಬಳ—"

"ಅದೆಂಥ ಸಂಬಳ ಬೇಕೊಂತ ಸ್ಪಷ್ಟವಾಗಿ ಹೇಳ್ಬಾರ್ದೇನೆ ಜಲಜ?"

—ಎಂದು ಸರಸಮ್ಮ ಸೂಚಿಸಿದರು. ಅದೇನೆಂದು ಅವರಿಗೂ ಅರ್ಥವಾಗಿರಲಿಲ್ಲ.

ತಾನು ಕೊಡಬೇಕಾಗಿದ್ದ ಉತ್ತರವನ್ನು ಸ್ಮರಿಸಿಕೊಳ್ಳುತ್ತಲೆ ಜಲಜಳ ಮುಖ ಕೆಂಪಗಾಯಿತು. ಆಕೆಯ ಆಟ ನೋಡಿ ಸರಸಮ್ಮನಿಗೂ ಕುತೂಹಲವೆನಿಸಿತು.

"ಅದೇನೆ ಜಲಜ?"

"ತುಂಗಕ್ಕನ ಮಗೂನ ಆಡಿಸೋ ಸಾಕೋ ಜವಾಬ್ದಾರೀನೆಲ್ಲ ನಂಗೇ ವಹಿಸ್ಕೊಡ್ಬೇಕು. ಮಗೂಗೆ ಹೆಸರೂ ನಾನೇ ಇಡ್ಬೇಕು. ಇದೇ ಸಂಬಳ!"

ಸರಸಮ್ಮ ನಕ್ಕು, "ಒಪ್ಪಿಗೆಯೇನೆ ತುಂಗಾ?" ಎಂದು ಕೇಳಿದರು.

ತುಂಗಮ್ಮ 'ಹೂಂ' ಎಂದಳು.

ಸರಸಮ್ಮ ಆಕೆಯನ್ನು ಸಮೀಪಕ್ಕೆ ಕರೆದರು:

"ಇಲ್ಲಿ ಬಾ" ಎಂದು,

ತನಗೆ ಮಾತನಾಡಲು ಅವಕಾಶ ಕೊಡುತ್ತಿಲ್ಲವೆಂದು ಸರಸಮ್ಮನ ಮೇಲೆ ತುಂಗಮ್ಮ ಸಿಟ್ಟಾದಳು.

"ಕತೆ ಓದಿದ್ಯಾಯ್ತಾ?"

—ಎಂದು ಜಲಜ ಕೇಳಿದಳು, ತಾನು ಮಲಗಿದಾಗ ತುಂಗಮ್ಮ ಪುಸ್ತಕವನ್ನೆತ್ತಿಕೊಂಡುದನ್ನು ಜ್ಞಾಪಿಸಿಕೊಳ್ಳುತ್ತಾ.

"ಇಲ್ಲ."

"ತುಂಗ ಕತೆ ಓದ್ಲಿಲ್ಲ, ಹೇಳ್ತಾ ಇದ್ಲು"

—ಎಂದು ಸರಸಮ್ಮ ಹೇಳಿದಾಗ ಮಾತ್ರ ಜಲಜೆಗೆ ಕೆಡುಕೆನಿಸಿತು-

ಅಷ್ಟು ಹೊತ್ತೂ ನಿದ್ದೆ ಹೋಗಿ ಎಂತಹ ಅನ್ಯಾಯವಾಗಿತ್ತು! ಎಚ್ಚರ ವಿದ್ದಿದ್ದರೆ ತಾನೂ ಕಿವಿಗೊಡುತಿದ್ದಳು.... ಇನ್ನು ತುಂಗಕ್ಕನೇ ತನಗೆ ಹೇಳುವ ತನಕ ತಾನು ಕಾದಿರಬೇಕು. ಇಲ್ಲವೆ ದೊಡ್ಡಮ್ಮನನ್ನು ಕೇಳಿ ತಾನು ತಿಳಿಯ ಬೇಕು. ತುಂಗಕ್ಕನ 'ಆತ' ಹೇಗಿರುವನೊ! ಕನಸಿನಲ್ಲಿ ತಾನು ಕಂಡಿದ್ದ ಆ ಮಹಾನುಭಾವ.

"ಎಲ್ಲಾ ಬರಕೊಂಡ್ರಾ ದೊಡ್ಡಮ್ಮ?"

"ಹೂಂ ಹೂಂ.... ಮಾತಿನಮಲ್ಲಿ! ಏಳು ...ಕಣ್ಣು ಹ್ಯಾಗಿದೆ ನೋಡು ಕುಡ್ಡೋರ ಹಾಗೆ! ಮುಖ ತೊಳ್ಕೊಂಡು ಬಾ."

ಜಲಜೆಗೆ ನಗು ಬಂತು. ಕುಡಿದವರ ರೂಪ ಆಕೆಗೆ ಅಪರಿಚಿತ ವಾಗಿರಲಿಲ್ಲ. ಎರಡು ಮೂರು ಸಾರೆ ಪೋಲೀಸರು ನಡುರಾತ್ರಿಯ ಹೊತ್ತು, ಕುಡಿದು ಅನುಲೇರಿ ಮಾತನಾಡುತಿದ್ದ ಒಬ್ಬಿಬ್ಬರು ಹುಡುಗಿಯರನ್ನು ಕರೆತಂದು ಅಭಯಧಾಮದಲ್ಲಿ ಬಿಟ್ಟುದನ್ನು ಜಲಜ ಕಂಡಿದ್ದಳು. ಮರುದಿನ ಆ ಹುಡುಗಿಯರಿಗೆ ಕಾಣದಂತೆ ಜಲಜ, ದೊಡ್ಡಮ್ಮನ ಕೊಠಡಿಗೆ ಬಂದು, ಹತ್ತಾರು ಹುಡುಗಿಯರೆದುರು ತಾನು ಕುಡಿದವಳಂತೆ ನಟಿಸುತ್ತ ನಗೆಯ ಕೋಲಾಹಲವೆಬ್ಬಿಸಿದ್ದಳು.

ಆಗ ತಾವೂ ನಗುತ್ತ, "ಹಾಗೆ ಅಣಕಿಸಬಾರದು" ಎಂದು ಹೇಳುವು ದನ್ನೂ ಸರಸಮ್ಮ ಮರೆತಿದ್ದರು.

ಜಲಜ ಹೊರ ಹೋದೊಡನೆ ಸರಸಮ್ಮ ಹೇಳಿದರು:

"ನಿಮ್ಮ ತಂದೆಗೆ ಕಾಗದ ಬರೀಮ್ಮ. ನಾನೂ ಬರೀತೀನಿ. ಎರಡನ್ನೂ ಜತೇಲೆ ಕಳಿಸೋಣ."

"ಹೂಂ," ಎಂದು ತುಂಗಮ್ಮ ಒಪ್ಪಿದಳು.

"ಇವತ್ತೇನೋ ಅಂಚೆಗೆ ತಡವಾಯ್ತು. ನಾಳೆ ಹೊರಟ್ಹೋಗುತ್ತೆ."

ತುಂಗಮ್ಮ, ಅಭಯಧಾಮದ ಮುದ್ರೆಯಿದ್ದ ಒಂದು ಹಾಳೆಯನ್ನೆತ್ತಿ ಕೊಂಡು ಲೇಖನಿಯನ್ನು ಮಸಿಯಲ್ಲದ್ದಿ ಬರೆಯತೊಡಗಿದಳು. ಮೊದ ಮೊದಲು, ತನ್ನನ್ನೆ ದಿಟ್ಟಿಸುತಿದ್ದ ಉಪಾಧ್ಯಾಯಿನಿಯ ಎದುರು ತಾನು ಪರೀಕ್ಷೆಯ ಪಾಠ ಬರೆಯುತಿದ್ದಂತೆ ಆಕೆಗೆ ಕಸಿವಿಸಿಯಾಯಿತು. ಆದರೆ ಮೆಲ್ಲಮೆಲ್ಲನೆ, ಬರೆಯುತಿದ್ದಂತೆ, ಮನಸಿನಲ್ಲಿದ್ದ ಪದಗಳು ರೂಪು

ಗೊಂಡು ಕಾಗದದಮೇಲೆ ಮೂಡಿದಂತೆ, ಸರಸಮ್ಮ ಮರೆಯಾದರು. ತುಂಗಮ್ಮ ಕಂಡುದೊಬ್ಬರನ್ನೇ - ಚಿಂತೆಯ ಭಾರದಿಂದ ಬಾಗಿದ್ದ ತನ್ನ ತಂದೆ ಯನ್ನು, ಆತನ ಮುಂದೆ ನಿಂತು ತಡೆ ತಡೆಯುತ್ತ ಬಿಕ್ಕಿ ಬಿಕ್ಕಿ ಅಳುತ್ತ, ತನ್ನನ್ನು ಆತ ಆಶೀರ್ವದಿಸಿ ಹೋದ ದಿನದಿಂದ ಈವರೆಗಿನ ಎಲ್ಲ ವಿಷಯ ಗಳನ್ನೂ ತುಂಗಮ್ಮ ಬರೆದಳು. ಹಸ್ತಾಕ್ಷರ ಸುಂದರವಾಗಿರಲಿಲ್ಲ. ಕಂಬನಿ ತೊಟ್ಟಿಕ್ಕಿ, ಕಾಗದ ಒಂದೆರಡು ಕಡೆ ಚಿತ್ತಾಯಿತು.

ತುಂಗಮ್ಮ ಬರೆದು ಮುಗಿಸುವ ಹೊತ್ತಿಗೆ, ಸರಸಮ್ಮನ ಕಾಗದ ಸಿದ್ಧ ವಾಗಿತ್ತು.

"ಇಲ್ಲಿ ಕೊಡು"

—ಎಂದು ಕೇಳಿ, ತುಂಗಮ್ಮ ಬರೆದುದನ್ನು ಅವರು ಇಸಕೊಂಡರು. ಸರಸಮ್ಮ ಅದನ್ನೋದುತಿದ್ದಂತೆ, ಮತ್ತೆ ತಾನು ಉಪಾಧ್ಯಾಯಿನಿಯ ಎದುರೇ ಇರುವಂತೆ ತುಂಗಮ್ಮನಿಗೆ ಭಾಸವಾಯಿತು.

"ಸರಿ"

—ಎಂದು ತಲೆಯಾಡಿಸಿದರು ಸರಸಮ್ಮ. ತುಂಗಮ್ಮನಿಗೆ ಸಮಾಧಾನ ವೆನಿಸಿತು. ಆದರೆ, ಸರಸಮ್ಮನ ಕಣ್ಣುಗಳು ಹನಿಗೂಡಿದುದನ್ನು ಆಕೆ ಕಾಣಲಿಲ್ಲ.

"ದೊಡ್ಡಮ್ಮ! ದೊಡ್ಡಮ್ಮ!"

—ಎಂದು ಅವಸರದ ಧ್ವನಿಯಲ್ಲಿ ಕರೆಯುತ್ತಲೆ ಜಲಜ ಒಳಬಂದಳು.

"ದೊಡ್ಡಮ್ಮ! ಮೊನ್ನೆ ಬಂದ್ಲಲ್ಲ ಆ ತಮಿಳರ ಹುಡುಗಿ, ಆಕೆ ಕೊಬರಿ ಕದ್ಲಂತೆ. ನಿಮಗೆ ಗೊತ್ತಾಗ್ಬಾರದೂಂತ ಅವಳ ಬಾಯಿಗೆ ಬಟ್ಟೆ ತುರುಕಿಸಿ ಅಡುಗೆ ಮನೇಲಿ ಎಲ್ರೂ ಸೇರ್ಕೊಂಡು ಚೆನ್ನಾಗಿ ಥಳಿಸ್ತಿದಾರೆ!"

ತುಂಗಮ್ಮನ ಮೈ ಮುಳ್ಳಾಯಿತು ಅದನ್ನು ಕೇಳಿ.

ಸರಸಮ್ಮ ಎದ್ದು ಅಡುಗೆ ಮನೆಯತ್ತ ಹೋದರು.

"ಅಯ್ಯೋ ಪಾಪ! ಎಷ್ಟು ಏಟು ಬಿತ್ತೊ!"

—ಎಂದು ತುಂಗಮ್ಮ ಕನಿಕರ ಸೂಚಿಸಿದಳು.

"ಪಾಪ? ಒಳ್ಳೇ ಹೇಳ್ದೆ! ಆಕೆ ಮಹಾಕಳ್ಳಿ. ಇವತ್ತು ಕೊಬರಿ ತಿಂದ್ರೆ ನಾಳೆ ನಮ್ಮನ್ನೇ ತಿಂತಾಳೆ! ಚೆನ್ನಾಗಿ ನಾಲ್ಕೇಟು ಬೀಳ್ಲಿಬಿಡು!

ಜಲಜೆಯೇ ಈ ಮಾತನ್ನಾಡಿದಳೆಂಬುದನ್ನು ನಂಬುವುದೇ ಸಾಧ್ಯವಾಗದೆ ತುಂಗಮ್ಮ ಪಿಳಿಪಿಳಿ ಕಣ್ಣು ಬಿಟ್ಟಳು. ಜಲಜ ಆಕೆಯ ಸಮೀಪಕ್ಕೆ ಬಂದಳು.

"ನೀನೂ ಸರಿ ತುಂಗಕ್ಕ! ನನಗಷ್ಟೂ ಗೊತಾಗಲ್ವೆ? ಹಸಿವಾಗಿತ್ತೇನೊ ಅದಕ್ಕೆ. ಏನೂ ಸಿಗಲಿಲ್ಲ. ಕೊಬರಿ ಎತ್ಕೊಂಡ್ಲು. ಹೊಡೆಯೋದು ನಿಲ್ಲ್ಸೋಣ ಅಂತ್ಲೇ ನಾನಲ್ಲಿಗೆ ಹೋದ್ದು. ಆದರೆ ನನ್ನ ಓಡಿಸೇಬಿಟ್ರು!...."

ಜಲಜ ಕೆಟ್ಟವಳಾಗುವುದು ಸಾಧ್ಯವಿರಲಿಲ್ಲ, ಅದು ಮುಟ್ಟಿದರೆ ಮುದುಡುವೆ ಮೃದು ಹೃದಯ....

ತುಂಗಮ್ಮ, ಜಲಜೆಯ ಕೈ ಬೆರಳುಗಳನ್ನು ಮುಟ್ಟಿದಳು. ಅವುಗಳನ್ನೆತ್ತಿಕೊಂಡು ತನ್ನೆದೆಯ ಮೇಲಿರಿಸಿಕೊಂಡಳು.

ತುಂಗಮ್ಮನ ಪ್ರಿಯತಮನ ವಿಚಾರ ಕೇಳಿ, ಗೇಲಿ ಮಾಡುವ ಮಾತೊಂದು ಜಲಜೆಯ ನಾಲಿಗೆಯ ತುದಿವರೆಗೂ ಬಂತು, ಆದರೆ ತುಂಗಮ್ಮನ ಮನಸ್ಸು ನೋಯಬಹುದೆಂದು ತನ್ನ ನಾಲಿಗೆಯನ್ನಾಕೆ ಬಿಗಿ ಹಿಡಿದಳು.

ಅಷ್ಟೇ ಅಲ್ಲ, ಮೂಗಿ ಕಲ್ಯಾಣಿ ತುಂಗಮ್ಮನಿಗೆಂದು ಊಟ ಬಡಿಸಿ ತಂದ ತಟ್ಟೆಯ ನೆನಪೂ ಆಯಿತು.

ಜಲಜ ತುಂಗಮ್ಮನ ಕಣ್ಣುಗಳನ್ನೇ ನೋಡುತ್ತ, "ಅಕ್ಕ - ಅಕ್ಕ" ಎಂದು ಮೂಕಸ್ವರ ಹೊರಡಿಸಿದಳು.

ಸಂಜೆಯಾಯಿತು, ಕತ್ತಲಾಯಿತು. ಮತ್ತೆ ಸಾಮೂಹಿಕ ಪ್ರಾರ್ಥನೆ. ಆ ಬಳಿಕ ಊಟ.

ಜ್ವರದ ಮುಖವನ್ನೇ ಕಂಡರಿಯದಷ್ಟು ಚುರುಕಾದಳು ಜಲಜ, ತುಂಗಮ್ಮನ ಮತ್ತು ತನ್ನ ಹಾಸಿಗೆಗಳನ್ನು ಹಾಸುತ್ತಾ ಆಕೆ ಹೇಳಿದಳು:

"ನಾಳೆ ನಮ್ಮನ್ನ ವರ್ಗಾಯಿಸ್ತಾರೆ."

ಎಲ್ಲಿಗೆ - ಎಂದು ಕೇಳ ಬೇಕೆಂದಿದ್ದ ತುಂಗಮ್ಮ, ಉತ್ತರ ಹೊಳೆದು ಸುಮ್ಮನಾದಳು.

ಜಲಜ ಹಾಸಿಗೆಯ ಮೇಲೆ ಅಡ್ಡಾದಳು.

"ನಾಳೆ ಲಲಿತಾ ಪರಿಚಯ ಮಾಡ್ಕೊಡ್ತೀನಿ ತುಂಗಕ್ಕ. ಆಕೆ ನನ್ನ

ಸ್ನೇಹಿತೆ. ಹೊಸಬರು ಅಂದರೆ ಸಂಕೋಚ. ಅದಕ್ಕೇ ಇವತ್ತು ಇಲ್ಲಿಗ್ಬಂದಿಲ್ಲ"

ತುಂಗಮ್ಮ, ಹೂಂ ಎನ್ನುತ್ತ ದಿಂಬಿನ ಮೇಲೆ ತಲೆ ಇರಿಸಿದಳು.

ಜಲಜೆಯ ದೃಷ್ಟಿ ತಾರಸಿ-ಛಾವಣಿಯಲ್ಲಿ ಸುತ್ತಾಡುತ್ತಾ ಒಂದು ಕಡೆ ನೆಟ್ಟಿತು. ತುಂಗಮ್ಮನ ದೃಷ್ಟಿಯೂ ಹಾಗೆಯೇ ಸುತ್ತಾಡುತ್ತಾ ಅದೇ ಜಾಗದಲ್ಲಿ ತಂಗಿತು.

ಜಲಜ ನಸುನಕ್ಕು ಹೇಳಿದಳು:

"ತುಂಗಕ್ಕ, ಈ ರೂಮು ಬಾಡಿಗೆಗೂ ಕೊಟ್ಟಿದೀವಿ ಗೊತ್ತಾ?"

"ಗೊತ್ತು, ಗೊತ್ತು."

ಜಲಜೆಗೆ ಆಶ್ಚರ್ಯವೆನಿಸಿತು.

"ಏನು? ಎಲ್ಲಿ? ಹ್ಯಾಗೆ?"

ತುಂಗಮ್ಮ ನಗುತ್ತ ಜಲಜೆಯ ಮುಖವನ್ನೊಮ್ಮೆ ನೋಡಿದಳು, ಆ ಬಳಿಕ ಛಾವಣಿಯ ಆ ಜಾಗವನ್ನು ನೋಡಿದಳು.

ಜಲಜೆಗೆ ಸಂತೋಷ-ನಿರಾಸೆಗಳೆರಡೂ ಏಕಕಾಲದಲ್ಲೆ ಆದುವು.

"ಓ! ನಿನಗೊಂದು ತಮಾಷಿ ತೋರಿಸ್ಬೇಕೂಂತ ನಾನಿದ್ರೆ—"

ಹೆಣ್ಣು ಗುಬ್ಬಚ್ಚಿ, ಉಣ್ಣೆಯ ಚೆಂಡಿನ ಹಾಗೆ ಮೈಯುಬ್ಬಿಸಿ ಕೊಂಡು, ಮರಕ್ಕೆ ಹೊಡೆದಿದ್ದ ಮೊಳೆಯ ಮೇಲೆ ಕುಳಿತಿತ್ತು.

## ೭

ಸರಸಮ್ಮನ ಆಫೀಸು ಕೊಠಡಿಯ ಪಕ್ಕದ ಕೋಣೆ ಸಾಮಾನ್ಯವಾಗಿ ಖಾಲಿಯಾಗಿಯೆ ಇರುತಿತ್ತು. ಅಲ್ಲಿ ಯಾರೂ ವಾಸಿಸುತ್ತಿರಲಿಲ್ಲ. ಆದರೆ ನೇಯ್ದ ಚಾಪೆ-ಬಟ್ಟೆಗಳನ್ನು, ಹುರಿಹಾಕಿದ ಹಗ್ಗಗಳನ್ನು, ಸಂಗೀತ ತರಗತಿಯ ಒಂದು ಹಾರ್ಮೋನಿಯಂ ಪೆಟ್ಟಿಗೆ ಮತ್ತು ತಂಬೂರಿಯನ್ನು ಅಲ್ಲಿಡುತಿದ್ದರು. ಸಾಕಷ್ಟು ವಿಶಾಲವಾಗಿಯೆ ಇತ್ತು ಜಾಗ. ಆಫೀಸು ಕೊಠಡಿಯಲ್ಲಿ ಇದ್ದಂತೆ ಇಲ್ಲಿಯೂ ಅಂಥದೇ ಒಂದು ಕಿಟಕಿಯಿತ್ತು. ಆ ಕಿಟಕಿಯಾಚೆ ಬಲಕ್ಕೆ ಕಾಣಿಸುತಿದ್ದುದು ವಿಸ್ತಾರವಾದ ಬಯಲು, ಜವುಗು ಪ್ರದೇಶ.

ಕಿಟಕಿಯಬಳಿ ನಿಂತು ತುಂಗಮ್ಮ ನಿರ್ವಿಕಾರ ಚಿತ್ತಳಾಗಿ ದೂರ ಬಲುದೂರಕ್ಕೆ ದೃಷ್ಟಿಹರಿಸಿದಾಗ ಜಲಜ ಕೇಳಿದಳು:

"ಜಾಗ ನೋಡೋಕೆ ಚೆನ್ನಾಗಿದೆ ಅಲ್ವಾ?"

"ಹೂಂ ಜಲಜ."

"ಆದರೆ ಜವುಗು. ಈಗೇನೋ ಪರ್‍ವಾಗಿಲ್ಲ. ಮಳೆ ಬಂದಾಗ ನೋಡ್ಬೇಕು. ದೊಡ್ಡ ಸಮುದ್ರವೇ!"

ತುಂಗಮ್ಮನಂತೆಯೇ ಜಲಜೆಯೂ ಸಮುದ್ರವನ್ನೆಂದೂ ನೋಡಿರಲಿಲ್ಲ. ಆದರೂ ಅದೊಂದು ವಿಶಾಲವಾದ ಜಲಾಶಯವೆಂದು ಆಕೆ ಕಲ್ಪಿಸಿ ಕೊಂಡಿದ್ದಳು.

ಆಕೆಯೆಂದಳು:

"ಒಮ್ಮೆ ಏನಾಯ್ತೂಂತ!"

"ಹುಂ?"

"ಹೋದವರ್ಷ ಒಂದು ರಾತ್ರೆ ಪೋಲೀಸ್ನೋರು ಒಬ್ಬ ಹುಡುಗೀನ ಕರಕೊಂಡು ಬಂದ್ರು. ನಡುರಾತ್ರೀಲಿ ಆಕೆ ಬೀದಿ ಅಲೀತಿದ್ಲಂತೆ.

ಕಸಬಿನವಳು. ನೋಡೋಕೆ ಹ್ಯಾಗಿದ್ಲೂಂತ! ಮುಖ ಎಲ್ಲ ಊದ್ಕೊಂಡು. ಅಬ್ಬ! ಬಣ್ಣ ಮಾತ್ರ ಬಿಳಿ."

"ಏನಾಯ್ತು ಅವಳಿಗೆ?"

"ಅದೇ....ರಾತ್ರಿ ಬಂದೋಳು ಸರ್ಕಸ್ ಹುಲಿ ಹಾಗೆ ಗುರುಗುಟ್ಟಿ ಕೊಂಡೇ ಇದ್ಲು. ಹಗಲೊತ್ತು ಮಾತಾಡ್ಸೋಕೆ ಹೋದ್ರೆ ಮೈಮೇಲೆ ಬೀಳ್ತಿದ್ಲು. ಅವಳ ತಂಟೆಗೆ ಹೋಗ್ಬೇಡಿ - ಅಂದ್ರು ದೊಡ್ಡಮ್ಮ. ನಾವೂ ಸುಮ್ನಿದ್ವಿ. ಆದರೆ ರಾತ್ರೆ ಬಜಾರಿ ಕಕ್ಕಸು ಬಾಗಿಲು ಹತ್ತಿ ಗೋಡೆ ಏರಿ ಕೆಳಗೆ ಹಾರಿ ತಪ್ಪಿಸ್ಕೊಂಡ್ಲು. ಯಾರಿಗೂ ಎಚ್ಚರವೇ ಆಗ್ಲಿಲ್ಲ. ತಪ್ಪಿಸ್ಕೊಂಡೋಳು, ನೋಡಿ ಕಾಣ್ತಿದೆಯೆಲ್ಲ, ಆ ಹಾದೀಲೆ ಓಡಿದ್ಲು, ಮಳೆ ನಿಂತು ಒಂದುವಾರ ಆಗಿತ್ತಷ್ಟೆ. ಆ ಹೊಂಡದಲ್ಲಿ ನೀರಿತ್ತು. ಓಡ್ತಾ ಹಾದಿ ಕಾಣಿಸ್ದೆ ಬಿದ್ಲು. ಆಗ, ಅಯ್ಯಯ್ಯೋ ಸತ್ತೆ ಅಂತ ಕಿರಿಚ್ಕೊಂಡ್ಲಂತೆ. ರಾತ್ರೆಹೊತ್ನಲ್ಲಿ ಅದೇನು ಕಿವೀಂತ ನಮ್ಮ ದೊಡ್ಡಮ್ಮನ್ದು! ಅವರಿಗೆ ಎಚ್ಚರ ವಾಯ್ತು. ಲಾಟೀನು ಹಚ್ಚಿ ನಾವೆಲ್ಲಾ ಮಲಗಿದ್ದ ಜಾಗ ನೋಡ್ಕೊಂಡು ಬಂದ್ರು. ರಾತ್ರೆ ಅವಳೊಬ್ಬಳೇ ಮೂಲೇಲಿ ಮಲಗಿದ್ಲು. ಆಜಾಗವೋ ಖಾಲಿ. ನಡೆದಿದ್ದು ಏನೂಂತ ತಿಳಿದ್ಹೋಯ್ತು ದೊಡ್ಡಮ್ನಿಗೆ. ನಾನು ಮತ್ತೆ ಲಲಿತಾ ಇಬ್ಬರ್ನೂ ಕರಕೊಂಡು, ಮನೆಗೆ - ಇದಕ್ಕೆ - ಹೊರಗಿಂದ ಬೀಗ ಹಾಕಿ ದೊಡ್ಡಮ್ಮ ಹೊರಟ್ರು. ಅಲ್ಲೊಂದು ಮನೆ ಇದೆ ನೋಡಿ. ಅವರನ್ನೂ ಎಬ್ಬಿಸಿದ್ವಿ, ಒಳ್ಳೆಯವರು ಪಾಪ...."

ಮೊದಲು ಅಭಯಧಾಮವನ್ನು ಶಾಲೆಗೆ ಹೋಲಿಸಿದ್ದಳು ತುಂಗಮ್ಮ. ಈಗ ಆ ಶಾಲೆ ಸೆರೆಮನೆಯಾಯಿತು. ಸೆರೆಮನೆ ಒಮ್ಮೆಲೆ, ತುಂಟ ಮಕ್ಕಳೊಡನೆ ವಾಸಿಸುತಿದ್ದ ಪ್ರೀತಿಯ ತಾಯಿಯ ಬಡಮನೆಯಾಯಿತು.... ಚಿತ್ರವಿಚಿತ್ರವಾಗಿ ಕೇಳಿಸಿತು ಜಲಜ ಹೇಳುತಿದ್ದ ಕಥೆ....

"ಯಾಕಕ್ಕ ಹೂಂ ಅನ್ನೋಲ್ಲ. ಕೇಳ್ತಾ ಇದ್ದೀಯೋ ಇಲ್ವೊ?"

"ಕೇಳ್ತಿದೀನಿ, ಹೇಳೆ."

"ಹೊಂಡವೇನೂ ಆಳವಾಗಿರ್ಲಿಲ್ಲಾಂತಿಟ್ಕೊ. ಬಜಾರಿ ಜಾರಿಕೊಂಡ್ಬಿಟ್ಟಿದ್ಲು ಅಷ್ಟೆ. ಮೈಯೆಲ್ಲಾ ಆ ಕೆಸರು ಗಲೀಜು.....ಥೂ.....ತೆಪ್ಪಗೆ ನಮ್ಜತೇಲೇ ಬಂದ್ಲು. ಒಂದು ಕೈನ ಲಲಿತಾ ಬಿಗಿಯಾಗಿ ಹಿಡಕೊಂಡ್ಲು.

ಅವಳ ಬಿಗಿ ಮುಷ್ಟಿಯಿಂದ ತಪ್ಪಿಸ್ಕೊಳ್ಳೋರೇ ಇಲ್ಲ. ಅವಳ ತೋಳು ಹ್ಯಾಗಿದೆ ಅಂತೀರಿ!"

"ಈಗೆಲ್ಲಿ ಆ ಹುಡುಗಿ? ಇಲ್ಲೇ ಇದಾಳೇನು?"

ಉತ್ತರ ಹೇಳುವ ಉತ್ಸಾಹವೇ ಜಲಜೆಗಿರಲಿಲ್ಲ. ಆದರೂ ಅಂದಳು:

"ಕೆಟ್ಟ ರೋಗ ಇತ್ತಂತೆ ಅವಳಿಗೆ. ಚಿಕಿತ್ಸೆಗೇಂತ ಒಂದ್ಸಲಿ ದೊಡ್ಡಮ್ಮ ಆಕೇನ ಆಸ್ಪತ್ರೆಗೆ ಕರಕೊಂಡು ಹೋದ್ರು. ಅಲ್ಲೆ ಬಜಾರಿ ತಪ್ಪಿಸ್ಕೊಂಡು ಓಡೋದ್ಲು."

ಎಲ್ಲಿಗೆ ಓಡಿಹೋದಳೆಂದು ಕೇಳಬೇಕಾದ್ದಿರಲಿಲ್ಲ. ತುಂಗಮ್ಮನಿಗೆ ಅರ್ಥವಾಗುತಿತ್ತು.

"ಹೋಗಲಿ ಆ ವಿಷಯ," ಎಂದಳು ಜಲಜ.

ಮುಂದೆ ಮಾತನಾಡಲು ಇನ್ನೊಂದು ವಿಷಯ ಸಿದ್ಧವಾಗಿತ್ತು. ಅದು ಆರುತಿಂಗಳ ಹಿಂದೆ ಆ ಕೊಠಡಿಯಲ್ಲಿ ಬಾಣಂತಿಯಾಗಿದ್ದ ಒಬ್ಬಾಕೆಗೆ ಸಂಬಂಧಿಸಿದ್ದು. ಆಕೆ ಬಾಣಂತಿಯಾದ ಒಂದು ತಿಂಗಳಲ್ಲೆ ಯಾವನೋ ಒಬ್ಬಬಂದು, ತಾಯಿ ಮತ್ತು ಮಗುವನ್ನು ತನ್ನಜತೆ ಕಳುಹಿಸಿಕೊಡ ಬೇಕೆಂದು ಕೇಳಿದ್ದ. ಆಕೆಯೂ "ಕಳಿಸ್ಕೊಡಿ ಅಮ್ಮಾವರೇ, ಓಗ್ತೀನಿ" ಎಂದಿದ್ದಳು. ದೊಡ್ಡಮ್ಮ ವಿರೋಧಿಸಿರಲಿಲ್ಲ.

ಆದರೆ ಆ ವಿಷಯವನ್ನು ತುಂಗಮ್ಮನಿಗೆ ಹೇಳಬಹುದೆ-ಬಾರದೆ, ಎಂದು ಕ್ಷಣಕಾಲ ಜಲಜ ಚಿಂತಿಸಿದಳು.

ದೊಡ್ಡಮ್ಮ ಆ ಬೆಳಿಗ್ಗೆ ಆಕೆಯೊಬ್ಬಳನ್ನೆ ಕರೆದು ಹೇಳಿದ್ದರಲ್ಲವೆ?

"ತುಂಗನ್ನ ಹುಷಾರಾಗಿ ನೋಡ್ಕೊ ಮಗೂ, ಒಳ್ಳೇ ಹುಡುಗಿ. ಆಕೆ ಮನಸ್ಸು ನೋಯಿಸುವಂಥಾದ್ದು ಏನೂ ಹೇಳ್ಬೇಡ."

ಬಾಣಂತಿತನದ, ಮಗುವಿನ ತಂದೆಯ, ಮಾತನ್ನೆತ್ತಿದರೆ ತುಂಗಮ್ಮ ನೊಂದುಕೊಳ್ಳಬಹುದೆಂಬ ತೀರ್ಮಾನಕ್ಕೆ ಬಂದು ಆ ವಿಷಯವನ್ನೆ ಜಲಜ ಬಿಟ್ಟುಕೊಟ್ಟಳು.

ಆಕೆ ಹೊರಹೋಗಿ ಬಿಸಿಲಲ್ಲಿ ಒಣಗುಹಾಕಿದ್ದ ತೆಳ್ಳಗಿನ ಹಾಸಿಗೆ ಯನ್ನು ಎತ್ತಿತಂದು, ಚಾಪೆಯಮೇಲೆ ಅದನ್ನು ಹಾಸಿದಳು. ಅದು ಹಿಂದಿನ ರಾತ್ರೆ ಆಕೆ ಮಲಗಿದ್ದ ಹಾಸಿಗೆ. ದೊಡ್ಡಮ್ಮನ ಕೊಠಡಿಗೆ ಹೋಗಿ ಮಡಿ

ಮಾಡಿರಿಸಿದ್ದ ಬಿಳಿಯ ಮೇಲು ಹೊದಿಕೆಯನ್ನು ತಂದು ಹಾಸಿಗೆಯ ಮೇಲೆ ಬಿಡಿಸಿದಳು.

"ಅಕ್ಕಾ, ಇವತ್ನಿಂದ ಇದು ನಿನ್ನಹಾಸಿಗೆ."

ಜಲಜ ಮಾಡುತಿದ್ದುದನ್ನೆಲ್ಲ ಮೌನವಾಗಿ ನೋಡುತಿದ್ದಳು ತುಂಗಮ್ಮ.

"ನಿನಗೆ?"

"ನನಗೆ ಚಾಪೆಯಿದೆ. ಅದರ ಮೇಲೆ ನನ್ನ ಹಳೇ ಎರಡು ಸೀರೆ ಮಡಚಿ ಹಾಸ್ಕೋತೀನಿ - ಎಲ್ಲರಹಾಗೆ."

ತುಂಗಮ್ಮನಿಗೆ ಅರ್ಥವಾಗಲಿಲ್ಲ.

"ಈ ಅಕ್ಕನಿಗೆ ಏನೂ ತಿಳಿಯೋಲ್ಲ," ಎಂದು ಜಲಜ ನಕ್ಕಳು. "ನಾವು ಯಾರೂ ಹಾಸಿಗೆ ಮೇಲೆ ಮಲಗೋಲ್ಲ ಅಕ್ಕ. ಜ್ವರ ಬಂದವರಿಗೆ ಮತ್ತು ಬಾಣಂತಿಯಾಗೋರಿಗೆ ಮಾತ್ರ ಹಾಸಿಗೆ."

ತಾನು ಗರ್ಭಿಣಿಯೆಂದು ತನಗೆ ದೊರೆಯುತಿದ್ದ ವಿಶೇಷ ಸಹಾನುಭೂತಿಯನ್ನೂ ಸೌಕರ್ಯವನ್ನೂ ಕಂಡು ತುಂಗಮ್ಮನಿಗೆ ಸಂಕೋಚವೆನಿಸಿತು.

....ಅಧ್ಯಾಪಿಕೆ ರಾಜಮ್ಮ ಬಂದೊಡನೆ ಜಲಜ ಪೆನ್ಸಿಲು - ಪುಸ್ತಕ ಎತ್ತಿಕೊಂಡು ತರಗತಿಗೆ ಹೋದಳು.

ತುಂಗಮ್ಮ, ದೊಡ್ಡಮ್ಮನ ಕೊಠಡಿಯಿಂದೊಂದು ಕತೆ ಪುಸ್ತಕ ತಂದು ಓದುತ್ತ ಕುಳಿತಳು.

....ತುಂಗಮ್ಮನನ್ನು ಬೆರಗುಗೊಳಿಸಿದ ಇನ್ನೊಂದು ವಿಷಯ ಆ ಮಧ್ಯಾಹ್ನ ಊಟದ ಹೊತ್ತಿಗೆ ನಡೆಯಿತು.

ಪ್ರತಿಯೊಬ್ಬರೂ ತಮ್ಮ ತಮ್ಮ ತಟ್ಟೆಯನ್ನೆತ್ತಿಕೊಂಡುಬಂದು ಸಾಲಾಗಿ ಕುಳಿತರು. ಜಲಜ, ತನ್ನ ಮತ್ತು ತುಂಗಮ್ಮನ ತಟ್ಟೆಗಳನ್ನು ತೊಳೆದು ತಂದಳು. ತುಂಗಮ್ಮನಿಗೆ ಕಾಣಿಸದಂತೆ ನಸುನಕ್ಕು, ಸ್ವಲ್ಪ ನಜ್ಜಿಹೋಗಿದ್ದ ತಟ್ಟೆಯನ್ನೇ ಆಕೆಯ ಮುಂದಿಟ್ಟಳು.

ಈ ಹೊತ್ತು ಮೂಗಿ ಕಲ್ಯಾಣಿ ಕುಳಿತವರಲ್ಲಿ ಒಬ್ಬಾಕೆ ಮಾತ್ರ. ಈ ದಿನದಿಂದ ಅಡುಗೆಯ ಭಾರ ಹೊತ್ತವರ ಮುಖ್ಯಸ್ಥೆ ಲಲಿತಾ. ಆಕೆ ಸೆರಗನ್ನು

ಸೊಂಟಕ್ಕೆ ಬಿಗಿದು, ಕೈಲಿ ಸೌಟು ಹಿಡಿದು, ಸೇನಾನಿಯ ಹಾಗೆ ನಡೆದು ಬಂದಳು. ಆದರೆ ಈ ದಿನ ಯಾರೂ ಆವಳನ್ನು ಅಷ್ಟಾಗಿ ಗಮನಿಸಲಿಲ್ಲ. ಎಲ್ಲರ ದೃಷ್ಟಿಯೂ ತುಂಗಮ್ಮನ ಮೇಲೆಯೇ ನೆಟ್ಟಿತ್ತು.

ಪಿಸುಧ್ವನಿಯಲ್ಲಿ ಜಲಜ ಎಂದಳು :

"ಈ ದಿನ ಪಾಯಸ ಮಾಡಿದಾರೆ ಅಕ್ಕ."

"ಪಾಯಸ ? ಯಾಕೆ, ಯಾವಹಬ್ಬ ಇವತ್ತು ?"

"ಇದೊಂದು ವಿಶೇಷ ಹಬ್ಬ ! ಅಭಯಧಾಮದಲ್ಲೇ ಇದನ್ನ ನಾವು ಆಚರಿಸೋದು."

"ಹಾಗಾ ?"

"ಹೂಂ. ಹಾಗೇ," ಎಂದು ಜಲಜ ಅಣಕಿಸಿದಳು. ನಿನ್ನಿಂದಾಗಿ ನಮ್ಮೆಲ್ಲರ ಬಾಯಿ ಸಿಹಿಯಾಗುತ್ತೆ ಇವತ್ತು. ಅದಕ್ಕೇ ಇವರೆಲ್ಲ ಈರೀತಿ ನಿನ್ನನ್ನ ನೋಡ್ತಿದಾರೆ."

"ನನ್ನಿಂದಾಗಿ ?"

"ಹೂಂ ಅಕ್ಕ. ಹೊಸಬರು ಬಂದಾಗಲೆಲ್ಲಾ ಇದೊಂದು ಪದ್ಧತಿ. ಬಂದಾಕೆ ನಮ್ಮ ಪಂಗ್ತೀಲಿ ಕೂತ್ಕೊಂಡದಿನ ದೊಡ್ಡಮ್ಮ ಪಾಯಸ ಮಾಡಿಸ್ತಾರೆ. ಅದರ ಜತೇಲೆ ಲೆಕ್ಚರ್ ಕೊಡ್ತಾರೆ. ಅಗೋ ! ಬಂದ್ರು !"

ಸರಸಮ್ಮ ಮುಗುಳು ನಗುತ್ತಾ ಹುಡುಗಿಯರು ಊಟಕ್ಕೆ ಕುಳಿತಿದ್ದ ಹಜಾರಕ್ಕೆ ನಡೆದು ಬಂದರು.

ಹಬ್ಬದ ಊಟ ! ಪಲ್ಯ - ಕೋಸಂಬರಿ ಯಾವುದು ಇಲ್ಲಿಲ್ಲ. ಮೊದಲ ಬಾರಿಗೇ ತಟ್ಟೆಗಳೊಳಕ್ಕೆ ಎರಡೆರಡು ಸೌಟು ಗೋಧಿ ಪಾಯಸ ಸುರಿಯಿತು.

ಹುಡುಗಿಯರು ತಟ್ಟೆಯನ್ನೂ ನೋಡುತಿದ್ದರು ! ದೊಡ್ಡಮ್ಮನ ಮುಖವನ್ನೂ ನೋಡುತಿದ್ದರು. ದೊಡ್ಡಮ್ಮ ಬಲುನಿಧಾನ - ಎಂದು ಗೊಣಗಿ ದವರೆಷ್ಟೊ !

ಜಲಜೆ ಅಂದಳು :

"ಇನ್ನೂ ಶುರುಮಾಡ್ತಾರೆ ದೊಡ್ಡಮ್ಮ - ಹುಡುಗೀರಾ, ಇವತ್ತು ನಮಗೆಲ್ಲಾ ಬಹಳ ಸಂತೋಷದ ದಿವಸ...."

ಜಲಜ ಸರಿಯಾಗಿಯೇ ಹೇಳಿದಳು. ಹಾಗೆಯೇ ಆರಂಭಿಸಿದರು ಸರಸಮ್ಮ.

"ಹುಡುಗೀರಾ, ಇವತ್ತು ನಮಗೆಲ್ಲಾ ಬಹಳ ಸಂತೋಷದ ದಿವಸ...."

ಗಂಭೀರವಾದ ಕಂಠದಿಂದ ಏಕ ಪ್ರಕಾರವಾಗಿ ಆ ಸ್ವರ ಹೊರಡುತಿತ್ತು.

"ನಮ್ಮ ಮಧ್ಯೆ ಈದಿನ ಇನ್ನೊಬ್ಬ ಸೋದರಿ ಬಂದಿದ್ದಾಳೆ. ಅವಳ ಹೆಸರು ತುಂಗಮ್ಮ. ನೀವೆಲ್ಲಾ ಈಗಾಗಲೇ ಅವಳನ್ನು ನೋಡಿದ್ದೀರಿ. ಅಭಯ ಯಾಚಿಸಿ ಬಂದಿರುವ ಆಕೆಯನ್ನು ನಾವು ಪ್ರೀತಿಯಿಂದ ಸ್ವಾಗತಿಸೋಣ. ಆಕೆಗೂ ನಮಗೂ ಒಟ್ಟಾಗಿಯೇ ದಯಾಮಯನಾದ ಭಗವಂತನು ಮಂಗಳವನ್ನುಂಟು ಮಾಡಲೆಂದು ಪ್ರಾರ್ಥಿಸೋಣ."

ಜಲಜ ಮೌನವಾಗಿದ್ದಳು. ತುಂಗಮ್ಮನಿಗೆ ಆ ಭಾಷಣ ಕೇಳಿ ದುಃಖ ಒತ್ತರಿಸಿ ಬಂತು. ಎಲ್ಲರೂ ಕೈ ಜೋಡಿಸಿ, ಎವೆಮುಚ್ಚಿ ತೆರೆಯುವುದರೊಳಗಾಗಿ ತಮ್ಮ ಪ್ರಾರ್ಥನೆಯನ್ನು ಮುಗಿಸಿದರು. ತಬ್ಬಿಬ್ಬಾದ ತುಂಗಮ್ಮ ಮಾತ್ರ ಸುಮ್ಮನಿದ್ದಳು. ಆ ಪ್ರಾರ್ಥನೆ ಎಂದೋ ಮುಗಿದು ಹೋದ ಅಂಶವೆಂಬಂತೆ, ಪ್ರತಿಯೊಬ್ಬರೂ ಪಾಯಸದರುಚಿ ನೋಡ ತೊಡಗಿದರು.

ಸರಸಮ್ಮ ಸಣ್ಣ ತಟ್ಟೆಯಲ್ಲಿ ತಾನೂ ಒಂದಿಷ್ಟು ತರಿಸಿಕೊಂಡು, ತುಂಗಮ್ಮನತ್ತ ನೋಡಿ ಮುಗುಳ್ನಕ್ಕು, ಒಂದೊಂದೇ ಚಮಚ ಪಾಯಸವನ್ನೆತ್ತಿ ತಮ್ಮ ಬಾಯಿಗಿಟ್ಟು ಕೊಂಡರು.

ಉಣ್ಣುತಿದ್ದವರ ಗುಜುಗುಜು ಸದ್ದು ಆರಂಭವಾದಾಗ ಜಲಜ ಮಾತನಾಡಿದಳು.

"ಈ ಭಾಷಣ ನಾನು ಕೇಳ್ತಿರೋದು ಎಪ್ಪತ್ತಾರನೆಯ ಸಲ ಅಕ್ಕ."

"ನಿಜವಾಗ್ಲೂ ?"

"ಹೂಂ."

"ಹೆಸರುಮಾತ್ರ ಬದಲಾಯಿಸ್ತಾರೆ ಪ್ರತಿಸಲಾನೂ. ಈ ನಾಲ್ಕು ವರ್ಷದಲ್ಲಿ ಒಟ್ಟು ಎಪ್ಪತ್ತಾರು ಜನಬಂದ ಹಾಗಾಯ್ತು. ಈಗ ಉಳಿದಿರೋರು ನಿನ್ನನ್ನೂ ಸೇರಿಸಿ ಮೂವತ್ತೊಂದು ಜನ."

ಅನ್ನ - ಸಾರು ತುಂಗಮ್ಮನಿಗೆ ರುಚಿಸಲಿಲ್ಲ. ಏನೂ ಬೇಡವೆಂದಿತು ಮನಸ್ಸು.

ಸರಸಮ್ಮನ ಗಮನಕ್ಕೆ ಅದು ಬರದೇ ಹೋಗಲಿಲ್ಲ. ಆ ಮೊದಲ ಪಂಕ್ತಿಯೂಟದಲ್ಲಿ ಹಲವರು ಹೊಸಬರಿಗಾಗುವ ಮನಸ್ಸಿನ ಸಂಕಟವೂ ಆಕೆಗೆ ಪರಿಚಿತವಾಗಿತ್ತು. ಅವರು ತುಂಗಮ್ಮನ ಸಮೀಪಕ್ಕೆ ಬಂದರು.

"ಯಾಕೆ ತುಂಗಾ ? ಅನ್ನ ಸೇರಲ್ವೆ ?"

"ಸೇರುತ್ತೆ ದೊಡ್ಡಮ್ಮ. ಹಸಿವಿಲ್ಲ, ಅದಕ್ಕೆ—"

"ನೀರು ಮಜ್ಜಿಗೆ ಬರತ್ತೆ. ಇನ್ನೊಂದು ತುತ್ತು ತಗೋ."

"ಹೂಂ...."

ಪದ್ದಕ್ಕನ ಮದುವೆಯೂಟ....ಆಗ ನೂರಾರು ಜನ ನೆರೆದಿದ್ದರು. ಅವರೆಲ್ಲ ಸದ್ಗೃಹಸ್ಥ ಸದ್ಗೃಹಿಣಿಯರು. ನಗೆಮಾತಿನ ಗದ್ದಲದಲ್ಲಿ ಆ ಊಟ ಮುಗಿದು ಹೋಗಿತ್ತು. ಆಗಲೂ, ನೆರೆದಿದ್ದವರ ದೃಷ್ಟಿಯಲ್ಲಿ ಪದ್ದಕ್ಕ, ತಾನು ಮತ್ತು ತಮ್ಮ, ತಾಯಿಯಿಲ್ಲದ ತಬ್ಬಲಿಗಳು. ತಂದೆ ಬಡವರು ನಿಜ. ಆದರೂ, ಮೊದಲ ಮಗಳ ಮದುವೆಯೆಂದು ಶಕ್ತಿ ಮೀರಿಯೆ ವೆಚ್ಚಮಾಡಿದ್ದರು. ಊಟದಲ್ಲಿ ಯಾವುದಕ್ಕೂ ಕೊರತೆಯಾಗಿರಲಿಲ್ಲ.

ಅದಾಗಿ ಮೂರು ವರ್ಷಗಳ ಮೇಲೆ ತನ್ನಮದುವೆಯ ಚಿತ್ರವೂ ಅಸ್ಪಷ್ಟವಾಗಿ ತೋರಿಸಿಕೊಂಡಿತ್ತು. ಪದ್ದಕ್ಕನ ಮದುವೆಯಷ್ಟು ವಿಜೃಂಭಣೆ ಯಿಂದ ತನ್ನದು ನೆರವೇರುವುದು ಸಾಧ್ಯವಿರಲಿಲ್ಲ. ಆದರೂ, ಬೇರೆ ಹೆಣ್ಣು ಮಕ್ಕಳಿಲ್ಲವೆಂಬ ಕಾರಣದಿಂದ, ತಂದೆ ಸಾಲವೆತ್ತಿಯಾದರೂ, ಆದಷ್ಟು ಹೆಚ್ಚು ಖರ್ಚು ಮಾಡಿಯೇ ಮಾಡುತಿದ್ದರು...ನಾರಾಯಣಮೂರ್ತಿಗೆ ತನ್ನೆಲ್ಲ ವನ್ನೂ ತಾನು ಅರ್ಪಿಸಿದಮೇಲೆ, ಮದುವೆಯ ಮಂಟಪದ ಸಂಭ್ರಮ ವನ್ನೆಲ್ಲ ತುಂಗಮ್ಮ ಕಲ್ಪಿಸಿಕೊಂಡಿದ್ದಳು....ತನ್ನ ಮದುವೆಯ ಊಟ....

ಈಗ ಇಲ್ಲಿ ಕುಳಿತಿದ್ದಳಾಕೆ, ಅಭಯಧಾಮದ ನಿವಾಸಿಗಳೊಡನೆ. ದೊಡ್ಡಮ್ಮ ಹೇಳಿದ್ದರು: 'ಇವತ್ತು ನಮಗೆಲ್ಲಾ ಬಹಳ ಸಂತೋಷದ ದಿವಸ....' ದೊಡ್ಡಮ್ಮ ಒಳ್ಳೆಯವರು. ಆದರೆ, ಅವರು ಹಾಗನ್ನ ಬಾರದಿತ್ತು. ಯಾಕೆ ಸಂತೋಷ ? ಯಾತಕ್ಕೋಸ್ಕರ ?

ಅಥವಾ, ಅವರು ಹಾಗಂದುದೇ ಸರಿಯಾಗಿತ್ತೇನೋ. ಕೆರೆ ಬಾವಿಯ ಪಾಲಾಗಬೇಕಾಗಿದ್ದವಳು, ಬೀದಿಗೆ ಬೀಳಬೇಕಾಗಿದ್ದವಳು, ಯಾವ ದೇವರ ದಯದಿಂದಲೋ ಅಭಯಧಾಮವನ್ನು ಬಂದು ಸೇರಿದ್ದಳಲ್ಲವೆ ?

....ನೀರು ಮಜ್ಜಿಗೆ ಬಂದು ಹೋಯಿತು, ಬಿಳಿಯ ನೀರು.

ಯಾರೋ ತನ್ನ ತಟ್ಟೆಯನ್ನು ಕಸಕೊಂಡಂತೆ ತೋರಿತು. ಜಲಜ ಅದನ್ನೆತ್ತಿ ತನ್ನದರೊಳಗಿಟ್ಟು ಹೇಳುತಿದ್ದಳು:

"ಏಳಕ್ಕ....ಏಳು....ಕೈ ತೊಳೆಯೋಣ."

"ಹುಂ....ತಟ್ಟೆ—ತಟ್ಟೆಕೊಡು!"

"ಮಾತನಾಡದೆ ನಡಿಯಕ್ಕ."

"ಬೇಡ ಜಲಜ. ನನ್ನತಟ್ಟೆ ನಾನು ತೊಳೀಬೇಕು."

"ಒಳ್ಳೇ ತಮಾಷೆ! ನಿನ್ನೆ ಏನಂದ್ರು ದೊಡ್ಡಮ್ಮ? ನಾನು ನಿನ್ನ ಚಾಕರಿ ಮಾಡ್ಬೇಕೊಂತ ಹೇಳ್ಲಿಲ್ಲ?"

ತುಂಗಮ್ಮ ಎದ್ದು ನಿಲ್ಲುತ್ತ ಅಂದಳು:

"ಚಾಕರಿ! ಅಂಥ ಮಾತು ಆಡ್ಬೇಡ್ವೆ ಜಲಜ."

ಜಲಜ ಸುಮ್ಮನಾದಳು. ದೊಡ್ಡಮ್ಮ ಆಗಲೆ ಅಂದಿದ್ದರು. ಆಕೆಯ ಮನಸ್ಸು ನೋಯಿಸುವಂಥಾದ್ದು ಏನನ್ನೂ ಹೇಳಬೇಡವೆಂದು....ಜಲಜೆಗೆ ದಿಗಿಲಾಯಿತು. ತಾನು ಈಗಾಗಲೇ ತುಂಗಮ್ಮನ ಮನಸ್ಸು ನೋಯಿಸಿದ್ದಳಲ್ಲವೆ?

ಅಂತೂ ಮತ್ತೆ ಕೊಠಡಿ....

ಮಾವಳ್ಳಿಯ ಮನೆಯಲ್ಲಿ ಆ ಯಜಮಾನಿತಿ ಊಟವಾದ ಮೇಲೆ ಎಲೆ ಅಡಿಕೆ ಹಾಕಿಕೊಳ್ಳುವುದಿತ್ತು. ಆಕೆ ತುಂಗಮ್ಮನಿಗೂ ತಗೋ ಅಂದಿದ್ದಳು ನಾಲ್ಕಾರು ಬಾರಿ. ಆದರೆ ದುಃಖಿನಿಯಾಗಿದ್ದ ತುಂಗಮ್ಮನಿಗೆ ಯಾವುದೂ ಬೇಕಾಗಿರಲಿಲ್ಲ. ಮನೆಯಾಕೆ ಒತ್ತಾಯಿಸಿದಾಗ ಒಂದು ಚೂರು ಅಡಿಕೆಯನ್ನಷ್ಟೆ ಬಾಯಿಗೆ ಹಾಕಿಕೊಂಡು ತುಂಗಮ್ಮ ಸುಮ್ಮನಾಗುತಿದ್ದಳು.

ಇಲ್ಲಿ ಅಂತಹ ಯಾವ ತೊಂದರೆಯೂ ಇರಲಿಲ್ಲ.

....ಜಲಜಳನ್ನು ಸರಸಮ್ಮ ತಮ್ಮ ಕೊಠಡಿಗೆ ಕರೆದರು.

ತುಂಗಮ್ಮ ದಿಂಬನ್ನು ಗೋಡೆಗೊರಗಿಸಿ ಅದಕ್ಕೆ ಆತು ಕುಳಿತು, ಛಾವಣಿಯನ್ನು ದಿಟ್ಟಿಸಿದಳು. ಇಲ್ಲಿಯೂ ಮರದ ತೋಪುಗಳಿದ್ದುವು. ಆ ಕಟ್ಟಡದ ಕಾಂಸಿಯೆಲ್ಲ ಮರದ ತೋಪುಗಳಮೇಲೆಯೇ ನಿಂತಿರಬೇಕು

ಹಾಗಾದರೆ. ಆದರೆ ಇಲ್ಲಿ ಯಾವುದರಲ್ಲೂ ಮೊಳೆ ಇರಲಿಲ್ಲ. ಆದುದರಿಂದ, ಈ ಕೊಠಡಿಯನ್ನು ಬಾಡಿಗೆಗೆ ಕೊಡುವ ಪ್ರಮೇಯವೇ ಇರಲಿಲ್ಲ.

ತುಂಗಮ್ಮನಿಗೆ ನಿರಾಶೆಯಾಯಿತು. ಕತ್ತಲಾದಮೇಲೆ ಯಾವ ಹೆಣ್ಣು ಗುಬ್ಬಚ್ಚಿಯೂ ಇಲ್ಲಿಗೆ ಬರಲಾರದು. ಮುಂಜಾವದಲ್ಲಿ ಗಂಡುಗುಬ್ಬಚ್ಚಿ ಬಂದು ಅದನ್ನು ಕರೆಯಲಾರದು....ಆದರೆ ಆ ಗುಬ್ಬಚ್ಚಿ ಸಂಸಾರದ ಯೋಚನೆ ಸುಖಕರವಾಗಿರಲಿಲ್ಲ. ಆ ಗುಬ್ಬಚ್ಚಿಗಳನ್ನು ತಾನು ಮರೆತು ಬಿಡುವುದೇ ಮೇಲು, ಎಂದುಕೊಂಡಳು ತುಂಗಮ್ಮ.

ಲವಲವಿಕೆಯಿಂದಲೇ ಜಲಜ ಒಳಬಂದಳು.

"ತುಂಗಕ್ಕ, ಲಲಿತಾ ಮತ್ತು ನಾನು ಮಾರ್ಕೆಟಿಗೆ ಹೋಗ್ತೀವಿ!"

ಮಾರ್ಕೆಟಿಗೆ? ಬೀಗತಗಲಿಸಿದ್ದ ಬಾಗಿಲನ್ನು ದಾಟಿ ಮಾರ್ಕೆಟಿಗೆ?

"ಯಾಕೆ ಹಾಗೆ ನೋಡ್ತಿದೀಯಾ ತುಂಗಕ್ಕ? ಆಶ್ಚರ್ಯವಾಯ್ತೆ ನಿಂಗೆ?"

"ನೀವು ಯಾರೂ ಈ ಮನೆ ಬಿಟ್ಟೇ ಹೋಗಲ್ವೇನೋಂತಿದ್ದೆ."

"ನಾನು ಮತ್ತು ಲಲಿತಾ ಹಿರೇಮಣಿಗಳು ತುಂಗಕ್ಕ."

"ದೊಡ್ಡಮ್ಮನೂ ಜತೇಲಿ ಬರ್ತಾರ?"

"ಇಲ್ಲ! ನಾವೇ—ಇಬ್ಬರೇ...."

ತುಂಗಮ್ಮ ಸುಮ್ಮನಾದಳು. ಆ ಮೌನ ಜಲಜೆಗೆ ಇಷ್ಟವಾಗಲಿಲ್ಲ. ಆಕೆ ಅಸಹನೆಯಿಂದ ಕೇಳಿದಳು:

"ಯಾಕೆ ಹೋಗ್ತೀರಾಂತ ಕೇಳ್ಬಾರ್ದೆ ತುಂಗಕ್ಕ?"

ತುಂಗಮ್ಮನಿಗೆ ನಗು ಬಂತು.

"ಆಗಲಮ್ಮ. ಕೇಳ್ತೀನಿ. ಈಗ್ಹೇಳು, ಯಾಕೆ ಹೋಗ್ತೀರಾ?"

"ಒಂದುವಾರವೆಲ್ಲ ಇನ್ನು ಲಲಿತಾ ನಳಪಾಕ. ತರಕಾರಿ ತರ್ಬೇಕಲ್ಲ. ಎರಡು ಮೂರು ದಿವಸಕ್ಕೆ ಆಗೋವಷ್ಟು ತಂದ್ಬಾಕ್ತೀವಿ ಒಂದೇ ಸಲ."

ಜಲಜ-ಲಲಿತೆಯರಿಗೆ ಯಾರ ಭಯವೂ ಇಲ್ಲ. ಅವರು ಹಾಗೆಲ್ಲ ಹೊರಹೋಗಿ ಬರಬಲ್ಲರು. ಆದರೆ ತನಗೆ ಆ ಸ್ವಾತಂತ್ರ್ಯವಿಲ್ಲ. ಅಕ್ಷಮ್ಯ ಅಪರಾಧ ಮಾಡಿದವರ ಹಾಗೆ ಬಸಿರನ್ನು ಬಚ್ಚಿಡಬೇಕು ಬೇರೆಯವರಿಂದ. ಕೊಲೆಪಾತಕಿಯ ಹಾಗೆ ಜಘರದೃಷ್ಟಿಯಿಂದ ಅವಿತಿರಬೇಕು, ದೂರ.

ಜಲಜ, ತನ್ನ ಅಕ್ಕನ ಬಳಿಯಲ್ಲಿ ಕುಳಿತುಕೊಂಡಳು.

"ಇನ್ನ ಒಂದ್ತಿಂಗಳಾದ್ಮೇಲೆ ನೀನೂ ನಾನೂ ಜತೇಲಿ ಮಾರ್ಕೆಟಿಗೆ ಹೋಗಿಬರೋಣ ಅಕ್ಕ. ಒಂದು ವಾರವೆಲ್ಲಾ ನಾವಿಬ್ರೇ ಅಡುಗೆ ಜವಾಬ್ದಾರಿ ವಹಿಸ್ಕೊಂಡರಾಯ್ತು."

....ಒಂದು ತಿಂಗಳ ಮುಂದಿನ, ತನ್ನ ಬಾಣಂತಿತನದ ಅನಂತರದ, ಮಾತು.

"ಯಾಕೆ, ನಂಬ್ಕೆ ಬರಲ್ವೆ ನಿಂಗೆ? ದೊಡ್ಡಮ್ಮ ಖಂಡಿತ ಕೂಡದು ಅನ್ನೋಲ್ಲ. ನಾನು ಪಂದ್ಯ ಕಟ್ತೇನಿ ಬೇಕಾದ್ರೆ. ಬೇರೆ ಯಾರ್ಗೂಸಿಗ್ದೇ ಇರೋವಷ್ಟು ಮುಂಚಿತವಾಗಿ ಹೊರಗೆ ಹೋಗ್ಬರೋ ಸ್ವಾತಂತ್ರ್ಯ ನಿಂಗೆ ಸಿಗುತ್ತೆ."

"ನೀನು ಬಹಳ ಒಳ್ಳೆಯವಳು ಜಲಜ."

"ಅಯ್ಯೊ, ನಿನುಗ್ಹುಚ್ಚು! ನಾನು ಒಳ್ಳೆಯವಳಾಗಿದ್ರೆ ಇಲ್ಲಿ ಯಾಕಿರ್ತಿದ್ದೆ ಹೇಳು!"

ಒಳ್ಳೆಯವರು ಯಾರೂ ಅಲ್ಲಿ — ಅಭಯಧಾಮದಲ್ಲಿ—ಇರಬೇಕಾದ ಅಗತ್ಯವಿಲ್ಲ ಅಲ್ಲವೆ?....ಸತ್ಯವನ್ನೆ ಹೇಳಿದ್ದಳು ಜಲಜ.

ತುಂಗಮ್ಮನ ಮುಖ ಕಪ್ಪಿಟ್ಟು ದೃಷ್ಟಿ ಕೆಳಕ್ಕಿಳಿಯಿತು.

ಜಲಜೆ, ತಾನು ಮಾಡಿದ್ದ ಪ್ರಮಾದ ತಿಳಿದು, ತುಟಿಕಚ್ಚಿಕೊಂಡಳು. ಮಾಡಿದ ತಪ್ಪನ್ನು ತಿದ್ದಲೆತ್ನಿಸುತ್ತ ಆಕೆ ಅಂದಳು:

"ನಂಗೆ ಬುದ್ಧಿ ಇಲ್ಲ ತುಂಗಕ್ಕ. ನನ್ನ ವಿಷಯ ಹಾಗಂದೆ. ನೀನು ಮನಸ್ಸಿಗೆ ಹಚ್ಕೋಬೇಡ್ವೆ ಅದನ್ನ."

ಜಲಜಳ ಅಳುಮೋರೆ ಕಂಡು ತನ್ನದುಃಖವನ್ನು ಮರೆತು ತುಂಗಮ್ಮ, ಗೆಳತಿಯನ್ನು ಸಮಜಾಯಿಸಲೆಂದು ಮುಗುಳ್ನಕ್ಕಳು.

"ಅಂಥಾದ್ದೇನು ನೀನು ಅಂದಿರೋದು? ನಿಜಸ್ಥಿತಿ, ನಿಜಸ್ಥಿತೀನೆ ಅಲ್ವಾ?"

ಆಗಲೆ ಲಲಿತಾ ಅಲ್ಲಿಗೆ ಬಂದುದರಿಂದ ಮಾತು ಬದಲಾಯಿಸುವುದು ಸುಲಭವಾಯಿತು.

ಲಲಿತೆಯ ಮೈ ಬಣ್ಣ ಸಾದಾಗಪ್ಪು. ಎತ್ತರದ ನಿಲುವು. ಹೃಷ್ಟ

ಪುಷ್ಟವಾದ ಮೈ ಕೈ. ವಿಶಾಲವಾದ ಮುಖ. ನೋಡಿದವರು ಮೊದಲು ಮಂಕಾಗಿ ಬಳಿಕ ಮೆಚ್ಚಬೇಕಾದಂತಹ ರೂಪ. ಎದೆಯನ್ನು ಬಿಗಿದಿದ್ದ ಮಾಸಿದ ರವಕೆಯಾಗಲೀ ಮಸಕಾದ ಸೀರೆಯಾಗಲೀ ಆಕೆಯ ಆಕರ್ಷಣೆಯನ್ನು ಕಡಿಮೆಗೊಳಿಸಲು ಸಮರ್ಥವಾಗಿರಲಿಲ್ಲ.

"ನೋಡಿದ್ರ್ಯಾ ತುಂಗಕ್ಕ? ಹ್ಯಾಗಿದಾಳೆ ನಮ್ಮ ಲಲಿತಾ?"

"ಬನ್ನಿ"

—ಎಂದು ತುಂಗಮ್ಮ ಕರೆದಳು.

ಜಲಜ ನಕ್ಕಳು.

"ಓ! ಬನ್ನಿ! ಗೌರವದ ಬಹುವಚನ! ಅಕ್ಕಾ-ಈಗ್ಲೇ ಹೇಳ್ತೀನಿ. ಈ ಲಲಿತಾ ಮಾಯಾವಿನಿ. ಹತ್ತಿರ ಸೇರಿಸ್ಬೇಡಿ."

ಲಲಿತಾ, ಬಲು ಮೋಹಕವಾಗಿ ನಕ್ಕಳು.

"ಏಳೆ ಜಲಜ, ಹೊತ್ತಾಯ್ತು. ಐದು ಘಂಟೆಯೊಳಗೇ ವಾಪಸು ಬರ್ಬೇಕು."

ಜಲಜ ಚಡಪಡಿಸಿ ಎದ್ದಳು. ಕನ್ನಡಿಯಲ್ಲೊಮ್ಮೆ ಮುಖನೋಡಿಕೊಂಡು, "ಸರಿಯಾಗಿದೆ!" ಎಂದಳು.

ಆಕೆ ಲಲಿತೆಯ ಮಗ್ಗುಲಲ್ಲಿ ನಿಂತರೆ ಚಿಕ್ಕವಳಾಗಿ ತೋರುತಿದ್ದಳು—ಬಲು ಚಿಕ್ಕವಳಾಗಿ.

ತುಂಗಮ್ಮನ ನೋಟದ ಹಿಂದಿನ ಯೋಚನೆಯನ್ನು ಊಹಿಸಿಕೊಳ್ಳುವುದು ಜಲಜೆಗೆ ಕಷ್ಟವಾಗಲಿಲ್ಲ.

"ನಿನ್ನೆತಾನೇ ಜ್ವರದಿಂದ ಎದ್ದು ಸ್ವಲ್ಪ ಬಡಕಲಾಗಿದೀನಿ ಅಷ್ಟೆ. ಇಲ್ದಿದ್ರೆ ನಾನೂ ತಕ್ಕಮಟ್ಟಿಗೆ ಭಾರೀ ಇಸಂ ಅಂತಾನೆ ಇಟ್ಕೊ."

ತುಂಗಮ್ಮ ನಕ್ಕಳು.

"ಅಲ್ಲ ಅಂತೀಯಾ?"

"ಓಹೊ!"

"ಆದರೆ ಒಂದು ವಿಷಯ ತುಂಗಕ್ಕ. ಈ ಲಲಿತಾ ನನ್ಜತೇಲಿದ್ರೆ ನಾನು ಯಾವುದಕ್ಕೂ ದಿಗಿಲು ಬೀಳ್ಬೇಕಾದ್ದಿಲ್ಲ. ಈ ದೇವಿ, ನಮ್ಮ ದೊಡ್ಡಮ್ಮ ಹೇಳೋ ಹಾಗೆ, ಅಭಯದ ಸಾಕ್ಷಾತ್ಕಾರ. ಈಕೆ ಜತೇಲಿ

ನಾನಿರುವಾಗ ಯಾವನಾದರೂ ಮೈ ಮುಟ್ಟೋ ಯೋಚ್ನೆ ಮಾಡ್ಲಿ!"

"ಸಾಕು - ಸಾಕೇ!"

—ಎನ್ನುತ್ತ ಲಲಿತಾ, ಜಲಜೆಯನ್ನೆಳೆದು ಕೊಂಡು ಹೋದಳು.

....ಬಿಸಿಲು ಕ್ರೂರವಾಗಿತ್ತು. ಕಣ್ಣುಮುಚ್ಚಿ ನಿದ್ದೆ ಹೋಗಲು ತುಂಗಮ್ಮ ಯತ್ನಿಸಿದಳು. ಬಹಳ ಹೊತ್ತು ನಿದ್ದೆ ಬರಲಿಲ್ಲ....ಆಮೇಲೆ ಮಂಪರು.

ಆದರೂ ಏನೇನೊ ಸ್ವರಗಳು ಕೇಳಿಸುತಿದ್ದುವು.

ಯಾರೋ - ದೊಡ್ಡಮ್ಮನೇ ಇರಬಹುದು - ಇಣಿಕಿನೋಡಿ, ಬಳಿಕ ಬಾಗಿಲೆಳೆದುಕೊಂಡು ಹೋದ ಹಾಗಾಯಿತು.

....ಹೊರ ಬಾಗಿಲನ್ನು ಬಡಿದ ಸದ್ದು.

ಬಾಗಿಲಿನೆದುರು ಜಗಲಿಯಲ್ಲಿ ಹುಡುಗಿಯೊಬ್ಬಳ ಸ್ವರ:

"ಮಗ್ಗದ ಮೇಷ್ಟ್ರು ಬಂದ್ರು, ಬನ್ರೇ...."

ಗಂಡಸೊ, ಹೆಂಗಸೊ....ಅಂತೂ ದಾರವನ್ನು ಬಟ್ಟೆಯಾಗಿ ಹೇಗೆ ಮಾರ್ಪಡಿಸಬೇಕೆಂದು ಹೇಳಿ ಕೊಡುವವರೊಬ್ಬರು.

....ಮತ್ತೊಮ್ಮೆ ಬಾಗಿಲು ಬಡಿದ ಸದ್ದು.

ಯಾರು ಬಂದರೊ ಈಗ?

ಸ - ರಿ - ಗ - ಮ - ಪ - ದ - ನಿ - ಸ

ಸರಿಗಮಪದನಿಸ....

ಸಂಗೀತ ಹೇಳಿ ಕೊಡುತಿದ್ದಾರೆ ಯಾರೋ.

ಹಾಗಾದರೆ, ತನಗೆ ಎಚ್ಚರವಾಗದಂತೆ ಕೊಠಡಿಯೊಳಕ್ಕೆ ಬಂದು, ಹುಡುಗಿಯರು ಹಾರ್ಮೋನಿಯಂ ಪೆಟ್ಟಿಗೆಯನ್ನು ಒಯ್ದಿರಬೇಕು.

"ಕತ್ತೆಗಳು! ಥುತ್!"

—ಎಂದು ಯಾರೋ ಬಯ್ಯುತಿದ್ದರು. ಯಾರ ಸ್ವರ? ದೊಡ್ಡಮ್ಮ ಹಾಗೆ ಬಯ್ಯುವವರಲ್ಲ. ಹಾಗಿದ್ದರೆ ಸಂಗೀತದ ಅಧ್ಯಾಪಿಕೆ ಇರಬಹುದು.

ಸತಾಲ್ - ಸಿತೀಲ್....ಮಗ್ಗ ಚಲಿಸುತ್ತಿದೆ....ಸತಾಲ್ - ಸಿತೀಲ್.

ಹುಡುಗಿಯರೂ, ಕತ್ತೆಗಳೆ ಎಂದು ಬೈದವರಿಗೆ ಪ್ರತೀಕಾರ ಮಾಡು ವಂತೆಯೇ ಹಾಡುತಿದ್ದಾರೆ....

ಆ ಬಳಿಕ ನಿದ್ದೆ.

....ಬಹಳ ಹೊತ್ತಾದ ಮೇಲೆ ತುಂಗಮ್ಮನಿಗೆ ಎಚ್ಚರವಾಯಿತು. ಕಣ್ಣುಗಳು ಉರಿಯುತಿದ್ದುವು. ಏಳಲು ಮನಸ್ಸಾಗಲಿಲ್ಲ.

ಬಿಸಿಲಿನ ಝಳ ಕಡಿಮೆಯಾಗಿ ಸಂಜೆಯಾದಂತೆ ತೋರಿತು.

ಇನ್ನೇನು, ಏಳಬೇಕು, ಎನ್ನುತಿದ್ದಾಗಲೆ ಲಲಿತಾ - ಜಲಜೆಯರ ಸ್ವರ ಆಫೀಸು ಕೊಠಡಿಯಿಂದ ಕೇಳಿಸಿತು.

ಎರಡು ನಿಮಿಷಗಳಲ್ಲೆ ಜಲಜ ಒಳಬಂದಳು. ಆಕೆ ಬರುವುದಕ್ಕೂ ತುಂಗಮ್ಮ ಎದ್ದು ಕುಳಿತುಕೊಳ್ಳುವುದಕ್ಕೂ ಸರಿಹೋಯಿತು.

ಜಲಜ ತನ್ನ ಮಡಿಲಿನತ್ತ ಬೊಟ್ಟು ಮಾಡಿದಳು :

"ಅಕ್ಕ, ನಾನೇನು ತಂದಿದೀನಿ ಹೇಳು."

"ಅದೇನೊ !"

"ನಿನಗಾಗಿ ಜಲಜಾ ಏನೂ ತರೋಲ್ವಾ ಹಾಗಾದರೆ ?"

ಹಿಂದೆ ಇದೇ ಮಾತನ್ನು ತಾನೆಲ್ಲೋ ಕೇಳಿದ್ದಂತೆ ತುಂಗಮ್ಮನಿಗೆ ಭಾಸವಾಯಿತು. ಆದರೆ ಕೇಳಿದ್ದುದೆಲ್ಲಿ ? ತಾಯಿಯಂತೂ ಅಲ್ಲವೇ ಅಲ್ಲ.... ತಂದೆ ? ಪದ್ದಕ್ಕ ? ತಮ್ಮ ? ನಾರಾಯಣಮೂರ್ತಿ ? ಯಾರು - ಯಾರು ಹೇಳಿರಬಹುದು ಹಾಗೆ ?

....ಇಲ್ಲ ಹಿಂದೆ ಯಾರೂ ಹಾಗೆ ಹೇಳಿರಲಿಲ್ಲ. ಇಂತಹ ಒಲವು ಆಕೆಯ ಬದುಕಿನಲ್ಲಿ ಇದೇ ಮೊದಲ ಬಾರಿಗೆ ಈ ರೀತಿಯಾಗಿ ಪ್ರಕಟಗೊಂಡಿತ್ತು.

"ಹೋಗಮ್ಮ. ಈ ಅಕ್ಕ ಏನೂ ಮಾತಾಡೊಲ್ಲ...."

"ಅಕ್ಕನಿಗಾಗಿ ಅದೇನು ತಂದಿದೀಯೋ ತೋರ್ಸು."

ಜಲಜಾ ಮಡಿಲಿನಿಂದ ಆ ಪೊಟ್ಟಣವನ್ನು ಹೊರತೆಗೆದಳು, ಎಣ್ಣೆಯ ತೆಳುಕಾಗದದೊಳಗೆ ಬಣ್ಣ ಬಣ್ಣದ ಪೆಪ್ಪರಮೆಂಟುಗಳಿದ್ದುವು

ಜಲಜ, ಎಳೆಯ ಮಕ್ಕಳ ಉತ್ಸಾಹ ತೋರಿಸುತ್ತಾ, ತಾನು ಪೆಪ್ಪರ ಮೆಂಟುಗಳನ್ನು ಮಾರ್ಕೆಟಿನ ಬಸ್ ನಿಲ್ದಾಣದಲ್ಲಿ 'ಕೂಚ್ಮಟ್ಟಿ' ಹುಡುಗ ನೊಬ್ಬನಿಂದ ಕೊಂಡುಕೊಂಡ ಸಾಹಸವನ್ನು ಬಣ್ಣಿಸಿದಳು :

“ಇಷ್ಟಕ್ಕೂ ಒಂದೇ ಆಣೆ ಅಕ್ಕ ಒಂದಾಣೆಗೆ ನಾಲ್ಕತ್ತು! ನನ್ನ ಹತ್ರ ಇದ್ದಿದ್ದು ಒಂದೇ ಆಣೆ. ಅದನ್ನ ಕೊಟ್ಬಿಟ್ಟು ತಗೊಂಡೆ. ಅಭಯ ಧಾಮಕ್ಕೆ ತಿಂಡಿ ಏನು ತಂದ್ರೂನೂ ಎಲ್ಲರೂ ಹಂಚ್ಕೋಬೇಕು. ಇವತ್ತೇ ನ್ಮಾಡ್ತೀನಿ ಗೊತ್ತೆ? ದೊಡ್ಡಮ್ಮಂಗೆ ಎರಡ್ಕೊಡ್ತೀನಿ. ಕುರುಡಿ - ಸುಂದ್ರಾ, ಲಲಿತಾ ಮತ್ತು ನಂಗೆ ಎರಡೆರಡು. ಇಪ್ಪತ್ತೇಳು ಹುಡುಗೀರಿಗೆ ಒಂದೊಂದು. ಉಳಿದದ್ದೆಲ್ಲಾ ನಿಂಗೆ. ಐದು.”

ಆ ಮಾತುಗಳೆಲ್ಲಾ ಸಿಹಿಯಾಗಿದ್ದುವು, ಬಲು ಸಿಹಿ. ಪೆಪ್ಪರಮೆಂಟು ಆ ಮಾತಿಗಿಂತಲೂ ಹೆಚ್ಚು ರುಚಿಕರವಾಗುವುದು ಸಾಧ್ಯವಿರಲಿಲ್ಲ.

“ನಂಗೆ ಒಂದೇ ಒಂದು ಸಾಕು ಜಲಜ.”

“ಉಂಟೆ ಎಲ್ಲಾದ್ರೂ? ಐದು ನನ್ನಕ್ಕಂಗೆ - ನನ್ನಕ್ಕಂಗೆ ಐದು!”

# ೮

ಹೆರಿಗೆಯ ನೋವಿನಿಂದ ತುಂಗಮ್ಮ ನರಳಿದಳು. ಆ ನರಳಾಟ, ಮರಣಾಸನ್ನವಾದ ಜೀವ ನೋವು ತಡೆಯದೆ ಮಾಡುವ ಆರ್ತನಾದ ದಂತಿತ್ತು. ಆಕೆ ದಿಂಬಿನೊಂದು ತುದಿಯನ್ನು ಕಿತ್ತುಕಿತ್ತು ಕಚ್ಚುತ್ತಾ ಹೊರಳಾಡಿದಳು.

ಅಲ್ಲಿನ ಯಾರಿಗೂ ಅಂತಹ ದೃಶ್ಯ ಹೊಸದಾಗಿರಲಿಲ್ಲ. ಅದೇ ಮೊದಲನೆಯ ಹೆರಿಗೆಯಾಗಿರಲಿಲ್ಲ ಆ ಕೊಠಡಿಯಲ್ಲಿ.

ಆದರೂ, ಅಭಯಧಾಮದ ವಾತಾವರಣ ಎಂದಿಗಿಂತ ಭಿನ್ನವಾಗಿತ್ತು. ಒಂದು ರೀತಿಯ ಮೌನವಿತ್ತಲ್ಲಿ; ಅವ್ಯಕ್ತವಾದ ಕಾತರವಿತ್ತು.

ಗಂಡಸರು ಯಾರೂ ಇಲ್ಲದ ಕಟ್ಟಡ ನಿಜ. ಆದರೂ ಕೊಠಡಿಯ ಬಾಗಿಲನ್ನು ಸದ್ದಿಲ್ಲದೆ ಮುಂದಕ್ಕೆ ತಳ್ಳಿ ಸರಸಮ್ಮ, ಜಲಜ-ಲಲಿತೆ-ಸಾವಿತ್ರಿಯರ ನೆರವಿನೊಡನೆ, ತುಂಗಮ್ಮನ ಆರೈಕೆಗೆ ನಿಂತರು.

ಅಂತೂ ಅಭಯಧಾಮ ಸೇರಿದ ಹತ್ತನೆಯ ದಿನದಲ್ಲಿ ತುಂಗಮ್ಮ ಸಾವಿನೊಡನೆ ಸೆಣಸಾಡಿದಳು.

ಅದು ಬೆಳಗಿನ ಹೊತ್ತು. ಅಧ್ಯಾಪಿಕೆ ರಾಜಮ್ಮ ಬಂದರು. ಬಂದವರು ಒಳಕ್ಕೆ ಇಣಿಕಿ, ಎಲ್ಲವೂ ಸರಿಯಾಗಿಯೇ ಇವೆ ಎನ್ನುವಂತೆ ಮುಖ ಭಾವ ತೋರಿಸುತ್ತ, ತರಗತಿ ನಡೆಯಬೇಕಾದ ಹಜಾರದತ್ತ ಹೋದರು. ಹೆರಿಗೆಯ ಕೊಠಡಿಯಲ್ಲಿದ್ದ ಮೂವರು ಹುಡುಗಿಯರನ್ನೂ ಕುರುಡಿ-ಮೂಗಿಯರನ್ನೂ ಹೊರತು ಉಳಿದವರೆಲ್ಲ ತರಗತಿಗೆ ಬಂದುದಾಯಿತು. ರಾಜಮ್ಮನೇನೋ ಬೇರೆ ಬೇರೆಯವರಿಗೆ ಬೇರೆ ಬೇರೆ ರೀತಿಯ ಅಕ್ಷರ-ಪದಗಳನ್ನು ಹೇಳಿಕೊಡ ತೊಡಗಿದರು. ಆ ಹುಡುಗಿಯರ ದೃಷ್ಟಿಯೆಲ್ಲ ತಮ್ಮ ಅಧ್ಯಾಪಿಕೆಯ ಮೇಲೆಯೇ ಇತ್ತು. ಆದರೆ ಕಿವಿಗಳೆಲ್ಲ ತುಂಗಮ್ಮನ ಕೊಠಡಿಯಿಂದ ಬರುತಿದ್ದ ಸದ್ದುಗಳಿಗೆ ಮೀಸಲಾಗಿದ್ದುವು. ಆಗೊಮ್ಮೆ ಈಗೊಮ್ಮೆ

ಒಳಗಿದ್ದ ಮೂವರು ಹುಡುಗಿಯರಲ್ಲಿ ಯಾರಾದರೊಬ್ಬಳು ಹೊರಬಂದ ಳೆಂದರೆ, ತರಗತಿಗೆ ತರಗತಿಯೇ ಆಕೆಯನ್ನು ನೋಡುತ್ತಿತ್ತು.

ಅಲ್ಲಿಗೇ ತರಗತಿ ನಿಲ್ಲಿಸಿ ಮನೆಗೆ ಹೊರಟು ಬಿಡಬಹುದೆಂದು ರಾಜಮ್ಮನಿಗೆ ಸಂತೋಷವಾಯಿತು. ಆದರೆ ಆಕೆ ಅದನ್ನು ಹೊರಗೆ ತೋರಿಸಿಕೊಳ್ಳಲಿಲ್ಲ. ಮುಖ ಸಿಂಡರಿಸಿಕೊಂಡೇ ಅವರು ತಮ್ಮ ಪುಸ್ತಕ ಗಳನ್ನು ಎತ್ತಿಕೊಂಡರು.

"ಇವತ್ತಿಗೆ ಸಾಕು!"

ವಿದ್ಯುತ್ ಗುಂಡಿಯೊತ್ತಿದರೆ ಬೆಳಕು ಬೇಗನೆ ಬರುತಿತ್ತೋ ಇಲ್ಲವೋ, ರಾಜಮ್ಮನ ಬಾಯಿಂದ ಆ ಎರಡು ಪದಗಳು ಹೊರಬಿದ್ದೊಡನೆಯೇ ತರಗತಿ ಚೆದರಿತು!

ತುಂಗಮ್ಮ ಮಲಗಿದ್ದ ಕೊಠಡಿಯನ್ನು ಪ್ರವೇಶಿಸಿ ರಾಜಮ್ಮ ಎರಡು ನಿಮಿಷ ಹಾಗೆಯೇ ನಿಂತು, ಸರಸಮ್ಮನನ್ನು ಉದ್ದೇಶಿಸಿ ಅಂದರು:

"ನಾನು ಬರ್ತೀನ್ರಿ."

"ಹೊರಟ್ರೀರಾ ?"

"ಹುಂ...."

ಆದರೆ ಆಕೆ ಹೊರಡುವ ಲಕ್ಷಣ ಕಾಣಿಸಲಿಲ್ಲ. ಏನಾದರೊಂದು ಹೇಳದೆ ಆಕೆ ಹೊರಡುವಳೆಂದು ಸರಸಮ್ಮ ಭಾವಿಸಿಯೂ ಇರಲಿಲ್ಲ.

"ಡಾಕ್ಟರನ್ನು ಕರೆಸೋದು ಬೇಡ ಅಂತೀರಾ ?"

"ಕರೆಸೋಣ, ಆಮೇಲೆ."

"ಆಸ್ಪತ್ರೆಗೆ—?"

"ಆಕೆಗೆ, ಇಲ್ಲಿಯೇ ಇರೋದು ಇಷ್ಟವಂತೆ."

ನಿಜ ಸಂಗತಿಯೆಂದರೆ, ಆಸ್ಪತ್ರೆಗೆ ಹೋಗಲು ತುಂಗಮ್ಮನಿಗೆ ಇಷ್ಟವಿರ ಲಿಲ್ಲ. ಅಲ್ಲಿ ಯಾರಾದರೂ ತನ್ನನ್ನು ಗುರುತಿಸಬಹುದೆಂಬ ಭಯ ಆಕೆ ಯನ್ನು ಕಾಡುತಿತ್ತು.

"ಸರಿ ಹಾಗಾದರೆ."

ಇನ್ನೂ ಇಲ್ಲೇ ನಿಂತಿದ್ದಾಳಲ್ಲಾ—ಎಂದು ಬೇಸರಗೊಂಡವರಂತೆ ಆ

ಮೂವರು ಹುಡುಗಿಯರೂ ರಾಜಮ್ಮನ ಮುಖ ನೋಡಿದರು. ಅವರತ್ತ ಕ್ಷಣಕಾಲ ದೃಷ್ಟಿ ಹಾಯಿಸಿ ರಾಜಮ್ಮ ಹೊರ ಹೊರಟರು.

ಅಧ್ಯಾಪಿಕೆಯನ್ನು ಕಳುಹಿಸಿಕೊಟ್ಟು ಅಭಯಧಾಮಕ್ಕೆ ಒಳಗಿನಿಂದ ಬೀಗ ತಗಲಿಸುವ ಜವಾಬ್ದಾರಿ ಜಲಜೆಯ ಮೇಲೆ ಬಿತ್ತು.

ಆದರೆ, ತುಂಗಮ್ಮನ ಹೆರಿಗೆಯ ನೋವಿನ ರೀತಿ ವಿಚಿತ್ರವಾಗಿತ್ತು. ಮಧ್ಯಾಹ್ನದ ಹೊತ್ತಿಗೆ ಆಕೆ ಸುಧಾರಿಸಿಕೊಂಡಳು. ಹುಡುಗಿಯರು ಹಲವರಿಗೆ ನಿರಾಶೆಯಾಯಿತು. ಉಳಿದವರು ಆ ಪ್ರಕರಣವನ್ನು ಮರೆತುದೂ ಆಯಿತು.

ಬಳಿಕ ಎಂದಿನಂತೆಯೆ ಬದುಕು.

ಸಂಜೆ, ನೋವು ಮತ್ತೆ ಕಾಣಿಸಿಕೊಂಡಿತು....

ತುಂಗಮ್ಮ ಪದೇ ಪದೇ ಕೂಗಿಕೊಂಡಳು:

"ಅಯ್ಯೋ ಸತ್ತೆನಲ್ಲೇ! ಅಮ್ಮಾ—ಅಮ್ಮಾ!"

ನಾಳೆಯ ದಿನ ತನ್ನನ್ನು 'ಅಮ್ಮಾ' ಎಂದು ಕರೆಯಲಿದ್ದ ಕೂಸನ್ನು ಪಡೆಯಲೆಂದು ಚಡಪಡಿಸುತಿದ್ದ ತುಂಗಮ್ಮ, ನೋವನ್ನು ತಡೆಯಲಾರದೆ, 'ಅಮ್ಮಾ' ಎಂದು ಹಿಂದೆ ತನ್ನನ್ನು ಹೆತ್ತವಳನ್ನು ನೆರವಿಗೆ ಕರೆಯುತಿದ್ದಳು.

ಆಕೆಯೋ ತನ್ನ ಬಾಲ್ಯದಲ್ಲಿಯೇ ತೀರಿಕೊಂಡಿದ್ದ ಅಮ್ಮ. ಆ ತಾಯಿ ನೆರವಿಗೆ ಬರುವ ಪ್ರಶ್ನೆ ಇರಲಿಲ್ಲ.

ಸರಸಮ್ಮನೇ ತಾಯಿಯಾಗಿ ದಾದಿಯಾಗಿ ಸೂಲಗಿತ್ತಿಯಾಗಿ ಸಂತವಿಟ್ಟರು.

"ಏನೂ ಆಗಲ್ಲ ಮಗೂ. ಇನ್ನೂ ಸ್ವಲ್ಪ ಹೊತ್ತು ಸಹಿಸ್ಕೋಮ್ಮ...."

"ಅಯ್ಯೋ....ನಾನು ಬದುಕೋಲ್ಲ ದೊಡ್ಡಮ್ಮ...."

ಅದರ ಜತೆಯಲ್ಲಿ ನರಳಾಟ.

"ಹುಚ್ಚಿ! ಹಾಗನ್ಬಾರದು ತುಂಗಾ. ನಿಂಗೇನೂ ಆಗಲ್ಲ....ಮುದ್ದು ಮುದ್ದಾದ ಗಂಡು ಮಗ ಬರ್ತಾನೆ....!"

"ಅಯ್ಯೋ....!"

ದೊಡ್ಡಮ್ಮನೆಂದೂ ಹೆರಿಗೆಯ ನೋವಿನಿಂದ ನರಳಿದವರಲ್ಲ. ತಾಯಿಯಾಗುವ ಭಾಗ್ಯವಿರಲಿಲ್ಲ ಅವರಿಗೆ. ಗಂಡನಿದ್ದಷ್ಟು ಕಾಲವೂ ಯುವತಿ

ಯಾವ ತನ್ನನ್ನ ಸುತ್ತಲಿನ ಜನ ಬಂಜೆಯೆಂದು ಕರೆದಿದ್ದರು. ಆದರೂ ಜೊಚ್ಚಲ ಹೆರಿಗೆಯಲ್ಲಿ ಯಾವಾಗಲೂ ಹೆಣ್ಣು, ಗಂಡುಮಗುವನ್ನೇ ಬಯಸುತ್ತಾಳೆಂಬುದು ಸರಸಮ್ಮನ ತಿಳಿವಳಿಕೆಯಾಗಿತ್ತು....

ಕತ್ತಲಾಗಿ ಊಟವಾಗಿ ಹುಡುಗಿಯರು ಮಲಗುವ ಸಿದ್ಧತೆ ಮಾಡಿದರು. ತುಂಗಮ್ಮನ ಬಳಿ ನಿಂತಿದ್ದವರೂ ಒಬ್ಬೊಬ್ಬರಾಗಿ ಹೋಗಿ ಊಟಮಾಡಿ ಬಂದರು. ಹೆಚ್ಚಿನ ದೀಪಗಳನ್ನು ಆರಿಸಿದ್ದಾಯಿತು. ಹೊರಗೆ ಹಾಲು ಚೆಲ್ಲಿದಹಾಗೆ ಬೆಳುದಿಂಗಳಿತ್ತು. ಆ ತಿಂಗಳ ಬೆಳಕಿಗೆ ಸುಂದರವಾಗಿ ತೋರುತಿತ್ತು ಹೂವಿನ ಉದ್ಯಾನ. ಬಡಕಲು ದಾರದ ನೆರವಿನಿಂದ ಹೊರ ಹೋಗಲು ಬಯಸುತ್ತ ಗೋಡೆಯೇರಿದ್ದ ಮಲ್ಲಿಗೆಯ ಬಳ್ಳಿಯಿಂದ ನೂರಾರು ಹೂಗಳು ಕಂಪನ್ನು ಸೂಸುತಿದ್ದುವು. ಗುಲಾಬಿಯ ಮೊಗ್ಗುಗಳು ಕ್ಷಣ ಕ್ಷಣವೂ ಬೆಳೆಯುತ್ತ, ಬಿರಿಯುವ ಸಿದ್ಧತೆ ಮಾಡುತಿದ್ದುವು.

ಉಂಡು ಕೈ ತೊಳೆದ ಸರಸಮ್ಮ, ಚೂರು ಕಡ್ಡಿಯಿಂದ ಹಲ್ಲುಕೀಳುತ್ತ, ಒಂದೆರಡು ನಿಮಿಷ ನಿಸರ್ಗದ ರಮಣೀಯತೆಯನ್ನು ನೋಡುತ್ತ, ನಿಂತರು. ಯಾವ ಯೋಚನೆಯನ್ನೂ ಮಾಡದೆ ಅವರ ಮಿದುಳು ವಿರಮಿಸಿ ಆ ದೃಶ್ಯ ದಲ್ಲಿ ತಲ್ಲೀನವಾಯಿತು.

ಕೊಠಡಿಯೊಳಗಿಂದ ಯಾಕೊ ನರಳಾಟ ಕೇಳಿಸುತ್ತಿರಲಿಲ್ಲ.

ಸರಸಮ್ಮ ಮೆಲ್ಲನೆ ಕೊಠಡಿಯತ್ತ ಹೆಜ್ಜೆ ಇಟ್ಟು ಬಾಗಿಲನ್ನು ಹಿಂದಕ್ಕೆ ತಳ್ಳಿ, ಕೈಸನ್ನೆಯಿಂದ ಜಲಜೆಯನ್ನು ಹೊರಕ್ಕೆ ಕರೆದರು. ಆ ಬಳಿಕ ಪಿಸುಮಾತು.

“ತುಂಗಾ ಮಲಕೊಂಡ್ಲಾ ?”

“ಹೂಂ ದೊಡ್ಡಮ್ಮ. ನೋವು ನಿಂತ್ಹೋಯ್ತೆ ದೊಡ್ಡಮ್ಮ ಹಾಗಾದ್ರೆ ?”

“ಒಮ್ಮೊಮ್ಮೆ ಹಾಗಾಗುತ್ತೆ, ಹಿಂದೆ ಗೋದಾವರಿ ಇದ್ಲು ನೋಡು. ಅವಳಿಗೂ ಹಾಗೇ ಆಗಿತ್ತು. ನೆನಪಿಲ್ವಾ ?”

“ಹೂಂ....ಹೂಂ....ಹೌದು. ನಾನು ಬಂದ ವರ್ಷ. ಆದರೆ ಆಕೇನ ಆಗ ಆಸ್ಪತ್ರೆಗೆ ಕರಕೊಂಡು ಹೋದ್ರಿ ಅಲ್ವೆ ?”

“ಹೂಂ.”

ತುಂಗಮ್ಮನ ನರಳಾಟ ನೋಡಿದಾಗ ಜಲಜೆಯ ಕರುಳು ಕತ್ತರಿಸಿ ಬರುತಿತ್ತು. ತನ್ನಕ್ಕನ ಸಂಕಟವನ್ನು ಸ್ವಲ್ಪಮಟ್ಟಿಗಾದರೂ ತಾನು ಕಡಿಮೆ ಮಾಡುವುದು ಸಾಧ್ಯವಿದ್ದಿದ್ದರೆ?....

ಲಲಿತೆಯೂ ಹೊರಬಂದಳು.

"ತುಂಗಕ್ಕನಿಗೆ ಚೆನ್ನಾಗಿ ನಿದ್ದೆ ಬಂದಿದೆ ದೊಡ್ಡಮ್ಮ."

ರಾತ್ರೆ ಇನ್ನು ನೋವು ಕಾಣಿಸಿ ಕೊಳ್ಳುವುದೇ ಇಲ್ಲವೇನೊ....

ಜಲಜ ಹೇಳಿದಳು:

"ದೊಡ್ಡಮ್ಮ, ನೀವು ಹೋಗಿ ಮಲಕ್ಕೊಳ್ಳಿ."

ಆ ಸಲಹೆ ಸೂಕ್ತವಾಗಿತ್ತು.

"ಇನ್ನೊಮ್ಮೆ ನೋವು ಕಾಣಿಸ್ಕೊಂಡ್ರೆ ಬಂದು ನಿಮ್ಮನ್ನ ಎಬ್ಬಿಸ್ತೀವಿ."

ಸರಸಮ್ಮ ಒಪ್ಪಿಗೆ ಎಂಬಂತೆ ಅವರನ್ನು ನೋಡಿದರು.

"ನೀವು ಯಾರ್‍ಯಾರು ಮಲಕೋತೀರಾ ಇಲ್ಲಿ?"

ಲಲಿತ ಮತ್ತು ಜಲಜ ಮೌನವಾಗಿ ಪರಸ್ಪರ ಮುಖ ನೋಡಿಕೊಂಡರು.

"ಇಬ್ಬರೂ ಇರ್ತೀವಿ ದೊಡ್ಡಮ್ಮ...."

"ಹೋಗಿ. ಮಲಕ್ಕೊಳ್ಳಿ ಹಾಗಾದ್ರೆ."

................

ಸರಸಮ್ಮನಿಗೆ ಎಚ್ಚರವಾದಾಗ ಹೊರಗೆ ತಿಂಗಳ ಬೆಳಕಿರಲಿಲ್ಲ. ಅದು ಮುಂಜಾವದ ಕತ್ತಲು. ಬಲುದೂರದಲ್ಲಿ ಮೈಸೂರು ರೈಲು ಬೆಂಗಳೂರು ನಗರವನ್ನು ಪ್ರವೇಶಿಸುತ್ತ ಮಾಡುತಿದ್ದ ಗುಜುಗುಜುಗುಜು ಸದ್ದು ಅಸ್ಪಷ್ಟವಾಗಿ ಅಲೆಗಳ ಮೇಲೆ ತೇಲುತ್ತ ಬರುತಿತ್ತು.

ಐದು ದಾಟಿತು ಹಾಗಾದರೆ - ಎಂದು ಕೊಂಡರು ಸರಸಮ್ಮ.

ನಿದ್ದೆಯ ಹೊದಿಕೆ ಕಳಚಿಬಿದ್ದು ಅವರಿಗೊಮ್ಮೆಲೆ ತುಂಗಮ್ಮನ ನೆನಪಾಯಿತು. ಅವರು ಬೇಗ ಬೇಗನೆ ಎದ್ದು ಪಕ್ಕದ ಕೊಠಡಿಯತ್ತ ಹೋದರು. ಬಾಗಿಲಿಗೆ ಒಳಗಿಂದ ಅಗಳಿ ಹಾಕಿರಲಿಲ್ಲ. ತಳ್ಳಿದಾಗ ಅದು ತೆರೆದುಕೊಂಡಿತು. ಥಾಳಾಗಿ ಉರಿಯುತಿತ್ತು ವಿದ್ಯುದ್ದೀಪ. ಬೆಚ್ಚಗೆ ಹೊದ್ದುಕೊಂಡು ತುಂಗಮ್ಮ ಮಗುವಿನಂತೆ ನಿದ್ದೆ ಹೋಗಿದ್ದಳು. ಜಲಜ ಮತ್ತು

ಲಲಿತಾ ಒಂದೇ ಹಾಸಿಗೆಯಮೇಲೆ ಮಲಗಿದ್ದರು, ಒಬ್ಬರನ್ನೊಬ್ಬರು ಅಪ್ಪಿ ಕೊಂಡು. ಅವರು ಎಚ್ಚರದ ಲೋಕದಲ್ಲೇ ಇರಲಿಲ್ಲ. ಕಾಲಮೂಲೆಯಲ್ಲಿ ಮುದುಡಿ ಬಿದ್ದಿತ್ತು ಹೊದಿಕೆ-ತನ್ನನ್ನು ಕೇಳುವವರಿಲ್ಲವೆಂದು ಗೋಳಿಡುತ್ತ.

ಸರಸಮ್ಮ ಸದ್ದಾಗದಂತೆ ಬಂದು, ಆ ಹುಡುಗಿಯರಿಬ್ಬರಿಗೂ ಹೊದಿಸಿದರು.. ಹಾಗೆಯೆ ಹೊರ ಹೋಗುತ್ತ ದೀಪವಾರಿಸಿದರು.

ಆಮೇಲೆ, ಕಿಟಕಿಯ ಎಡೆಯಿಂದ ಬೆಳಕು ಮೆಲ್ಲಮೆಲ್ಲನೆ ತೂರಿ ಒಳಕ್ಕೆ ಬರತೊಡಗಿತು.

ಆ ಬೆಳಿಗ್ಗೆ ಸರಸಮ್ಮ ಘಂಟೆ ಬಾರಿಸಲಿಲ್ಲ. ತುಂಗ ಆದಷ್ಟು ಹೆಚ್ಚು ಹೊತ್ತು ಮಲಗಿರಲೆಂದು ಅಪೇಕ್ಷಿಸಿದ ಅವರು, ತಾವೇ ಹುಡುಗಿಯರು ಮಲಗಿದ್ದೆಡೆಗೆ ಹೋಗಿ ಗದ್ದಲವಾಗದಂತೆ ಅವರನ್ನೆಬ್ಬಿಸಿದರು.

ಸಾವಿತ್ರಿ ಕಣ್ಣು ಹೊಸಕಿಕೊಂಡು ಎದ್ದು ಕುಳಿತಳು.

"ಹೆರಿಗೆಯಾಯ್ತೆ ದೊಡ್ಡಮ್ಮ?"

- ಎಂದಾಕೆ ಸರಸಮ್ಮನನ್ನು ಕೇಳಿದಳು.

ಇಲ್ಲವೆಂದರು ಸರಸಮ್ಮ, ಮುಖಚರ್ಯೆಯ ಸನ್ನೆಯಿಂದಲೆ. ತನಗರಿಯದೆಯೇ, ತಾನು ನಿದ್ದೆ ಹೋಗಿದ್ದಾಗಲೇ, ಹೆರಿಗೆಯಾಗಿರಬಹುದೆಂದು ಶಂಕಿಸಿದ್ದ ಸಾವಿತ್ರಿಗೆ ಸಮಾಧಾನವೆನಿಸಿತು.

ಕುರುಡಿ ಸುಂದ್ರಾ, ದೊಡ್ಡಮ್ಮ ತನ್ನ ಬಳಿಗೆ ಬರುವರೆಂದು ಕಾಯುತ್ತ ಕುಳಿತಿದ್ದಳು ಚಾಪೆಯ ಮೇಲೆಯೆ. ಸರಸಮ್ಮ ತನ್ನತ್ತ ಬಂದುದನ್ನು ಕಾಲ ಸಪ್ಪಳದಿಂದಲೆ ತಿಳಿದುಕೊಂಡ ಸುಂದ್ರಾ, ಕೇಳಿದಳು:

"ಎರಿಗೆ ಆಯಿತ್ರಾ ದೊಡ್ಡಮ್ಮ?"

"ಇಲ್ಲ ಸುಂದ್ರಾ...."

ಬಚ್ಚಲುಮನೆಗೆ ಹೋಗುತ್ತ ಸರಸಮ್ಮನಿಗೆ ಹೃದಯ ಭಾರವಾಯಿತು. ಎಂತಹ ವಿಚಿತ್ರ ಸಂಸಾರ ತಮ್ಮದು! ಸಹಾಯಕ ಮುಖ್ಯಸ್ಥೆಯಾಗಿ ಅಭಯಧಾಮಕ್ಕೆ ಅವರು ಬಂದಿದ್ದರು ಹಿಂದೆ. ಮುಖ್ಯಸ್ಥೆ ಆ ಕೆಲಸ ಬಿಟ್ಟು ಹೋದ ಮೇಲೆ ತಾವೇ ಆ ಸ್ಥಾನಕ್ಕೆ ಬಂದರು ಅಂದಿನಿಂದ ಈವರೆಗೆ- ಇಷ್ಟು ವರ್ಷಗಳಕಾಲ - ಎಷ್ಟೊಂದು ವಿಚಿತ್ರವಾಗಿ ಸಾಗಿತ್ತು ಅವರ ಬದುಕು.

....ನೀರು ಮುಖದ ಮೇಲಿದ್ದಂತೆಯೆ ಸರಸಮ್ಮ ತಮ್ಮ ಕೊಠಡಿಗೆ

ಬಂದು ಟವೆಲಿನಿಂದ ಮುಖವೊರಸಿಕೊಂಡರು. ಹೆರಳು ಬಿಚ್ಚಿ ಬಿಗಿದು ಕೊಳ್ಳುತ್ತಾ ಬಾಗಿಲಬಳಿ ನಿಂತು, ಒಬ್ಬೊಬ್ಬರಾಗಿ ತಮ್ಮ ಕೆಲಸಕಾರ್ಯ ಗಳಿಗೆ ತೊಡಗುತಿದ್ದ ಹುಡುಗಿಯರನ್ನು ನೋಡಿದರು. ಒಬ್ಬೊಬ್ಬರದು ಒಂದೊಂದು ಗುಣ. ಅವರೆಲ್ಲರನ್ನೂ ಒಳ್ಳೆಯವರೆನ್ನುವುದು ಸಾಧ್ಯವಿತ್ತೆ? ಅವಕಾಶ ದೊರೆತರೆ ಬಾಗಿಲೊಡೆದು ಓಡಿಹೋಗುವುದಕ್ಕೂ ಸಿದ್ಧರಾಗಿದ್ದ ಕೆಲವರು ಅಲ್ಲಿದ್ದರು. ಎಂತಹ ನೀಚ ಕೃತ್ಯಕ್ಕೂ ಹೇಸದವರಿದ್ದರು. ಹೊಸಬರು ಬಂದಾಗ ಅವರ ಮೇಲೆ ಹಳಬರು ಒಳ್ಳೆಯ ಪರಿಣಾಮ ಮಾಡು ವುದರ ಬದಲು, ಹಳಬರನ್ನೇ ತಮ್ಮ ಕೆಟ್ಟ ಪ್ರಭಾವಕ್ಕೆ ಒಳಗು ಮಾಡುವ ಸಮರ್ಥೆಯರಿದ್ದರು. ಒಮ್ಮೊಮ್ಮೆ ಕಳೆಯೇ ಹೆಚ್ಚಾಗಿ ಬೆಳೆಯೆಲ್ಲ ನಾಶವಾಗು ವುದೇನೋ ಎಂದು ಸರಸಮ್ಮನಿಗೆ ಭಯವಾಗುತಿತ್ತು. ಆದರೆ ಜಲಜ ಲಲಿತೆ ಯರಂಥ ಸುಂದ್ರಾ ಸಾವಿತ್ರಿಯರಂಥ ಒಳ್ಳೆಯ ಹುಡುಗಿಯರನ್ನು ಕಂಡಾಗ, ಮಾನವತೆಯಲ್ಲಿ ಸರಸಮ್ಮನಿಗಿದ್ದ ವಿಶ್ವಾಸ ಸ್ಫುಟವಾಗುತಿತ್ತು – ತಿರುತಿರುಗಿ.

ಹೆರಳು ಹಾಕಿಕೊಂಡಾಗ ತಲೆಯಿಂದ ಬೇರ್ಪಟ್ಟು ಬಂದ ಕರಿಬಿಳಿಯ ಕೂದಲನ್ನೆಲ್ಲ ಮುದ್ದೆಯಾಗಿ ಮಾಡಿ ಸರಸಮ್ಮ, ಜಗಲಿಯ ಮೂಲೆಯಲ್ಲಿದ್ದ ಕಸದ ಬುಟ್ಟಿಗೆ ಹಾಕಿ ಬಂದರು. ಅಷ್ಟರಲ್ಲೇ ಜಲಜ - ಲಲಿತೆಯರ ದರ್ಶನ ವಾಯಿತು.

"ಎದ್ರೇನೇ ?"

ಅಪರಾಧಿನಿಯ ಸ್ವರದಲ್ಲಿ ಜಲಜ ಹೇಳಿದಳು :

"ಹತ್ತು, ಹನ್ನೊಂದು ಘಂಟೆವರೆಗೂ ಕೂತಿದ್ವಿ ದೊಡ್ಡಮ್ಮ. ಆಮೇಲೆ ನಿದ್ದೆ ಬಂದ್ಬಿಡ್ತು."

ಆಕೆಯ ಕಣ್ಣುಗಳಲ್ಲಿನ್ನೂ ಇತ್ತು ನಿದ್ದೆ. ಸರಸಮ್ಮ ನಸುನಕ್ಕರು.

ಲಲಿತಾ ಕೇಳಿದಳು :

"ದೀಪ ನೀವು ಆರಿಸಿದ್ರಾ ದೊಡ್ಡಮ್ಮ?"

"ಹೂನಮ್ಮಾ. ಈಗ ಆರಿಸ್ದೆ. ಬೆಳಗಾದ್ಮೇಲೆ."

"ಓ!" ಎಂದು ಉದ್ಗಾರವೆತ್ತಿದಳು ಜಲಜ.

"ತುಂಗ ಎದ್ದಿದಾಳಾ ?"

"ಇನ್ನೂ ಇಲ್ಲ, ದೊಡ್ಡಮ್ಮ."

“ ಪಾಪ, ಮಲಕ್ಕೊಳ್ಳಿ.”

“ಹಾಗಾದ್ರೆ ತುಂಗಕ್ಕನಿಗೆ ರಾತ್ರೆ ನೋವು ಬರ್ಲಿಲ್ಲ ಅಲ್ವೆ ದೊಡ್ಡಮ್ಮ?”

“ನೀವು ಅಲ್ಲೇ ಮಲಗಿದ್ದು, ನನ್ನ ಕೇಳ್ತೀರಲ್ಲೇ!....ಹೋಗಿ ಮುಖ ತೊಳ್ಕೊಳ್ಳಿ.... ಪ್ರಾರ್ಥನೆಗೆ ಹೊತ್ತಾಯ್ತು.”

ಆ ಇಬ್ಬರೂ ಕಟ್ಟಡದ ಮೂಲೆಗೆ ಹೋಗಿ ಕೊಳಾಯಿ ನೀರಿಗೆ ಕೈ ನೀಡಿದರು.

ಆ ಬಳಿಕ ದೇವರ ಪ್ರಾರ್ಥನೆ....

ಹಾಲಿನವನು ವರ್ತನೆಯ ಒಂದು ಸೇರು ಹಾಲು ಸುರಿದ. ಆದಿನ ತುಂಗಮ್ಮನಿಗಾಗಿ, ಮತ್ತೊಂದು ಪಾವು ಹೆಚ್ಚು ಕೇಳಿ ಹಾಕಿಸಿ ಕೊಂಡರು ದೊಡ್ಡಮ್ಮ.

“ ಇನ್ನು ಒಂದು ತಿಂಗಳವರೆಗೆ ಐದು ಪಾವು ಹಾಲು ಕೊಡಪ್ಪ.”

“ ಕೊಡ್ತೀನಮ್ಮ.”

“ ಒಂದು ಸೇರಿಗೇ ನೀರು ಸೇರಿಸ್ತೀಯೇನೊ!”

“ ಯಾಕ್ರಮಣ್ಣೀ....ಒಸಾ ಎಮ್ಮೆ ಮನ್ನೆಮನ್ನೆ ಕರಾ ಆಕಿದೇಂತ ಏಳಿಲ್ವಾ ಆವತ್ತೆ ?

ಹಾಲಿನವನದು ಎಮ್ಮೆ ಸಂಸಾರ. ಅದೇ ಅವನ ಪ್ರಪಂಚ....

ಸಾವಿತ್ರಿ ಹಾಲಿನ ಪಾತ್ರವನ್ನೆತ್ತಿ ಕೊಂಡೊಯ್ದ ಮೇಲೆ ಸರಸಮ್ಮ ಬಾಗಿಲು ಭದ್ರಪಡಿಸಿದರು.

....ತಮಗಾದರೋ ಈ ಸಂಸಾರ. ಇದೇ ತಮ್ಮ ಪ್ರಪಂಚ....

ತುಂಗಮ್ಮನಿಗೆ ಎಚ್ಚರವಾಯಿತು. ಆದರೆ ಮೈಕೈಯೆಲ್ಲಾ ನೋಯು ತಿದ್ದುದರಿಂದ ಏಳಲಾಗಲಿಲ್ಲ. ಜಲಜಳ ಚಾಪೆಯೋ ಸುರುಳಿ ಸುತ್ತಿ ಕೊಂಡಿತ್ತು. ಎಲ್ಲಿ ಹೋದಳೋ ಮಹಾರಾಯಿತಿ ? ತಾನು ಏಳುವ ಹಾಗಿಲ್ಲ. ಎದ್ದಿದ್ದರೆ, ಹೊರಗೆ ಹುಡುಗಿಯರೊಡನೆ ಬೆರೆಯ ಬಹುದಿತ್ತು.

ತನ್ನ ಗೆಳತಿಯರ ಬದಲು ದೊಡ್ಡಮ್ಮ ಒಳಬಂದರು.

ಆ ತಾಯಿಯ ವಾತ್ಸಲ್ಯದ ನಗುವಿನಲ್ಲಿ ಮೋಹಕ ಶಕ್ತಿ ಇತ್ತು. ಅವರು ಬಳಿ ಬಂದು ಕುಳಿತು, ತುಂಗಮ್ಮನೊಂದು ಕೈಯನ್ನು ತನ್ನ ಕೈಯಲ್ಲಿರಿಸಿ ಕೊಂಡು ಮೃದುವಾಗಿ ಅದುಮುತ್ತಾ, ಕೇಳಿದರು.

"ನಿದ್ದೆ ಚೆನ್ನಾಗಿ ಬಂತಾ ತುಂಗ?"

"ಹೂಂ ದೊಡ್ಡಮ್ಮ..."

"ಹಸಿವಾಗುತ್ತಾ?"

ಆ ಪ್ರಶ್ನೆ ಕೇಳಿದಮೇಲೆ ಹೊಟ್ಟೆ ತಾಳ ಹಾಕತೊಡಗಿತೋ ಏನೋ! ಹೌದೆಂದು ಆಕೆ ತಲೆಯ ಚಲನೆಯಿಂದಲೆ ಸೂಚನೆ ಕೊಟ್ಟಳು.

"ಮೊದಲು ಒಂದಿಷ್ಟು ಬಿಸೀ ಹಾಲು ಸಕ್ರೆ ಹಾಕಿ ತಂದ್ಕೊಡ್ತೀನಮ್ಮಾ ....ಅದಾದ್ಮೇಲೆ ಒಂದಿಷ್ಟು ಬಿಸಿ ಉಪ್ಪಿಟ್ಟು...."

ಆಗಬಹುದೆಂದು ತುಂಗಮ್ಮ ನಕ್ಕಳು.

ಉಳಿದವರ ಪಾಲಿಗೆ ಹಿಂದಿನಂತೆಯೆ ಒಂದಾಯಿತು ಆದಿನ.

ಆದರೆ ಮಧ್ಯಾಹ್ನ, ತುಂಗಮ್ಮನಿಗೆ ವಾಂತಿಯಾಯಿತು - ಕುಡಿದಿದ್ದ ಹಾಲು, ತಿಂದಿದ್ದ ಉಪ್ಪಿಟ್ಟು, ಎಲ್ಲವೂ.

ಆ ಬಳಿಕ ನೋವು ನರಳಾಟದ ಪುನರಾವೃತ್ತಿ. "ಇವತ್ತು ಖಂಡಿತ" ಎಂದು ತೋರಿತು ಸರಸಮ್ಮನಿಗೆ.

ಬಡಸಂಸಾರಗಳ ಡಾಕ್ಟರೊಬ್ಬರನ್ನು ಕರೆದು ತಂದುದಾಯಿತು. ಅವರ ವಿಸಿಟಿಂಗ್ ಫೀಸು ಸಾಮಾನ್ಯವಾಗಿ ಒಂದು ರೂಪಾಯಿ. ಆದರೆ ಅಭಯಧಾಮದಿಂದ ಅವರೆಂದೂ ಫೀಸು ತೆಗೆದುಕೊಳ್ಳುತ್ತಿರಲಿಲ್ಲ.

ತುಂಗಮ್ಮನ ನಾಡಿ ಮುಟ್ಟಿನೋಡಿ, ಶರೀರದ ಚಲನವಲನಗಳನ್ನು ನಿರೀಕ್ಷಿಸಿ, ಅವರೆಂದರು:

"ನಿಶ್ಚಿಂತೆಯಾಗಿರಿ. ವಿಶೇಷವೇನೂ ಇಲ್ಲ. ಬೇಕಿದ್ರೆ ಸಾಯಂಕಾಲ ಒಮ್ಮೆ ಲೇಡಿ ಡಾಕ್ಟ್ರು ಯಾರನ್ನಾದರೂ ಕರೆಸಿ."

ಅಂತಹ ಮಾತಿನಿಂದ ಅದೇನು ಸಮಾಧಾನವೊ!

ತುಂಗಮ್ಮನ ಪ್ರಾಣಸಂಕಟ ಹೆಚ್ಚಿತು.

ಅಭಯಧಾಮದ ಆಡಳಿತ ಸಮಿತಿಯ ಶ್ರೀಮಂತ ಸದಸ್ಯೆಯೊಬ್ಬರ ಸೋದರಿ ಪ್ರಖ್ಯಾತ ಲೇಡಿ ಡಾಕ್ಟರಾಗಿದ್ದರು. ಅವರನ್ನು ಕರೆಸುವುದು ಅವಶ್ಯವೆಂದು ಸರಸಮ್ಮನಿಗೆ ತೋರಿತು. ಹತ್ತಿರದ ಪೋಲೀಸು ಸ್ಟೇಷನಿಗೆ ಹೋಗಿ ಆಕೆ ಆ ಡಾಕ್ಟರಿಗೆ ಫೋನು ಮಾಡಿದರು. ಆಕೆ ಮನೆಯಲ್ಲೂ ಇರಲಿಲ್ಲ; ಔಷಧಾಲಯದಲ್ಲೂ ಇರಲಿಲ್ಲ....ರಾತ್ರೆ ಮತ್ತೆರಡು ಸಾರೆ ಫೋನ್ ಮಾಡಿ

ದುದೂ ವ್ಯರ್ಥವಾಯಿತು. "ಡಾಕ್ಟರಮ್ಮ ಸೀರಿಯಸ್ ಕೇಸು ನೋಡ್ಕೊಂಡು ಬರೋಕೆ ಹೋಗಿದಾರೆ," ಎಂದು ಉತ್ತರವಿತ್ತ ಮನೆಯ ಆಳು.

ಅಂಬ್ಯುಲೆನ್ಸ್ ಗಾಡಿ ತರಿಸಿ ಆಸ್ಪತ್ರೆಗೆ ಸೇರಿಸಿ ಬಿಡೋಣವೆ? ಎಂದು ತೋರಿತೊಮ್ಮೆ. ಆದರೆ ಆ ಅಪರಾತ್ರಿಯಲ್ಲಿ ಅಭಯಧಾಮದ ರೋಗಿಗೆ ಯೋಗ್ಯ ಚಿಕಿತ್ಸೆ ದೊರೆಯುವುದು ಸಾಧ್ಯವೇ ಇಲ್ಲವೆಂಬುದನ್ನು ಸರಸಮ್ಮ ಹಿಂದಿನ ಅನುಭವದಿಂದ ತಿಳಿದಿದ್ದರು.

ಹುಡುಗಿಯರಲ್ಲೆಷ್ಟೋ ಜನ ಆ ರಾತ್ರೆ ಬಹಳ ಹೊತ್ತು ನಿದ್ದೆ ಹೋಗ ಲಿಲ್ಲ. ಸರಸಮ್ಮ, ಜಲಜ - ಲಲಿತ - ಸಾವಿತ್ರಿಯರೊಡಗೂಡಿ ಕಣ್ಣಿಗೆ ಅಂಜನ ಹಾಕಿ ನಿಂತರು. ತಿಂಗಳ ಬೆಳಕು ಆ ರಾತ್ರೆಯೂ ಅಣಕಿಸುತ್ತ ನಗುತಿತ್ತು. ಆದರೆ ಯಾರೂ ಅದನ್ನು ಗಮನಿಸಲೇ ಇಲ್ಲ.

ರಾತ್ರೆ ಕಳೆದು ಬೆಳಕು ಬರುತಲಿದ್ದಂತೆ ಸರಸಮ್ಮ ಹೊರಬಂದು ಹೇಳಿದರು:

"ಜಲಜ - ಲಲಿತಾ, ಒಂದು ಕೆಲಸ ಮಾಡ್ತೀರೇನಮ್ಮ?"

"ಹೇಳಿ."

"ನೀವಿಬ್ರೂ ಈಗಿಂದೀಗ ನಮ್ಮ ಕಾರ್ಯದರ್ಶಿ ಮನೆಗೆ ಹೋಗ್ಬೇಕು. ಚೀಟಿಕೊಡ್ತೀನಿ. ಅವರ್ನ ಎಬ್ಬಿಸಿ ಆಕೆ ಕಾರ್ನಲ್ಲಿ ಲೇಡಿ ಡಾಕ್ಟರನ್ನೂ ಕರ ಕೊಂಡು ನೀವು ಬರ್ಬೇಕು."

"ಕೊಡಿ ಚೀಟಿ," ಎಂದಳು ಜಲಜ,

ಮಹಾಧೈರ್ಯವಂತೆ ಲಲಿತಾ, ಅಳುಮೋರೆಯಿಂದ ತುಂಗಮ್ಮನ ಕೊಠಡಿಯತ್ತ ನೋಡಿದಳು. ಆಕೆಯ ಕಣ್ಣಂಚಿನಲ್ಲಿ ನೀರು ತುಳುಕಾಡಿತು. ಅದನ್ನು ಜಲಜ ಕಂಡಳೋ ಇಲ್ಲವೋ, ಆಕೆ ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಥೂ," ಎಂದು ಸರಸಮ್ಮ, ಅವರಿಬ್ಬರನ್ನೂ ತಮ್ಮ ಕೊಠಡಿಗೆ ಕರೆದುಕೊಂಡು ಹೋದರು. "ಯಾಕೆ ಹೀಗ್ಮಾಡ್ತೀರಾ? ಏನಾಗಿದೇಂತ? ಅಳಬೇಡಿ! ತುಂಗಮ್ನಿಗೆ ಏನೂ ಕೆಡುಕಾಗೋಲ್ಲ. ದೇವರಿದ್ದಾನೆ.... ಕೇಳಿಸ್ತೇನ್ರೀ?"

ಅವರು, ಅಭಯಧಾಮ ಸಮಿತಿಯ ಕಾರ್ಯದರ್ಶಿನಿಗೆ ಚೀಟಿಬರೆದು, ಹುಡುಗಿಯರನ್ನು ಕಳುಹಿದರು.

ಏಳು ಘಂಟೆಯ ಹೊತ್ತಿಗೆಲ್ಲಾ ಹಾರ್ನ್ ಮಾಡುತ್ತಲೇ ಕಾರು ಬಂತು.

“ನೆನ್ನೇನೇ ಯಾಕೆ ತಿಳಿಸ್ಲಿಲ್ಲ ?” ಎನ್ನುತ್ತಲೇ ಕಾರ್ಯದರ್ಶಿನಿಯೂ ಲೇಡಿ ಡಾಕ್ಟರೂ ಆಕೆಯ ನರ್ಸೂ ಜಲಜ - ಲಲಿತೆಯರೂ ಒಳಬಂದರು. ಹಿಂದಿನ ಸಂಜೆರಾತ್ರಿಯೆಲ್ಲ ಡಾಕ್ಟರನ್ನು ಕರೆಯಲು ತಾವು ಮಾಡಿದ್ದ ಯತ್ನವನ್ನು ಸರಸಮ್ಮ ವಿವರಿಸ ಹೋಗಲಿಲ್ಲ.

ಉಸಿರಿಗಾಗಿ ಉಬ್ಬಸಪಡುತ್ತ ನರಳುತ್ತ ಇದ್ದ ತುಂಗಮ್ಮ. ಕಾರ್ಯೋನ್ಮುಖರಾದ ಡಾಕ್ಟರು, ನೆರವಿಗೆ ನಿಂತ ನರ್ಸು - ಈ ಮೂವರನ್ನು ಒಳಗಿಟ್ಟುಕೊಂಡು, ಕೊಠಡಿಯ ಬಾಗಿಲು ಮುಚ್ಚಿಕೊಂಡಿತು.

ಇಪ್ಪತ್ತು ನಿಮಿಷಗಳ ಮೇಲೆ ಆ ಲೇಡಿ ಡಾಕ್ಟರು ಹೊರಬಂದರು, ಅಲ್ಲಿ ಮುಳ್ಳಿನಮೇಲೆ ನಿಂತಿದ್ದ ಗಂಡನಿರಲಿಲ್ಲ. ಎಂಥ ಮಗುವೆಂದು ತಿಳಿಯಲು ಆತುರ ಪಡುತಿದ್ದ ಸಂಬಂಧಿಕರಿರಲಿಲ್ಲ. ಆದರೂ ಎಷ್ಟೊಂದು ಜನರಿದ್ದರು ಅಲ್ಲಿ! ಕಂಬಗಳಾಗಿದ್ದರು ಕೆಲವು ಹುಡುಗಿಯರು. ಕುಳಿತಲ್ಲೆ ನಿಂತಲ್ಲೆ ನಿಶ್ಚಲವಾದ ವಿಗ್ರಹಗಳಾಗಿದ್ದರು ಕೆಲವರು. ಮೂಗಿ ಕಲ್ಯಾಣಿ ಎಲ್ಲರಿಗಿಂತಲೂ ದೂರ ಮೂಲೆಯಲ್ಲಿ ಮೌನವಾಗಿದ್ದಳು. ಕುರುಡಿ ಸುಂದ್ರಾಳ ಕಣ್ಣುಗಳು ಮಾತನಾಡುತಿದ್ದುವು. ಆ ಘಳಿಗೆಯಲ್ಲಿ ಎಷ್ಟೊಂದು ಜನ ಸಂಬಂಧಿಕರು ಒಳಗಿದ್ದ ಒಂದು ಜೀವಕ್ಕೆ! ಆ ಲೇಡಿ ಡಾಕ್ಟರು ಒಂದು ಮಾತು ಹೇಳಿದರೆ ಸಾಕು, ಅವರೆಲ್ಲ ಗೋಳೋ ಎಂದು ಅಳುವುದಕ್ಕೂ ಸಿದ್ಧ; ಓಹೋ ಎಂದು ನಗುವುದಕ್ಕೂ ಸಿದ್ಧ.

ಆದರೆ ಆ ಡಾಕ್ಟರರು ಏನನ್ನೂ ಅನ್ನಲಿಲ್ಲ. ಕೈ ಸನ್ನೆಯಿಂದಲೆ ಸರಸಮ್ಮನನ್ನೂ ಕಾರ್ಯದರ್ಶಿನಿಯನ್ನೂ ಕರೆದುಕೊಂಡು ಪಕ್ಕದ ಕೊಠಡಿಗೆ ಹೋದರು. ಅಲ್ಲಿ ಒಂದು ನಿಮಿಷ - ಅಲ್ಲಿ ಒಂದು ಯುಗ ಮಾತುಕತೆ.

ಮತ್ತೊಮ್ಮೆ ತುಂಗಮ್ಮನ ಕೊಠಡಿಯ ಬಾಗಿಲು, ಡಾಕ್ಟರನ್ನು ಬರಗೊಟ್ಟು, ಮುಚ್ಚಿಕೊಂಡಿತು.

ಅನಂತ ಕಾಲದಂತೆ ಕಂಡ ಅನಂತರದ ಹದಿನೈದು - ಇಪ್ಪತ್ತು - ಇಪ್ಪತ್ತೈದು ನಿಮಿಷ....

ಡಾಕ್ಟರು ಬಾಗಿಲು ತೆರೆದು ಸರಸಮ್ಮನನ್ನು ಒಳಗೆ ಕರೆದರು.

ಎರಡು ನಿಮಿಷಗಳಲ್ಲಿ ಹೊರಬಂದರು ಹುಡುಗಿಯರ ದೊಡ್ಡಮ್ಮ. ಗುರುತುಸಿಗದಷ್ಟು ವಿರೂಪವಾಗಿತ್ತು ಅವರ ಮುಖ. ಆ ಸ್ವರವೊ!

“ಹೋಗ್ರೇ! ಯಾಕ್ನಿಂತಿದೀರಾ ಇಲ್ಲಿ? ಎಲ್ರೂ ಹೋಗಿ! ಹೋಗಿ! ನಿಮ್ಮನ್ನ ಕೆಲ್ಸ ನೋಡಿ!”

ಆಕೆ ಎರಡೂ ಕೈಗಳನ್ನು ಹುಚ್ಚರ ಹಾಗೆ ಬೀಸುತಿದ್ದರು.

ಜಲಜ ಮತ್ತು ಲಲಿತಾ ದೊಡ್ಡಮ್ಮನನ್ನು ಹಿಡಿದು ಕೊಂಡು ಆಫೀಸು ಕೊಠಡಿಗೆ ಬಂದರು.

“ಹೇಳಿ ದೊಡ್ಡಮ್ಮ! ಏನಾಯ್ತು ದೊಡ್ಡಮ್ಮ?”

ಬೇರೆ ಯಾರದೋ ಸ್ವರದಂತೆ ಅವರ ಮಾತು ಕೇಳಿಸಿತು:

“ಮಗು ಸತ್ತಿದೆ. ತುಂಗ ಬದ್ಕಿದಾಳೆ.”

೯

ಅರೆತೆರೆದ 'ಕೊರವಂಜಿ' ಪತ್ರಿಕೆಯನ್ನು ಹಾಗೆಯೇ ಮುಗುಚಿಟ್ಟು, ತಾನು ಓದಿದುದನ್ನು ನೆನೆಸಿಕೊಂಡು ನಗುತ್ತಾ, ತುಂಗಮ್ಮ ಇನ್ನೊಂದು ಪಕ್ಕಕ್ಕೆ ಹೊರಳಿದಳು. ಎಡಗೈಯ ಬೆರಳುಗಳು ತಲೆದಿಂಬನ್ನು ಮುಟ್ಟಿ, ಕೆಳಕ್ಕೆ ಹಾಸಿಗೆಯತ್ತ ಜಾರಿದುವು. ಅಲ್ಲಿ, ಮಡಚಿ ಇಟ್ಟಿದ್ದ ಕಾಗದ ಕೈಗೆ ತಗಲಿತು.

ಅದು ತುಂಗಮ್ಮನ ತಂದೆ ಬರೆದಿದ್ದ ಕಾಗದ.

ತಾನು ಬದುಕಿ ಉಳಿದ ಮರುದಿನವೇ ಸರಸಮ್ಮನನ್ನು ಆಕೆ ಕೇಳಿದ್ದಳು:

"ನಮ್ಮ ತಂದೆ ಉತ್ತರ ಬರ್ದೇ ಇಲ್ವೆ ದೊಡ್ಡಮ್ಮ?"

ಆಗ ಉತ್ತರ ಬಂದಿತ್ತು:

"ಹೇಳೋಕೆ ಮರ್ತೇ ಬಿಟ್ಟೆ ತುಂಗ. ಮೊನ್ನೇನೆ ಬಂತು. ಅವರು, ನಿನ್ತಮ್ಮ, ಬೆಳಗಾಂವಿಯ ನಿಮ್ಮಕ್ಕ-ಮಕ್ಕಳು ಎಲ್ಲರೂ ಚೆನ್ನಾಗಿದಾರಂತೆ."

"ಓ! ಬೇರೇನು ಬರ್ದಿದಾರೆ?"

"ಆದಷ್ಟು ಬೇಗನೆ ಬಂದು ನಿನ್ನ ನೋಡ್ತಾರಂತೆ"

ತಾನು ಸತ್ತೇ ಹೋಗಿದ್ದರೆ ತಂದೆ ಬಂದು ನೋಡುವ ಮಾತೇ ಇರುತ್ತಿರಲಿಲ್ಲ. ಆದರೆ ಈಗ ಆಕೆ ಬದುಕಿದ್ದಳು, ಒಬ್ಬಳೇ....

ಸರಸಮ್ಮನ ಮಾತು ಕೇಳಿ ತುಂಗಮ್ಮ ಉದ್ಗಾರವೆತ್ತಿದ್ದಳು:

"ಅಣ್ಣ ಕೋಪಿಸ್ಕೊಂಡಿಲ್ಲ ಹಾಗಾದರೆ!"

"ಹುಚ್ಚಿ! ಯಾಕಮ್ಮ ಕೋಪಿಸ್ಕೋತಾರೆ?"

"ಆದರೂ ನಿಮಗೊಬ್ಬರಿಗೇ ಬರ್ದಿದಾರೆ. ನಂಗ್ಬರ್ದೇ ಇಲ್ಲ-ಅಲ್ವೆ ದೊಡ್ಡಮ್ಮ?"

"ಹೂಂ."

ತಂದೆಯನ್ನೂ ತಮ್ಮನನ್ನೂ ನೋಡುವ ಆಸೆಯಾಯಿತು ತುಂಗಮ್ಮ ನಿಗೆ. ಮತ್ತೊಮ್ಮೆ ತಂದೆ, ಪ್ರೀತಿಯಿಂದ ವೈದಡವಿ ಮುಗುಳುನಕ್ಕು "ಮಗಳೇ" ಎನ್ನುವುದು ಸಾಧ್ಯವಾದರೆ?....

ಅದಾದ ಹತ್ತು ದಿನಗಳ ಬಳಿಕ ಸರಸಮ್ಮ ಒಂದು ಕಾಗದವನ್ನು ತುಂಗಮ್ಮನಿಗೆ ತಂದು ಕೊಟ್ಟರು.

ಕೊಡುತ್ತ ಅವರೆಂದರು :

"ನಿಮ್ತಂದೆ ಕಾಗದ ತುಂಗ."

"ನಂಗ್ಬರ್ದಿದಾರಾ ?"

"ಹೂಂ."

ಕಾಗದವನ್ನು ಬಿಡಿಸುತ್ತ ತುಂಗಮ್ಮ ಕೇಳಿದಳು :

"ಇವತ್ಬಂತೆ ದೊಡ್ಡಮ್ಮ?"

"ಇಲ್ಲ ತುಂಗ. ಆವತ್ತೆ ಬಂತು. ನಿಂಗೆ ಹುಷಾರಾಗ್ಲೀಂತ ಹಾಗೆಯೇ ಇಟ್ಟಿದ್ದೆ."

ತಮಗೆ ಇಷ್ಟವಿಲ್ಲದುದನ್ನೇನೊ ಹೇಳುವಹಾಗೆ ವಿಷಾದದ ಛಾಯೆ ಇತ್ತು ಆ ಸ್ವರದಲ್ಲಿ.

"ಓ!" ಎಂದು ತುಂಗಮ್ಮ ಸುಮ್ಮನಾದಳು. ಕಾಗದ ತೆರೆಯು ವುದು ಕ್ಷಣಕಾಲ ತಡವಾಯಿತು.

ಆ ಕಾಗದದ ಆತ್ಮೀಯ ಲೋಕದಲ್ಲಿ ತುಂಗಮ್ಮಳೊಬ್ಬಳನ್ನೇ ಬಿಟ್ಟು ಸರಸಮ್ಮ ಕೊಠಡಿಯಿಂದ ಹೊರಹೋದರು.

ತಂದೆ ತನಗೆ ಬರೆದಿದ್ದ ಕಾಗದ-ಕಳೆದ ಐದು ತಿಂಗಳ ಅವಧಿಯಲ್ಲಿ ಬೆಂಗಳೂರಿಗೆ ತನಗೆ ಬರೆದಿದ್ದ ಮೂರನೆಯ ಕಾಗದ....

'ತುಮಕೂರು'--ಎಷ್ಟು ಪ್ರಿಯವಾದ ಹೆಸರು!--ಆ ಬಳಿಕ ದಿನಾಂಕ....

'ಚಿರಂಜೀವಿ ಸೌ. ತುಂಗಮ್ಮನಿಗೆ—

ಮಾಡುವ ಆಶೀರ್ವಾದಗಳು....'

ಹಿಂದಿನದೇ ಸಂಬೋಧನೆ. ಅದರಲ್ಲಿ ಬದಲಾವಣೆ ಇರಲಿಲ್ಲ.

ದೊಡ್ಡಮ್ಮ ಈಗಾಗಲೇ ತನಗೆ ತಿಳಿಸಿದ್ದ ಮಾತುಗಳು. ಬಳಿಕ....

'ದುಃಖಪಡಬೇಡ ತುಂಗ. ನೀನು ದೊಡ್ಡಮ್ಮ ಎಂದು ಕರೆಯುವ ಮಹಾತಾಯಿ ಯಾರೋ ನನಗೆ ತಿಳಿಯದು. ದೇವರು ಅವರಿಗೆ ಒಳ್ಳೇದುಂಟುಮಾಡಲಿ. ನೀನು ಮನೆ ಬಿಟ್ಟು ಹೋದೆ ಅಂತ ರಾಮಚಂದ್ರಯ್ಯನ ಕಾಗದವೂ ಮೇಟ್ರನ್ ಅವರು ಕಳುಹಿಸಿದ ನಿನ್ನ ಕಾಗದವೂ ಒಂದೇದಿನ ಬಂದುವು. ನೀನು ದುಡುಕಬೇಕಾಗಿರಲಿಲ್ಲ. ಬರೆದು ತಿಳಿಸಿದ್ದರೆ ನಾನೇ ಬರುತ್ತಿರಲಿಲ್ಲವೆ? ನಾನಿನ್ನೂ ಇದೀನಲ್ಲವೆ? ಆದರೂ ನೀನು ಮಾಡಿರುವುದೇನೊ ಸರಿಯಾದ ಕೆಲಸವೇ. ನನಗೇ ಒಮ್ಮೆ ಆ ಯೋಚನೆ ಬಂದಿತ್ತು. ಆದರೂ, ಏನೋ ಎತ್ತವೋ ಅಂತ ಸುಮ್ಮನಿದ್ದೆ. ನೀನು ಯಾವುದಕ್ಕೂ ಹೆದರಬೇಡ. ನಾನು ಈಗಲೇ ಬಂದು ನೋಡಬಹುದು. ನೋಡಿದರೂ ಪ್ರಯೋಜನವೇನು? ಆದ್ದರಿಂದ ವರ್ಷಾಂತ್ಯದ ಪರೀಕ್ಷೆ ಮುಗಿದಕೂಡಲೆ ಹೊರಡುತ್ತೇನೆ. ಈ ಸಲ ನನಗೆ ರಿಟೈರೂ ಆಗುತ್ತದಲ್ಲ? ಘಾಬರಿಯಾಗುವುದು ಬೇಡವೆಂದೂ ನಿನ್ನ ಕಾಗದ ಬಂದಿದೆಯೆಂದೂ ರಾಮಚಂದ್ರಯ್ಯನಿಗೆ ಇವತ್ತೇ ಬರೆಯುತ್ತೇನೆ....ನೀನು ದೊಡ್ಡಮ್ಮ ಎಂದು ಕರೆಯುವ ಮೇಟ್ರನ್‌ರವರಿಗೂ ಬರೆದಿದ್ದೇನೆ. ಅವರು ನಿನ್ನನ್ನು ನೋಡಿಕೊಳ್ಳುತ್ತಾರೆಂದು ನನಗೆ ನಂಬಿಕೆ ಇದೆ....ಇನ್ನು ಹೆಚ್ಚೇನನ್ನು ಬರೆಯಲಿ?'

ಹೆಚ್ಚೇನನ್ನೂ ಬರೆಯದೆ ಅವರು ಕೊನೆಯದಾಗಿ ಹೇಳಿದ್ದರು:

'ನಿನ್ನ ಆರೋಗ್ಯದ ವಿಷಯ ನೋಡಿಕೋ. ದೇಹಪ್ರಕೃತಿ ವಿಚಾರದಲ್ಲಿ ಸೂಕ್ಷ್ಮವಾಗಿರಬೇಕು.'

ತನ್ನ ಆರೋಗ್ಯ, ದೇಹಪ್ರಕೃತಿ....

ಕಾಗದವನ್ನೋದಿ, ಅಲ್ಲೆ ಅದನ್ನು ಇಳಿಬಿಟ್ಟು, ದಿಂಬಿನಲ್ಲಿ ಮುಖ ಮರೆಸಿಕೊಂಡು ತುಂಗಮ್ಮ ಅತ್ತಳು.

ಬಳಿಕ ಕಾಗದ, ಮಡಚಿಕೊಂಡು ದಿಂಬಿನ ಕೆಳಗೆ ಆತ್ಮೀಯವಾಗಿ ಕುಳಿತಿತು.

ಆದರೆ ತುಂಗಮ್ಮ, ಮನಸ್ಸು ಬಯಸಿದಾಗಲೆಲ್ಲ ಮತ್ತೆ ಮತ್ತೆ ಅದನ್ನೆತ್ತಿಕೊಂಡು ಓದಿದಳು.

ತಂದೆಯ ಕಾಗದ ಕೈಸೇರಿ ಐದು ದಿನಗಳಾಗಿದ್ದುವು ನಿಜ. ಆದರೂ,

'ಕೊರವಂಜಿ'ಯನ್ನೋದಿ ನಗೆಯುಲೋಕದಲ್ಲಿ ವಿಹರಿಸುತಿದ್ದ ತುಂಗಮ್ಮನ ಕೈ ಬೆರಳಿಗೆ ಆ ಕಾಗದ ಸೋಂಕಿದೊಡನೆ, ಕಾಗದದಲ್ಲಿದ್ದ ಒಂದೊಂದು ಮಾತೂ ಜೀವಂತವಾಗಿ ಕೇಳಿಸತೊಡಗಿತು.

'ವರ್ಷಾಂತ್ಯದ ಪರೀಕ್ಷೆ ಮುಗಿದ ಕೂಡಲೆ ಹೊರಡುತ್ತೇನೆ.'

ಪರೀಕ್ಷೆ ಆರಂಭವಾಗಿ ನಾಲ್ಕು ದಿನಗಳಾಗಿದ್ದುವು ಆಗಲೆ. ತಂದೆಯನ್ನು ತಾನಿನ್ನು ಬೇಗನೆ ನೋಡಬಹುದು ಹಾಗಾದರೆ.

'ಈ ಸಲ ನನಗೆ ರಿಟೈರೂ ಆಗುತ್ತದಲ್ಲ—'

ಉದ್ಯೋಗದಿಂದ ನಿವೃತ್ತನಾಗುವ ತಂದೆ....ತನ್ನ ತಂದೆಯ ತಾಯ್ತಂದೆಯರಿದ್ದ ಊರು ತುಮಕೂರು. ಅದು ಹಿಂದಿನ ಕಥೆ. ವಿದ್ಯಾವಂತರಾಗಿ ತನ್ನ ತಂದೆ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡರು. ಮದುವೆಗೆ ಮುಂಚೆಯೂ ಮದುವೆಯ ಅನಂತರವೂ ಊರಿಂದ ಊರಿಗೆ ವರ್ಗವಾಗುತ್ತಾ ತನ್ನ ದೇಶದ ಒಂದು ಭಾಗವನ್ನೆಲ್ಲ ಅವರು ನೋಡಿದ್ದರೂ ತುಮಕೂರನ್ನು ಬಿಟ್ಟು ಹೋಗಲಿಲ್ಲ. ಅಲ್ಲಿದ್ದುದು ಬಾಡಿಗೆ ಮನೆ ನಿಜ. ಒಂದು ಕಾಲದಲ್ಲಿ ಎಂಟು ರೂಪಾಯಿಯಾಗಿದ್ದುದು ಈಗ ಹದಿನೇಳಾಗಿತ್ತು. ಆದರೂ ಆ ಪುಟ್ಟ ಮನೆಯನ್ನು ಅವರು ಬಿಟ್ಟಿರಲಿಲ್ಲ....ತುಂಗಮ್ಮ ಅಲ್ಲಿಯೇ ಹುಟ್ಟಿದ್ದಳು. ಬೇರೆ ಕಡೆ ಬೆಳೆದರೂ ಆರುವರ್ಷಗಳ ಮೇಲೆ, ಮನೆಗೊಂದು ಗಂಡುಕೂಸು ತಮ್ಮನಾಗಿ ಬಂದಮೇಲೆ, ತುಮಕೂರಲ್ಲೆ ತುಂಗಮ್ಮ ಉಳಿದಳು. ಕೆಲವು ವರ್ಷಗಳ ಮೇಲೆ ತಂದೆ ವಿಧುರನಾದುದು ಆ ಬಳಿಕ.... ಅಕ್ಕನ ಮದುವೆ....ತಾನು....ಇನ್ನು ವಯಸ್ಸಾದ ತನ್ನ ತಂದೆ ನಿವೃತ್ತ ಉಪಾಧ್ಯಾಯರು....

ತನ್ನಿಂದಾಗಿ ಇಳಿವಯಸ್ಸಿನಲ್ಲಿ ತಂದೆಯ ಮಾನಸಿಕ ಚಿಂತೆ ಹೆಚ್ಚುವಂತಾಯಿತು.

ತಮ್ಮ ಪಾಸಾಗುತ್ತಾನೆ ಈ ವರ್ಷವೂ. ಉಪಾಧ್ಯಾಯರ ಮಕ್ಕಳು ತೇರ್ಗಡೆಯಾಗದೆ ಇರುವುದೆಂದೇ ಇಲ್ಲ....ತುಂಗಮ್ಮ ಪುಸ್ತಕಗಳಲ್ಲಿ ಓದಿದ್ದಳು: ಗಂಡುಮಗ ಯಾವಾಗಲೂ ವಂಶೋದ್ಧಾರಕ....ಪುತ್ರಸಂತಾನವಿಲ್ಲದ ಮನೆ ಬೆಳಗುವುದಿಲ್ಲ....ತನ್ನಿಂದ ಕೆಟ್ಟ ಹೆಸರು ಬಂತು ವಂಶಕ್ಕೆ. ಇನ್ನು ತಮ್ಮ ದೊಡ್ಡವನಾಗಿ ಒಳ್ಳೆಯ ಹೆಸರು ಬರಬೇಕು. ಆದರೆ ಊರೆಲ್ಲ

ಪ್ರಸಾರವಾಯಿತೆಂದರೆ, ತಮ್ಮನ ಒಳ್ಳೆಯ ಹೆಸರಿಗೂ ತನ್ನ ಬದುಕಿನ ಕೆಟ್ಟ ವಾಸನೆ ಅಂಟಿಕೊಳ್ಳುವುದು....

ತನ್ನನ್ನು ಮರೆತು, ತಮ್ಮನನ್ನೇ ಕುರಿತು ಯೋಚಿಸತೊಡಗಿದಳು ತುಂಗಮ್ಮ. ಆ ತಮ್ಮ ಬಲು ಮುದ್ದು. ಮಗುವಾಗಿದ್ದಾಗಿನಿಂದಲೂ ಅಷ್ಟೆ. ತನಗೆ ಆತ ಆಟದ ಬೊಂಬೆ. ಆತನಿಗೆ ತಾನು ಬೇಕು. ಹಿರಿಯಕ್ಕನಿಗಿಂತಲೂ ತನ್ನಲ್ಲೇ ಆತನಿಗೆ ಪ್ರೀತಿ ಜಾಸ್ತಿ....ನಾರಾಯಣ ಮೂರ್ತಿಯ ಪ್ರಕರಣ....ತಮ್ಮನಿಗೆಷ್ಟು ತಿಳಿಯಿತೊ?....ಕಾಗದಗಳನ್ನೇನಾದರೂ ಕದ್ದು ಓದಿ ಅರ್ಥಮಾಡಿಕೊಂಡಿರುವನೋ ಏನೋ....

ಮತ್ತೆ ಅದೇ ವಿಷಯ. ಅದನ್ನು ಬಿಟ್ಟು, ತಮ್ಮನ ಭವಿತವ್ಯವನ್ನು ಚಿತ್ರಿಸಿಕೊಳ್ಳತೊಡಗಿದಳು ತುಂಗಮ್ಮ...ಇನ್ನು ಮೂರು ವರ್ಷಗಳಲ್ಲಿ ಹೈಸ್ಕೂಲು ಮುಗಿಯುವುದು—ಆ ಬಳಿಕ ಕಾಲೇಜು....ಉದ್ಯೋಗ....ಮದುವೆ.

ಈ ಮದುವೆಯ ಮಾತು....

ಇಲ್ಲ, ಆ ಯೋಚನೆಗಳಿಂದ ವಿಮೋಚನೆಯೇ ಇರಲಿಲ್ಲ. ಎಷ್ಟು ಬದಿಗೆ ಸರಿಸಿದರೂ ಸಮಯ ಕಾಯುತಿದ್ದು ಗಕ್ಕನೆ ಧುಮುಕಿ ಬಿಡುತಿದ್ದುವು.

ತುಂಗಮ್ಮ ಮಗ್ಗುಲು ಬದಲಿಸಿದಳು....ಆ ಪತ್ರಿಕೆ. ತಮಾಷೆಯಾಗಿತ್ತು ಹೊದಿಕೆಯ ಮೇಲಿನ 'ಕೊರವಂಜಿ' ಚಿತ್ರ. ಕೈಯಲ್ಲೊಂದು ಮಗುವನ್ನು ಹಿಡಿದಿದ್ದಳು ಆ ಕೊರವಂಜಿ—ಮಗುವಿನ ಬೊಂಬೆ.

ಮತ್ತೆ ಬಾಣಂತಿತನದ ನೆನಪು.

ಜಲಜ ಸೂಕ್ಷ್ಮವಾಗಿ ಎರಡು ದಿನಗಳಿಗೆ ಹಿಂದೆಯಷ್ಟೇ ಅಂದಿದ್ದಳು:

"ಆ ವಿಷಯವೆಲ್ಲಾ ಈಗ ನೀನು ಯೋಚಿಸ್ಕೂಡದ್ದಕ್ಕ...."

"ಯಾಕೆ?"

"ಮುಖ್ಯ ನಿನ್ನ ಆರೋಗ್ಯ ನೋಡ್ಕೋಬೇಕು...."

ಆದರೂ ಆಕೆಗೆ ಸ್ವಲ್ಪ ವಿಷಯ ತಿಳಿದಿತ್ತು....ಲೇಡಿ ಡಾಕ್ಟರು ಬಂದುದು ನರ್ಸ್ ತನ್ನ ಮೂಗಿಗೇನೋ ಹಿಡಿದುದು. ಗುಂಯ್ ಗುಂಯ್ ಎಂದು ಯಾವುದೋ ಆಳಕ್ಕೆ ತಾನು ಕ್ರಮಕ್ರಮವಾಗಿ, ಆದರೆ ವೇಗವಾಗಿಯೇ, ಇಳಿದುದು. ಅದು ಪ್ರಜ್ಞೆ ತಪ್ಪಿದಸ್ಥಿತಿ....ಅನಂತರ....ಅಯ್ಯೋ, ಅವರೇನೋ ಮಾಡಿರಬೇಕು....ಸತ್ತು ಹುಟ್ಟಿದ ಕೂಸು....

ಕಣ್ಣುಗಳು ಜಡವಾದುವು. ದಿಂಬಿಗೆ ಬಲವಾಗಿ ಒತ್ತಿಕೊಂಡು ತುಂಗಮ್ಮ ಮಲಗಿದಳು....ಹಾಗೆಯೇ ಕೆಲವು ನಿಮಿಷ....

ಬಾಗಿಲ ಬಳಿ ಕಾಲ ಸಪ್ಪಳವಾಯಿತು. ಅಲ್ಲಿ ನಿಂತುವು ಎರಡು ಪಾದಗಳು. ಅವುಗಳ ಮೇಲೆ ಮಾಸಿದ ಸೀರೆಯಂಚು. ಅಷ್ಟನ್ನು ನೋಡಿಯೇ ಜಲಜ ಬಂದಳೆಂದು ತಿಳಿದುಕೊಂಡಳು ತುಂಗಮ್ಮ.

"ನಿದ್ದೆ ಮಾಡ್ತಿದೀಯಾ ಅಕ್ಕ ?"

"ಇಲ್ಲ ಬಾರೇ."

ಜಲಜ ಬಂದು ತುಂಗಮ್ಮನ ಬಳಿಯಲ್ಲಿ ಕುಳಿತಳು. ಆಕೆಯ ದೃಷ್ಟಿಗೆ 'ಕೊರವಂಜಿ' ಪತ್ರಿಕೆ ಬಿತ್ತು.

"ಇದರೊಳಗಿನ ಕತೆ ಚೆನ್ನಾಗಿದ್ಯಾ ಅಕ್ಕ ?"

"ಹುಂ. ತಮಾಷೆಯಾಗಿದೆ."

"ಮೇಲಿರೋ ಬೊಂಬೆ ? ನೋಡಿದ್ರೇ ನಗು ಬರುತ್ತೆ !"

"ಹುಂ...."

....ಅವರು ತನ್ನಿಂದ ಬಚ್ಚಿಡುವುದರಲ್ಲಿ ಅರ್ಥವಿರಲಿಲ್ಲ. ತಾನೂ ಮನುಷ್ಯಳಲ್ಲವೆ ? ತಾಯಿಯಲ್ಲವೆ ? ತಿಳಿಯುವ ಅಧಿಕಾರ ತನಗಿಲ್ಲವೆ ?

"ಜಲಜಾ-"

"ಏನಕ್ಕ ?"

"ನಿನ್ನ ಒಂದು ವಿಷಯ ಕೇಳ್ತೀನಿ."

ಜಲಜೆಗೆ ಅರ್ಥವಾಗದಿರಲಿಲ್ಲ.

"ಆ ಒಂದು ವಿಷಯ ಬಿಟ್ಬಿಟ್ಟು ಬೇರೇನು ಬೇಕಾದ್ರೂ ಕೇಳಕ್ಕ."

"ಏನು ? ಯಾಕೆ ?"

"ದೊಡ್ಡಮ್ಮಾ ಆ ವಿಷಯ ಸುಮ್ಸುಮ್ನೆ ಮಾತಾಡ್ಕೂಡ್ದು ಅಂದಿದಾರೆ. ನೀನು ಹುಷಾರಾಗಿ ಎದ್ದು ಓಡಾಡೋವರ್ಗೂ—"

"ಹುಷಾರಾಗಿದೀನಲ್ಲ ಜಲಜ."

"ಉಹುಂ. ಇಷ್ಟು ಸಾಲ್ದು."

"ನಂಗೆ ಹಿಂಸೆಯಾಗುತ್ತಮ್ಮ. ನಾನು ಅನುಭವಿಸಿದ್ದನ್ನೇ ನನ್ನಿಂದ ಯಾಕೆ ನೀವೆಲ್ಲ ಮುಚ್ಚುಮರೆ ಮಾಡ್ತೀರಾ ?"

"ದೊಡ್ಡಮ್ಮ ಏನೂ ಹೇಳ್ಲಿಲ್ವೆ ಹಾಗಾದರೆ ?"

"ಹೇಳಿದ್ರು-ನಿಂಗೆ ಭಾಗ್ಯವಿಲ್ಲ ತುಂಗಾ ಅಂತ. ನಾಲ್ಕು ದಿನ ಬಿಟ್ಟು, ನಾನು ಅಳ್ತಾ ಇದ್ದಿದ್ದನ್ನ ನೋಡಿ, ಮತ್ತೊಮ್ಮೆ ಅಂದ್ರು-ಹೆಣ್ಣು ಮಗು. ಮುದ್ಮುದ್ದಾಗಿತ್ತು. ದೇವರು ಕರಕೊಂಡಾ ಅಂತ...."

"ಹೌದಕ್ಕ....ಮುದ್ದುಮುದ್ದಾಗಿತ್ತು. ನಮ್ಮಲ್ಲಿ ಮಗೂನ ನೋಡಿ ರೋರು ನಾವು ನಾಲ್ಕೇ ಜನ,—ದೊಡ್ಡಮ್ಮ, ಲಲಿತಾ, ಸಾವಿತ್ರಿ, ನಾನು. ಮುಖ್ಯ ಆ ಮಗೂನ ಆಡಿಸೋ ಭಾಗ್ಯ ನಂಗಿರಲಿಲ್ಲ. ಮಣ್ಣುಮಾಡೋಕೆ ನಾವು ಹೋದಾಗ ದೊಡ್ಡಮ್ನೇ ಎತ್ಕೊಂಡಿದ್ರು ಅದನ್ನ."

ಎಂತಹ ಕಟುಕಳು ಈ ಜಲಜ! ಹೃದಯಹೀನಳು! ತನ್ನ ಮಗು ವನ್ನು ಕುರಿತು ಹಾಗೆಲ್ಲ ಅನ್ನುವುದೆ ?

"ಸಾಕು ! ಸಾಕು !"

ತುಂಗಮ್ಮನ ಗಟ್ಟಿಯಾದ ಆ ಸ್ವರ ಕೇಳಿ ಜಲಜೆಗೆ ದಿಗ್ಭ್ರಮೆಯಾ ಯಿತು. ಬಲವಾದ ತೆರೆಯಂತೆ ಆ ಮಾತು ಆಡಿದವಳ ಹೃದಯದ ದಂಡೆಗೇ ಅಪ್ಪಳಿಸಿ ಒಮ್ಮೆಲೆ ಚೂರಾಗಿ ತುಂತುರುಹನಿಯಾಗಿ ಕಣ್ಣೀರಾಗಿ ಹರಿಯಿತು.

"ಅಳಬೇಡ! ಅಕ್ಕಾ-ಅಳಬೇಡ...."

ಆದರೆ ಬೆಂದು ಬರಡಾಗಿದ್ದ ಹೃದಯ ಪ್ರದೇಶದಲ್ಲಿ ಆ ಹನಿಗಳೆಲ್ಲ ಇಂಗಿಹೋಗಲು ಬಹಳ ಹೊತ್ತು ಹಿಡಿಯಲಿಲ್ಲ.

ತುಂಗಮ್ಮನ ಅಳು ನಿಂತರೂ ಜಲಜ ಮುಖ ಬಾಡಿಸಿಯೇ ಕುಳಿತಳು. ಸುಳ್ಳು ಹೇಳಿದ್ದಳಾಕೆ. ಸುಂದರವಾಗಿರಲಿಲ್ಲ ಆ ಮಗು. ಯಾವ ರೂಪವೂ ಇರಲಿಲ್ಲ ಆ ನಿರ್ಜೀವ ಮಾಂಸದ ಮುದ್ದೆಗೆ. ಆದರೆ, ಮುದ್ದು ಮುದ್ದಾ ಗಿತ್ತು ಎನ್ನದೆ ಬೇರೇನನ್ನಾದರೂ ಹೇಳುವುದು ಸಾಧ್ಯವಿತ್ತೆ ?

"ನಂಗೆ ಎಚ್ಚರವಾದಾಗ ಏನೂ ಇರ್ಲಿಲ್ಲ ಜಲಜ. ನೀವು ನಾಲ್ಕೈದು ಜನ ಮತ್ತು ಆ ಡಾಕ್ಟ್ರು ನನ್ನ ಸುತ್ತೂ ನಿಂತಿದ್ರಿ ಅಷ್ಟೆ."

"ಹೌದು. ನಾವು ಮಾತ್ರ ಇದ್ವಿ...."

"ಮಗು ?"

"ಬೇರೆ ಕಡೆಗೆ ಸಾಗಿಸಿದ್ವಿ ತುಂಗಕ್ಕ."

"ಹುಂ....ನಾನು ನೋಡ್ದಾಗ ನೀವೆಲ್ಲ ಅಲ್ಲಿದ್ರಿ."

"ಇಲ್ಲ! ಸುಳ್ಳು!"

"ನಂಗೊತ್ತಿಲ್ವೆ ಜಲಜ?"

"ಆಗಲಿ. ಅಲ್ಲಿದ್ದೆವು. ಏನಾಯ್ತೀಗ?"

"ಏನೂ ಇಲ್ಲ. ಸುಮ್ನೆ ಹೇಳ್ದೆ."

"ಸರಿ. ಅದನ್ನೆಲ್ಲಾ ಮರೆತ್ಬಿಡು ಅಕ್ಕ."

"ನೀವೆಲ್ರೂ ಒಳ್ಳೆಯವರು ಜಲಜ."

ಒಳ್ಳೆಯವರೊ-ಕೆಟ್ಟವರೊ! ಜಲಜೆಗೆ ಆ ಪದಗಳ ನಿಜವಾದ ಸ್ಪಷ್ಟವಾದ ಅರ್ಥ ತಿಳಿಯದು. ಆದರೆ ತನ್ನ ಒಳ್ಳೆಯತನದಿಂದ, ನೊಂದ ಜೀವಿಯಾದ ತುಂಗಮ್ಮನಿಗೆ ಯಾವ ಒಳ್ಳೆತನ್ನೂ ಮಾಡುವುದು ಸಾಧ್ಯವಾಗಿರಲಿಲ್ಲ. ಅಷ್ಟು ಮಾತ್ರ ನಿಜ.

ಆ ದಿನ, ಸತ್ತುಹುಟ್ಟಿದ್ದ ಮಗುವನ್ನು ಮಣ್ಣುಮಾಡಿ ಬಂದ ಮೇಲೆ ಕುರುಡಿ ಸುಂದ್ರಾ ಕೇಳಿದ್ದಳು:

"ಓಗ್ಬುಟ್ಟು ಬಂದ್ರಾ ಜಲಜಾ?"

"ಹೂಂ ಕಣೇ."

"ಚೆಂದಾಗಿತ್ತಾ ಮೊಗು? ಎಂಗಿತ್ತು ನೋಡಾಕೆ?"

ಆ ಒಂದು ಕ್ಷಣ ಜಲಜೆಗೆ ತಾಳ್ಮೆ ತಪ್ಪಿ ಸಿಟ್ಟುಬಂದಿತ್ತು. ಕುರುಡಿಯ ಪ್ರಶ್ನೆಯಲ್ಲಿ ಯಾವ ಅರ್ಥವೂ ಇಲ್ಲವೆಂದು ತೋರಿತು ಅವಳಿಗೆ.

"ಚೆಂದಾಗಿತ್ತು, ಅದರಮ್ನಂಗೇ!"

"ಓ!"

ರೇಗಿದ್ದ ಜಲಜೆಯ ಸ್ವರ ಎಂದಿನಂತಿರಲಿಲ್ಲ. ಆದರೆ ಸುಂದ್ರಾ, ತುಂಗಕ್ಕನಿಗೆ ಒದಗಿದ ಸಂಕಟಕ್ಕಾಗಿ ಜಲಜ ಅತ್ತು ಆ ಸ್ವರ ಬದಲಾಗಿರಬಹುದೆಂದು ಭಾವಿಸಿದಳು. ಮಗು ಬದುಕಲಿಲ್ಲವೆಂದು ಆ ಕುರುಡಿಗೆ ದುಃಖವಾಯಿತು.

ಆದರೆ ಇನ್ನೊಬ್ಬಳು, ಬದುಕಿನಲ್ಲಿ ಪಡಬಾರದ ಕಷ್ಟಗಳನ್ನೆಲ್ಲ ಪಟ್ಟಿದ್ದ ಪಾರೋತಿ ಎಂಬ ಹುಡುಗಿ, ಕಹಿಯಾಗಿ ಹೇಳಿದ್ದಳು:

"ಹೆಣ್ಣು ಮಗು ತಾನೆ? ಹೋಗ್ಲಿ ಬಿಡು....ಯಾರಿಗೆ ಏನೂ ಅನ್ಯಾಯ ವಾಗ್ಲಿಲ್ಲ...."

ಆ ಹುಡುಗಿಯರಲ್ಲಿ ಎಷ್ಟೋ ಜನ ಅನುತಾಪ ಅನುಕಂಪ ಸೂಚಿಸಿದ್ದರು ತುಂಗಮ್ಮನನ್ನು ಕುರಿತು. ಎಷ್ಟೋ ಜನ ಮರುದಿನವೇ ಎಲ್ಲವನ್ನೂ ಮರೆತಿದ್ದರು....

....ಅದನ್ನೆಲ್ಲ ತುಂಗಮ್ಮನಿಗೆ ಹೇಳಬೇಕೆಂದು ಜಲಜೆಗೆ ಮನಸ್ಸಾಯಿತು. ಆದರೆ, ಆ ವಿಷಯ ಪ್ರಸ್ತಾಪಿಸುವುದು ಸರಿಯಲ್ಲವೆಂದಿತು ಮರುಕ್ಷಣವೆ, ಅದೇ ಮನಸ್ಸು.

....ಸುಮ್ಮನಿದ್ದ ಜಲಜೆಯ ಅಂಗೈಯನ್ನು ಮುಟ್ಟುತ್ತಾ ತುಂಗಮ್ಮ ಕೇಳಿದಳು :

"ಯಾಕೆ ಜಲಜ ಹಾಗೆ ಕೂತಿದೀಯಾ ?"

"ಸುಮ್ನೆ! ಯಾಕೋ ಬೇಜಾರು...."

ಬೇಸರಗೊಂಡಿದ್ದ ಗೆಳತಿಯನ್ನು ಸಮಜಾಯಿಸುವ ಭಾರ ತನ್ನದೆಂದು ತುಂಗಮ್ಮನಿಗೆ ತೋರಿತು.

"ಏನಾಗಿದ್ಯೆ ನಿಂಗೆ ?"

"ಏನೊ !"

"ಚಂದಮಾಮ ಓದ್ತಾ, ಅಡವಿಯೊಳಗೇ ರಾಜಕುಮಾರೀನ ಬಿಟ್ಬಿಟ್ಟು ಬಂದಿದೀಯೇನೇ ?"

ಜಲಜ ನಕ್ಕಳು. ಎಲ್ಲಿಂದ ಎಲ್ಲಿಗೆ! ಈಗತಾನೆ ಅತ್ತಿದ್ದ ತುಂಗಮ್ಮನೇ ಅಲ್ಲವೆ ಆ ಪ್ರಶ್ನೆ ಕೇಳಿದ್ದು ?

ಜಲಜ ನಕ್ಕು ಆಕೆಯ ಮುಖ ಅರಳಿದುದನ್ನು ಕಂಡು ತುಂಗಮ್ಮನಿಗೆ ಸಂತೋಷವಾಯಿತು.

"ಜಲಜಾ, ನೀನು ಓದ್ತಿದ್ದ ಕತೆ ಹೇಳೆ ನಂಗೆ."

"ಹೋಗಕ್ಕ. ಸುಮ್ನೆ ಗೇಲಿ ಮಾಡ್ತೀಯಾ ನನ್ನ."

"ಇಲ್ಲ ಕಣೇ-ನಿಜವಾಗ಼್ೂ. ಹೇಳೇ."

"ನಿಂಗ್ಯಾಕಮ್ಮಾ ಅಜ್ಜೀ ಕತೆ ?"

"ಹಟ ತೊಡಬಾರ್ದು. ಹೇಳು ಜಲಜ...."

ಹೇಳಬೇಕೊ ಬೇಡವೊ. ಗೇಲಿಮಾಡಿದರೂ ಏನಂತೆ? ಕಿವಿಗೊಟ್ಟು ಕೇಳುವವರು ಸುಲಭವಾಗಿ ದೊರೆಯುವಾಗ—....ಆದರೆ ಈ ತುಂಗಕ್ಕ....

ಜಲಜ ಕತೆ ಆರಂಭಿಸಬೇಕೆಂದು ತೀರ್ಮಾನಿಸಿದಾಗಲೇ ಸರಸಮ್ಮ ಒಳ ಬಂದರು. ಇದರಿಂದ ಜಲಜೆಗೆ ಕ್ಷಣ ಕಾಲ ಅಸಮಾಧಾನವೆನಿಸಿದರೂ ದೊಡ್ಡಮ್ಮನನ್ನು ಕಂಡು ಮುಗುಳ್ನಕ್ಕ ತುಂಗಕ್ಕನ ಮುಖ ನೋಡಿದಾಗ ಸಮಾಧಾನವೆನಿಸಿತು.

"ತುಂಗೆಗೆ ಚಂದಮಾಮ ಕತೆ ಹೇಳ್ತಿದ್ಯೇನೇ?"

—ಎಂದು ಸರಸಮ್ಮನೂ ಜಲಜೆಯನ್ನು ಕುರಿತು ನಗೆಯಾಡ ಬೇಕೆ!....ಅದು ಅವಮಾನವಲ್ಲ, ಗೌರವವೆಂದೇ ನಂಬಿ, ಜಲಜಾ ಎದ್ದು ನಿಂತಳು.

ಆಕೆಗಾಗಿ ಹೊರಗೆ ಒಂದು ಕೆಲಸ ಕಾದಿತ್ತು.

"ಮೆಟ್ಟುಗತ್ತಿ ತಾಕಿ ಅಲಮೇಲು ಕೈ ಬೆರಳು ಸ್ವಲ್ಪ ಕುಯ್ದು ಹೋಗಿದೆ. ಬೇಗ್ನೆ ಒಂದಿಷ್ಟು ಅಯಡಿನ್ ಹಾಕಿ ಬಟ್ಟೆ ಚೂರು ಸುತ್ತು ಜಲಜಾ."

"ಹೂಂ ದೊಡ್ಡಮ್ಮ."

ಜಲಜ ಗಭೀರಳಾಗಿ, ಕರ್ತವ್ಯ ನಿಷ್ಠೆಯ ಪ್ರತಿಮೂರ್ತಿಯಾಗಿ, ಹೊರ ಹೋದಳು.

ಸರಸಮ್ಮ ಅವಸರದಲ್ಲಿ ಇದ್ದ ಹಾಗಿತ್ತು. ಅಭಯಧಾಮದಿಂದ ಹೊರಹೋಗುವಾಗ ಉಟ್ಟುಕೊಳ್ಳುವ ಸೀರೆಯನ್ನು ಅವರು ಉಟ್ಟಿದ್ದರು.

"ಹೊರಗೋಗ್ತೀರಿ ಅಲ್ವೆ ದೊಡ್ಡಮ್ಮ?"

"ಸೀರೆ ನೋಡಿಯೇ ತಿಳಕೊಂಬಿಟ್ಯಲ್ಲೇ! ಹೂಂ. ಕಮಿಟಿ ಮೀಟಿಂಗಿದೆ. ಹೋಗ್ಬರ್‍ತೀನಿ."

ಹಾಗೆಂದರೇನೆಂದು ತುಂಗಮ್ಮನಿಗೆ ಅರ್ಥವಾಗಲಿಲ್ಲ.

"ಕಮಿಟಿ ಮೀಟಿಂಗ್ ಅಂದ್ರೆ?"

"ಅಭಯಧಾಮದ ಸಮಿತಿ ಇಲ್ವೆ? ಅದರ ಸಭೆ."

"ಓ! ದೊಡ್ಡ ಸಭೇನಾ?"

"ಹೌದು ಮತ್ತೆ!"

ಅದು ಸುಳ್ಳಾಗಿತ್ತು. ಆದರೆ ಒಳ್ಳಿತಿಗಾಗಿ ಒಮ್ಮೊಮ್ಮೆ ಸುಳ್ಳು ಹೇಳುವುದು ಅವಶ್ಯವೆಂಬುದನ್ನು ಅನುಭವದಿಂದ ಅವರು ಕಂಡು ಹಿಡಿದಿದ್ದರು. ವಾಸ್ತವವಾಗಿ, ಆಡಳಿತ ಸಮಿತಿಯಲ್ಲಿರುವ ಹನ್ನೊಂದು ಜನರಲ್ಲಿ ಎಲ್ಲರೂ ಪ್ರತಿಸಾರೆಯೂ ಸಭೆಗೆ ಬರುತ್ತಿರಲಿಲ್ಲ. ಎಷ್ಟೋ ಸಾರಿ 'ಕ್ವೋರಂ' ಇರುತ್ತಿರಲಿಲ್ಲ. ಮತ್ತೆಷ್ಟೋ ಬಾರಿ, ಕಾರ್ಯದರ್ಶಿನಿ ಮತ್ತು ಸರಸಮ್ಮ ಕುಳಿತು, ತುರ್ತಿನ ತೀರ್ಮಾನಗಳನ್ನು ರೂಪಿಸಿ ಬರೆದಿಟ್ಟು, ಇತರ ಸದಸ್ಯರಿಗೆ ಕಳುಹಿಸಿಕೊಟ್ಟು ಸಹಿ ಪಡೆಯುತಿದ್ದರು. ಆದರೆ ನಿಜಸ್ಥಿತಿಯನ್ನು ಎಂದೂ ಅಭಯಧಾಮದ ಹುಡುಗಿಯರಿಗೆ ಹೇಳುವಂತಿರಲಿಲ್ಲ. ಹಾಗೆ ಹೇಳಿದರೆ, ಅಭಯಧಾಮದ ಆಡಳಿತದಲ್ಲಿ ಅವರಿಗಿರುವ ನಂಬುಗೆ ಖಂಡಿತವಾಗಿಯೂ ಶಿಥಿಲವಾಗುತಿತ್ತು. ದೊಡ್ಡಮ್ಮ, ಹೆಚ್ಚುಕಡಿಮೆ ವಾರಕ್ಕೊಮ್ಮೆ ಮೀಟಿಂಗಿಗೆ ಹೋಗುವ ವಿಷಯ ಅಭಯಧಾಮದ ಪ್ರತಿಯೊಬ್ಬರಿಗೂ ತಿಳಿದಿದ್ದುದೇ. ಆ ಮೀಟಿಂಗು ಭಾರೀ ಸಭೆಯೆಂದೂ ಅಲ್ಲಿ ದೊಡ್ಡಮ್ಮ, ತಮ್ಮೆಲ್ಲರ ಜವಾಬ್ದಾರಿ ಹೊತ್ತ ಪ್ರತಿನಿಧಿಯಾಗಿ, ಪಾಯಸದೂಟವಿದ್ದ ದಿವಸ ಮಾಡುವ ಭಾಷಣಕ್ಕಿಂತಲೂ ದೊಡ್ಡ ಭಾಷಣವನ್ನು ಕೊಡುವರೆಂದೂ ಹುಡುಗಿಯರ ಕಲ್ಪನೆಯಾಗಿತ್ತು. ಅಂತಹ ಕಲ್ಪನೆಗೆ ಆಧಾರ ಒದಗಿಸುವುದರ ಮೂಲಕ ಅಭಯಧಾಮದ ಹಿರಿಮೆ ಹೆಚ್ಚುತ್ತದೆಂಬುದನ್ನೂ ಸರಸಮ್ಮ ಅನುಭವದಿಂದ ಅರಿತಿದ್ದರು.

ತುಂಗಮ್ಮನ ಮುಂದೆಯೂ ರೂಪುಗೊಂಡಿತು ಕಮಿಟಿಮೀಟಿಂಗಿನ ಚಿತ್ರ. ಆ ಸಭೆಗೆ ತನ್ನ ಬದುಕನ್ನು ಬಿಗಿದ ಕೊಂಡಿ ಯಾವುದೆಂದು ತಿಳಿಯಲು ಆಕೆ ಬಯಸಿದಳು.

"ಮೀಟಿಂಗ್ನಲ್ಲಿ ಇಲ್ಲಿಯ ಹುಡಿಗೀರ ವಿಷಯವೆಲ್ಲಾ ಚರ್ಚೆಮಾಡ್ತೀರೀಂತ ಜಲಜ ಅಂತಿದ್ಲು, ಹೌದೆ ದೊಡ್ಡಮ್ಮ?"

"ಹೌದು."

ತನ್ನ ವಿಷಯವೂ ಅಲ್ಲಿ ಚರ್ಚೆಯಾಗುವುದು ಹಾಗಾದರೆ. ಒಮ್ಮೆಲೆ ಆ ಸಭೆ, ತುಂಗಮ್ಮ ಸಿನಿಮಾದಲ್ಲಿ ಕಂಡಿದ್ದ ನ್ಯಾಯಾಸ್ಥಾನವಾಗಿ ಮಾರ್ಪಟ್ಟಿತು. ಯಾವ ರೀತಿ ತನ್ನ ಬಗೆಗೆ ಅಲ್ಲಿ ಮಾತುಗಳು ಬರುವುವೊ?

ತುಂಗಮ್ಮನ ಪ್ರಶ್ನೆಯಿಂದಲೂ ಹೊರಡಲು ತಮಗೆ ತಡವಾದ್ದ ರಿಂದಲೂ ಸರಸಮ್ಮನಿಗೆ ಕಸಿವಿಸಿಯಾಯಿತು.

"ಯಾಕೆ ಕೇಳ್ದಿ ತುಂಗ?"

ತುಂಗಮ್ಮ ಉತ್ತರವೀಯಲಿಲ್ಲ. ಬದಲು ತಾನೇ ಒಂದು ಪ್ರಶ್ನೆ ಕೇಳಿದಳು:

"ನನ್ನ ವಿಷಯ ಏನು ತೀರ್ಮಾನಮಾಡ್ತೀರಿ ದೊಡ್ಡಮ್ಮ?"

"ಅದೇನೆ ಹಾಗಂದ್ರೆ?"

"ನಾನು—ಇನ್ನು—...."

ತನಗಿಷ್ಟು ಶಕ್ತಿ ಇಲ್ಲವೆಂದಿತು ಸರಸಮ್ಮನ ಸಹನೆ.

"ತುಂಗಾ! ಇಂಥ ಯೋಚ್ನೆ ಮಾಡ್ಬೇಡ! ಯಾರು ಇದನ್ನೆಲ್ಲಾ ನಿನ್ತಲೇಲಿ ತುಂಬ್ದೋರು? ಥೂ....ಆ ಜಲಜಾಗಿಷ್ಟೂ ಬುದ್ಧಿಯಿಲ್ಲ!"

"ಅಯ್ಯೊ! ಜಲಜ ಏನೂ ಹೇಳ್ಲಿಲ್ಲ ದೊಡ್ಡಮ್ಮ-ನಾನೇನೇ—...."

ಸರಸಮ್ಮ ನಕ್ಕರು.

"ನಿನ್ನ ತಲೆಕಾಯಿ! ಸುಮ್ನೆ ಮಲಕೊ. ನಿನಗೆ ಹೆಚ್ಚು ಹೆಚ್ಚು ಹಣ್ಣು ಬೇಕು, ಟಾನಿಕ್ ಬೇಕು, ಅಂತ ಮೀಟಿಂಗ್ನಲ್ಲಿ ಕೇಳಿ ಪಾಸ್ಮಾಡಿಸ್ಕೊಂ ಕೊಂಡು ಬರ್ತೀನಿ...."

ಆ ಮಾತಿಗೆ ಏನು ಉತ್ತರಕೊಡಬೇಕೆಂಬುದೇ ತುಂಗಮ್ಮನಿಗೆ ತೋಚಲಿಲ್ಲ.

"ಆಮೇಲೆ, ಇನ್ನೂ ಒಂದು ವಿಷಯ ತುಂಗ—"

"ಏನು ದೊಡ್ಡಮ್ಮ?"

"ನಿಮ್ತಂದೆ ಕಾಗದಕ್ಕೆ ಉತ್ತರ ಬರೀಬೇಕು ತುಂಗ. ಅವರಿಗೇನೂ ತಿಳಿಸೇ ಇಲ್ಲ."

"ಹೂಂ."

"ನಾಳೇನಾದ್ರೂ ಬರೀಬೇಕು. ನಾನೂ ಬರೀತೀನಿ."

"ಆಗಲಿ ದೊಡ್ಡಮ್ಮ."

"ಅದೇನು ಬರೀತೀಯೋ ಯೋಚ್ನೆ ಮಾಡಮ್ಮ. ನಾಳೆ ಮಾತ್ನಾ ಡೋಣ ಆ ವಿಷಯ."

ಸರಸಮ್ಮ ಅವಸರವಾಗಿ ಹೊರಟು ಹೋದರು. ಹಲವು ದಿನಗಳ ಕಾಲ ಯೋಚಿಸಿದರೂ ಬಗೆ ಹರಿಯದಷ್ಟು ವಿಚಾರಗಳನ್ನು ತನ್ನ ತಲೆಯಲ್ಲಿ ಅವರು ತುರುಕಿ ಹೋದಂತೆ ತುಂಗಮ್ಮನಿಗೆ ಅನಿಸಿತು.

....ಬಿಸಿಲು ಹೆಚ್ಚಿ ಇಳಿ ಮುಖವಾದರೂ ತುಂಗಮ್ಮನ ಮೆದುಳನ್ನು ಕವಿದಿದ್ದ ಮಂಕು ಸರಿಯಲಿಲ್ಲ.

ಜಲಜಾ ಮತ್ತು ಲಲಿತಾ ಇಬ್ಬರಿಗೂ ನೇಯ್ಗೆ ಬರುತಿತ್ತು. ಅದರಿಂದ, ಇತರ ಹುಡುಗಿಯರಂತೆ ಅವರಿಗೂ ವಾರದಲ್ಲಿ ಒಂದೆರಡು ರೂಪಾಯಿ ಸಂಪಾದನೆಯಾಗುತಿತ್ತು. ಎರಡು ದಿನಗಳ ಹಿಂದೆ ಜಲಜ ಮತ್ತು ಲಲಿತಾ ಮಾರ್ಕೆಟಿಗೆ ಹೋದಾಗ, ಇಬ್ಬರೂ ತುಂಗಮ್ಮನಿಗಾಗಿ ನಾಲ್ಕು ನಾಲ್ಕಾಣೆ ಖರ್ಚು ಮಾಡಿದ್ದರು. ಜಲಜ ಒಂದು 'ಕೊರವಂಜಿ' ಪತ್ರಿಕೆ ಕೊಂಡಿದ್ದಳು ; ಲಲಿತಾ ನಾಲ್ಕು ಕಿತ್ತಳೆ ಹಣ್ಣುಗಳನ್ನು.

ಆ ಹಣ್ಣುಗಳಲ್ಲೊಂದು ಹಾಗೆಯೇ ಉಳಿದಿತ್ತು. ತುಂಗಮ್ಮ ದೇಹವನ್ನು ಮೇಲಕ್ಕೆ ಸರಿಸಿಕೊಂಡು ದಿಂಬಿಗೂ ಗೋಡೆಗೂ ಒರಗಿ ಕುಳಿತಳು. ಕೈ ನೀಡಿ ಆ ಹಣ್ಣನ್ನೆತ್ತಿಕೊಂಡಳು. ಹೊರಗೆ ಬಾಡಿದ್ದರೂ ಒಳಗೆ ಹುಳಿಯಾಗಿದ್ದರೂ ಆಕೆಗೆ ಅದು ರುಚಿಕರವಾಗಿತ್ತು.

ಧೀಂಗುಡುತಿದ್ದ ಮೆದುಳನ್ನು ಹತೋಟಿಗೆ ತರಲೆತ್ನಿಸುತ್ತಾ ತುಂಗಮ್ಮ ಕಿತ್ತಳೆಯ ತೊಳೆಗಳನ್ನು ಒಂದೊಂದಾಗಿಯೆ ತಿನ್ನ ತೊಡಗಿದಳು.

ಸಂಗೀತದ ಅಧ್ಯಾಪಿಕೆ ಆ ಸಂಜೆ ಪಾಠಮಾಡಲಿಲ್ಲ. ಸರಸಮ್ಮ ಹಿಂತಿರುಗಿ ಬರುವವರೆಗೂ ಅಭಯಧಾಮದ ಜವಾಬ್ದಾರಿ ಆಕೆಯದು. ಬೀಗದ ಕೈಯ ಗೊಂಚಲನ್ನಾಕೆ ಮಡಿಲಿನೊಳಗಿಟ್ಟು, ತೋರಿಕೆಯ ಧೈರ್ಯದ ಮುಖವಾಡ ಧರಿಸಿ, ಆಫೀಸು ಕೊಠಡಿಯಲ್ಲಿ ಭದ್ರವಾಗಿ ಕುಳಿತುಕೊಂಡರು. ಅಂತಹ ಸಂದರ್ಭಗಳಲ್ಲಿ ಬಲು ಭಯ ಅವರಿಗೆ. ಯಾವ ಕ್ಷಣವಾದರೂ ತನ್ನನ್ನು ಮುತ್ತಿ ಹುಡುಗಿಯರು ಬೀಗದಕೈ ಗೊಂಚಲನ್ನು ಕಸಿದುಕೊಳ್ಳಬಹುದೆಂದೇ ಅವರು ನಿರೀಕ್ಷಿಸುತಿದ್ದರು. ಆಗ ಹುಡುಗಿಯರು ಮಾತನಾಡಲು ಬಂದರೆಂದರೆ ಆಕೆ ವರ್ತಿಸುತಿದ್ದುದು ಒರಟಾಗಿಯೆ. ಒಳಗಿನ ಅಳುಕನ್ನು ಮುಚ್ಚಿಕೊಳ್ಳಲೆಂದು ಹೊರಗೆ ಆಕೆ ವಕ್ರತನ ತೋರಿಸುತಿದ್ದರು.

ಸರಸಮ್ಮ ಹೊರ ಹೋದಾಗ ಅಭಯಧಾಮದ ಹುಡುಗಿಯರು, ಹಗ್ಗ ಬಿಚ್ಚಿಕೊಂಡು ಕಿವಿಗಳಲ್ಲಿ ಗಾಳಿ ತುಂಬಿಕೊಂಡು ಕುಣಿಯುವ ಕರುಗಳಂತೆ ಓಡಾಡುತಿದ್ದರು.

ಅದೇ ಆಗ, ತುಂಗಮ್ಮನ ಕೊಠಡಿಯ ಮುಂದೆಯೇ, ಇಬ್ಬರೋಡಿದರು—ಒಬ್ಬಳನ್ನು ಇನ್ನೊಬ್ಬಳು ಬೆನ್ನಟ್ಟಿ. ಮೂವರು ಹುಡುಗಿಯರ ಇನ್ನೊಂದು ಗುಂಪೂ ಸಾವಕಾಶವಾಗಿ ಮೆಲ್ಲನೆ ಜಗಲಿಯ ಮೇಲೆ ನಡೆದು ಹೋಯಿತು.

ಯಾರಾದರೂ ಒಳಗೆ ಬಂದು ತನ್ನ ಬಳಿಯಲ್ಲಿ ಕುಳಿತುಕೊಳ್ಳಬಾರದೆ—ಎಂದು ಕೊಂಡಳು ತುಂಗಮ್ಮ. ಆದರೆ ಬಹಳ ಹೊತ್ತು ಯಾರೂ ಬರಲಿಲ್ಲ.

ಕತ್ತಲಾಗುತಿದ್ದಂತೆ, ತುಂಗಮ್ಮ ಹೆಸರು ತಿಳಿಯದ ಎಳೆಯ ಹುಡುಗಿಯೊಬ್ಬಳು ಬಂದು, ಎಟಕದೇ ಇದ್ದ ಗುಂಡಿಗಾಗಿ ತುದಿಕಾಲಿನ ಮೇಲೆ ನಿಂತು ಪ್ರಯಾಸಪಟ್ಟು ಸ್ವಿಚ್ ಹಾಕಿ ಹೋದಳು. ದೀಪ ಹತ್ತಿ ಕೊಂಡೊಡನೆ ಆ ಹುಡುಗಿ ತುಂಗಮ್ಮನ ಮುಖ ನೋಡಿದಳು. "ಬಾ" ಎಂದಳು ತುಂಗಮ್ಮ. ಸಂಕೋಚದ ಮುದ್ದೆಯಂತಿದ್ದ ಆಕೆ ಬರಲಿಲ್ಲ. ನಸುನಕ್ಕು ಓಡಿ ಹೋದಳು.

'ಯಾರೂ ಇಲ್ಲವೆ?—ಎಲ್ಲಿ ಹಾಳಾದರೋ?' ಎಂದು ತುಂಗಮ್ಮ ಶಪಿಸುತಿದ್ದಾಗಲೆ ಲಲಿತೆಯ ದರ್ಶನವಾಯಿತು.

"ಇದೇನೆ ಲಲಿತ? ಜಲಜ ಎಲ್ಲಿ?"

"ಅಲಮೇಲು ಬೆರಳಿಗೆ ಗಾಯ ಮಾಡ್ಕೊಂಡಿದಾಳೆ."

"ಹೌದು. ಐಡಿನ್ ಹಚ್ಬೇಕೆ ಅಂತ ಹೋದ್ಲು. ಒಂದು ವರ್ಷವಾಯ್ತು."

"ಅಷ್ಟೇ ಅಂತ ತಿಳಕೊಂಡ್ಯೇನು? ಓಹೊ! ಐಡಿನ್ ಹಚ್ಚಿ ಬಿಟ್ಟೆಡೋಕಾಗುತ್ತಾ? ಅಲಮೇಲು ಪಾಲಿನ ಅಡುಗೆ ಕೆಲಸಾನೂ ಆಕೆಯೇ ಮಾಡ್ಬೇಕು."

ತುಂಗಮ್ಮ ಜಲಜೆಯ ಮೇಲೆ ಕೂಡಿ ಹಾಕಿದ್ದ ಸಿಟ್ಟೆಲ್ಲ ಕರಗಿ ಹೋಯಿತು.

"ಲಲಿತಾ, ಸ್ವಲ್ಪ ಏಳ್ತೀನಮ್ಮ ನಾನು."

"ಹಿತ್ತಿಲ ಕಡೆಗೆ ಹೋಗ್ಬೇಕಾ ?"

"ಹೂಂ....ಎಲ್ಲಿ, ಸ್ವಲ್ಪ ಬಾ...."

ತುಂಗಮ್ಮ ಏಳಲು ಲಲಿತಾ ನೆರವಾದಳು. ಎಷ್ಟೊಂದು ಹಗುರ ವಾಗಿತ್ತು ತುಂಗಮ್ಮನ ದೇಹ!

ಹಿತ್ತಿಲು ಇರಲಿಲ್ಲ ಅಭಯಧಾಮಕ್ಕೆ. ಕಟ್ಟಡದೊಳಗೇ ಎಲ್ಲವೂ....

ಲಲಿತೆಯ ಭುಜಕ್ಕೆ ಆತುಕೊಂಡು ನಡೆಯುತ್ತಾ ತುಂಗಮ್ಮ, ತನ್ನ ಅಂಗಾಂಗಗಳಿಗೆ ಶಕ್ತಿ ಬಂದು ತಾನೆಂದು ಓಡಿಯಾಡ ಬಲ್ಲೆನೋ ಎಂದುಕೊಂಡಳು.

೧೦

ಮತ್ತೆ ಹತ್ತು ದಿನಗಳಲ್ಲಿ ತುಂಗಮ್ಮನ ಅಂಗಾಂಗಗಳಿಗೆ ಶಕ್ತಿ ಬಂದು ಆಕೆ ಓಡಿಯಾಡಲು ಸಮರ್ಥಳಾದಳು. ಹಾಗೆ ಚೇತರಿಸಿಕೊಂಡ ತುಂಗಮ್ಮ ಸೊರಗಿದ್ದರೂ ಮುದ್ದಾಗಿದ್ದಳು ನೋಡಲು.

ತುಂಗಮ್ಮನ ಆರೈಕೆ ಚೆನ್ನಾಗಿ ನಡೆಯಬೇಕು ಎಂದಿದ್ದರು ಡಾಕ್ಟರು. ಆ ವೈದ್ಯಕೀಯ ಸಲಹೆ ಸರಸಮ್ಮನಿಗೆ ಚಿಂತೆಗೆ ಕಾರಣವಾಗಿತ್ತು. ಅಭಯ ಧಾಮದ ಆಯವ್ಯಯದ ಅಂದಾಜುಪಟ್ಟಿಯಲ್ಲಿ ಒಳ್ಳೆಯ ಆರೈಕೆಗೆ ಬೇಕಾದ ಹಣ ಎಂದೂ ಮೀಸಲಾಗಿರಲಿಲ್ಲ. ಸಾಮಾನ್ಯವಾಗಿ ಅಂತಹ ಸಂದರ್ಭಗಳಲ್ಲಿ ಸರಸಮ್ಮ, ತಿಂಗಳಿಗೆ ತಮಗೆ ಬರುತಿದ್ದ ಎಂಭತ್ತು ರೂಪಾಯಿ ಗೌರವ ಧನದಲ್ಲೇ ವೆಚ್ಚ ಮಾಡಬೇಕಾಗುತಿತ್ತು. ವೆಚ್ಚಮಾಡಲು ಅವರು ಹಿಂಜರಿಯುತಿದ್ದರೆಂದಲ್ಲ. ಆದರೆ ಪುಷ್ಟಿಕರವಾದ ಹಣ್ಣು ಹಾಲು ಔಷಧಿ ಒದಗಿಸಲು ಆ ವೆಚ್ಚವೂ ಸಾಲುತ್ತಿರಲಿಲ್ಲ....ಅನಿವಾರ್ಯವಾಗಿ, ತುಂಗಮ್ಮ ನನ್ನು ಹೆರಿಗೆಗಾಗಿ ಆಸ್ಪತ್ರೆಗೆ ಸೇರಿಸುವುದು ಸಾಧ್ಯವಾಗಿರಲಿಲ್ಲ. ಸೇರಿಸಿದ್ದರೆ, ತುಂಗಮ್ಮನ ಅಪೇಕ್ಷೆಗೆ ಇದಿರಾಗಿಯಾದರೂ ಸರಿಯೆ ಸೇರಿಸಿದ್ದರೆ, ಮಗು ವನ್ನುಳಿಸುವುದು ಸಾಧ್ಯವಾಗುತಿತ್ತೋ ಏನೋ. ಸರಸಮ್ಮನ ಮನಸ್ಸಿನಲ್ಲಿ ಹಾಗೆ ಮೂಡಿದ ಶಂಕೆ ಬಲವಾಗಿ ಬೇರೂರಿ ಬಿಟ್ಟಿತ್ತು. ಹೀಗಾಗಿ, ತುಂಗಮ್ಮ ನಿಗೆ ಎಷ್ಟು ಆರೈಕೆ ಮಾಡಿದರೂ ಆಕೆಗೆ ತೃಪ್ತಿ ಇರಲಿಲ್ಲ.

ಸರಸಮ್ಮನ ನಿರೀಕ್ಷೆಗಿಂತ ಮುಂಚಿತವಾಗಿಯೇ ತುಂಗಮ್ಮ ಹಾಸಿಗೆ ಬಿಟ್ಟು ಎದ್ದಳು. ಆಕೆಯ ಹಸನ್ಮುಖ - ಚಟುವಟಿಕೆಗಳನ್ನು ಕಂಡು ಸರಸಮ್ಮನಿಗೆಷ್ಟೋ ಸಮಾಧಾನವಾಯಿತು.

ಅವರು ಮಕ್ಕಳನ್ನು ಪ್ರೀತಿಸುತಿದ್ದರು. ಅದು ಅಲ್ಲಿ ಎಲ್ಲರಿಗೂ ತಿಳಿದಿದ್ದ ಬಹಿರಂಗ ವಿಷಯವಾಗಿತ್ತು. ಆದರೂ ತುಂಗಮ್ಮನ ವಿಷಯದಲ್ಲಿ ಯೋಚಿ ಸುತ್ತ ಅವರಿಗನಿಸುತಿತ್ತು:

ಆ ಮಗು ಹಾಗಾದುದೇ ಒಂದು ರೀತಿಯಲ್ಲಿ ಒಳ್ಳೆತಾಯಿತಲ್ಲವೆ? ಅದನ್ನೊಂದು ಮರೆತು ಬಿಡುವ ಅಧ್ಯಾಯವೆಂದು ಮನಸ್ಸಿನ ಆಳಕ್ಕೆ ತಳ್ಳಿ, ಮತ್ತೆ ಸಮಾಜದ ಕಣ್ಣಿನಲ್ಲಿ ಒಳ್ಳೆಯವಳಾಗಿ ಆಕೆ ಕಾಣಿಸಿಕೊಳ್ಳುವುದು ಇನ್ನು ಸಾಧ್ಯವಿದೆಯಲ್ಲವೆ?

ಮರುಕ್ಷಣವೆ, ಮಗುವಿನ ಸಾವಿನಲ್ಲಿ ಲಾಭಕಾಣುವ ತಮ್ಮಯೋಚನೆ ನಾಚಿಕೆಗೇಡಿನದೆಂದು ಅವರಿಗೇ ತೋರುತಿತ್ತು.

....ಸರಸಮ್ಮ ಕೊಠಡಿಯಲ್ಲಿ ಕುಳಿತು ಬರೆಯುತಿದ್ದ ಆ ಬೆಳಿಗ್ಗೆ, ತುಂಗಮ್ಮ ತಾನು ಬಗೆಹರಿಸಲಾಗದ ಉಳಿದಿದ್ದೊಂದು ಸಮಸ್ಯೆಯೊಡನೆ ಒಳಬಂದಳು.

"ದೊಡ್ಡಮ್ಮ, ತೋಟದಿಂದ ಯಾರೂ ಹೂಕೀಳಬಾರದೂಂತ ನಿಯಮ ಇದೆ ಅಲ್ವೆ?"

"ಹೌದು. ಯಾಕೆ-ಯಾರು ಕಿತ್ತರು?"

"ಯಾರೂ ಇಲ್ಲಪ್ಪ. ಸುಮ್ನೆ ನಾನೇ ವಿಚಾರಿಸ್ದೆ."

"ಹೂ ಜಾಸ್ತಿ ಇದ್ದಾಗ ನಾನೇ ಕಿತ್ತು ಎಲ್ರಿಗೂ ಕೊಡ್ತೀನಲ್ಲ?"

"ಅಯ್ಯೋ, ಅದಕ್ಕಲ್ಲ ದೊಡ್ಡಮ್ಮ ಕೇಳಿದ್ದು."

"ಮತ್ತೆ?"

"ಆಫೀಸುರೂಮ್ನಲ್ಲಿ ಮೇಜಿನಮೇಲೆ ದಿನಾಗಲೂ ಹೊಸ ಹೂ ಇರಬೇಡ್ವೆ ದೊಡ್ಡಮ್ಮ?"

"ಓ! ಯಾರು ಬೇಡ ಅಂದೋರು?"

"ಯಾಕೆ ಇಟ್ಟಿಲ್ಲ ಮತ್ತೆ?"

"ಹಿಂದೆ ನಾಲ್ಕು ದಿನ ಇಟ್ಟಿದ್ವಿ ತುಂಗ. ಆದರೆ ಹೂದಾನಿಯಿಂದ್಩ೇ ಅದನ್ನ ಎಗರಿಸ್ತಿದ್ರು ಯಾರಾದ್ರೂ....ಎತ್ಕೊಂಡೋರು ಮುಡೀತಲೂ ಇರ್ಲಿಲ್ಲ ಅದನ್ನ. ಎಲ್ಲಾದ್ರೂ ಹಿಚಕಿ ಎಸೀತಿದ್ರು."

"ಅಯ್ಯೊ? ಅಂಥವ್ರೂ ಇದಾರಾ?"

"ಯಾಕೆ-ಎಲ್ರೂ ನಿನ್ನ ಹಾಗೇನೇ ಅಂತ ತಿಳಕೊಂಡ್ಯೇನು?"

"ಆಫೀಸು ರೂಮ್ನಲ್ಲಿ ಮೇಜಿನ್ಮೇಲೆ ಯಾವಾಗ್಩ೂ ಹೂದಾನಿ ಇದ್ರೆ

ಚೆನ್ನಾಗಿರುತ್ತೆ ದೊಡ್ಡಮ್ಮ. ಯಾರಾದರೂ ಅಭಯಧಾಮ ನೋಡೋಕೆ ಅಂತ ಬಂದಾಗ—''

ತುಂಗಮ್ಮ ಅಲ್ಲಿಯೆ ಮಾತು ನಿಲ್ಲಿಸಿದಳು. ಆದರೆ ಅಷ್ಟು ಮಾತೇ ಸರಸಮ್ಮನ ಮುಖ ಅರಳುವಂತೆ ಮಾಡಿತು. ತುಂಗಮ್ಮನ ಬಗೆಗೆ ಅವರು ಇಟ್ಟಿದ್ದ ನಂಬಿಕೆ ಸುಳ್ಳಾಗಿರಲಿಲ್ಲ. ಅಭಯಧಾಮದ ಹಿತವೂ ತನ್ನಹಿತವೂ ಒಂದೇ ಎನ್ನುವಹಾಗೆ ಆ ಹುಡುಗಿ ಮಾತನಾಡುತಿದ್ದಳಲ್ಲವೆ?

"ನೀನು ಹೇಳೋದು ನಿಜ ತುಂಗ. ಆದರೆ ಎಷ್ಟು ಕೆಲಸಾಂತ ನಾನೊಬ್ಬೇ ಮಾಡ್ಲಿ?''

"ಅದ್ಯಾಕೆ ದೊಡ್ಡಮ್ಮ? ದಿನಾ ಚೊಕ್ಕಟವಾಗಿಡೋ ಬ್ಯಾಚ್ ಇಲ್ವೆ-ಅವರಿಗೇ ಆ ಕೆಲಸಾನೂ ಒಪ್ಪಿಸಿದ್ರಾಯ್ತು."

"ಕಸಗುಡಿಸೋ ಕೆಲಸಾನೇ ಎಷ್ಟು ಚೆನ್ನಾಗಿ ಮಾಡ್ತಾರೇಂತ ನೋಡಿದಿಯೋ ಇಲ್ವೊ?''

"ಅದು ನಿಜ ದೊಡ್ಡಮ್ಮ, ಆದರೂ—"

ಒಮ್ಮೆಲೆ ಸರಸಮ್ಮ, ಏನೂ ತಿಳಿಯದ ಎಳೆಯಳೊಡನಲ್ಲ, ಎಲ್ಲವನ್ನೂ ಬಲ್ಲ ಅನುಭವಿಯಾದ ಅನುತಾಪಉಳ್ಳ ಹಿರಿಯಳೊಡನೆ ತಾನು ಮಾತನಾಡುತಿದ್ದೇನೆ ಎಂದು ಕೊಂಡಳು.

"ನಾಳೆಯಿಂದ ಹಾಗೆಯೇ ಮಾಡೋಣ ತುಂಗ. ಇವತ್ತು ಸಾಯಂಕಾಲ ಪ್ರಾರ್ಥನೆ ಸಮಯದಲ್ಲಿ ಹುಡುಗೀರಿಗೆ ಇದನ್ನ ಹೇಳ್ತೀನಿ."

"ಆಗಲಿ ದೊಡ್ಡಮ್ಮ."

ತನ್ನ ಮಾತಿಗೆ ಮನ್ನಣೆ ದೊರೆಯಿತೆಂದು ತುಂಗಮ್ಮನಿಗೆ ಸಂತೋಷ ವಾಯಿತು.

ಆದರೆ ಆಕೆಯ ಆ ಸಲಹೆಗೆ, ಸರಸಮ್ಮನೂ ಊಹಿಸಲು ಸಮರ್ಥ ರಾಗದೇ ಹೋದಬೇರೊಂದುಹಿನ್ನೆಲೆಯಿತ್ತು. ಅದು, ಇನ್ನೊಂದುವಾರದೊಳಗಾಗಿ ಅಭಯಧಾಮಕ್ಕೆ ಬಂದು ಕಾಣುವೆನೆಂದು ಆಕೆಯ ತಂದೆ ಬರೆದಿದ್ದ ಕಾಗದ. ಆ ಒಂದುವಾರದ ಅವಧಿಯಲ್ಲಿ ಆಗಲೆ ಮೂರು ದಿನಗಳು ಕಳೆದಿದ್ದುವು....ತಂದೆ ತನ್ನನ್ನು ಕಾಣಲು ಅಭಯಧಾಮಕ್ಕೆ ಬರುವ ಸನ್ನಿವೇಶ....ಆಗ ಆ ಅಭಯಧಾಮ, ಅಲ್ಲಿನ ವಾತಾವರಣ, ಆ ಹುಡುಗಿ

ಯರು ಎಲ್ಲರು ಚೆನ್ನಾಗಿಯೇ ಕಾಣಿಸಬೇಕಲ್ಲವೆ? ತಾನು ಒಳ್ಳೆಯ ಆಶ್ರಯವನ್ನೇ ಪಡೆದೆನೆಂದು ತಂದೆ ಭಾವಿಸಬೇಕಲ್ಲವೆ? ಇದೊಂದು ಹುಡುಗಿಯರ ಕೂಡುದೊಡ್ಡಿಯೆಂದು ಆತ ಭಾವಿಸಬಾರದಲ್ಲವೆ?

ಸರಸಮ್ಮ, ತಂದೆ-ಮಗಳ ಆ ಭೇಟಿಯನ್ನು ಕುರಿತು ಯೋಚಿಸುತ್ತಿರಲಿಲ್ಲ. ಅವರ ಯೋಚನೆ, ಆ ಭೇಟಿಯನ್ನೂ ದಾಟ ಅನಂತರದ ಘಟನೆಗಳತ್ತ ಹರಿದಿತ್ತು....ಆ ತಂದೆ ತನ್ನ ಮಗಳನ್ನು ಇನ್ನು ಕರೆದೊಯ್ಯಬಹುದು. ನಡೆದು ಹೋದುದರ ನೆನಪಿನಮೇಲೆ ಮರವೆಯ ಪರದೆ ಇಳಿಸಿ ಹೊಸ ಅಧ್ಯಾಯವನ್ನು ಆರಂಭಿಸಬಹುದು....

ಸಾಮಾನ್ಯವಾಗಿ ಅಂತಹ ಸಂಭವದಿಂದ ಸರಸಮ್ಮನಿಗೆ ಸಂತೋಷವಾಗಬೇಕು. ಆದರೆ ಈ ಸಲ ಮಾತ್ರ ಅದನ್ನು ನೆನೆಸಿದಾಗ ಅವರಿಗೆ ವ್ಯಥೆಯಾಗುತಿತ್ತು.

ಅದೊಂದು ಸೋಜಿಗ. ಬದುಕಿನಲ್ಲಿ ಎಡವಿ ಬಿದ್ದ ತುಂಗಮ್ಮ ಅಭಯಧಾಮವನ್ನು ಅರಸಿಕೊಂಡು ಬಂದ ದಿನದಿಂದಲೆ ಸರಸಮ್ಮನ ಹೃದಯವನ್ನು ಸೂರೆಗೊಂಡಿದ್ದಳು. ಒಳ್ಳೆಯ ಗುಣವನ್ನು ಕಂಡಾಗಲೆಲ್ಲ ಬಲು ಸುಲಭವಾಗಿಯೆ ಪ್ರಕಟಗೊಳ್ಳುವ ಸರಸಮ್ಮನ ಆತ್ಮೀಯತೆಯ ಒರತೆ, ತುಂಗಮ್ಮನ ವಿಷಯದಲ್ಲಿ ಹೊನಲಾಗಿ ಹರಿದು ಆ ಎಳೆಯ ಜೀವವನ್ನು ಸುಖಿಯಾಗಿ ಮಾಡಿತ್ತು.

ಅಂತಹ ಒಳ್ಳೆಯ ಹುಡುಗಿ ತಮ್ಮ ಬಳಿಯಲ್ಲೇ ತಮಗೆ ಬೆಂಬಲವಾಗಿ ಇರುವುದು ಸಾಧ್ಯವಾದರೆ—?

ಜೀವಮಾನವನ್ನೆಲ್ಲ ಈ ಪುಟ್ಟ ವೃತ್ತದೊಳಗೇ ಕಳೆ ಎಂದು ಆಕೆಗೆ ಆಹ್ವಾನ ಕೊಡುವುದಾದರೂ ಹೇಗೆ?

ಬರೆವಣಿಗೆಯನ್ನು ನಿಲ್ಲಿಸಿ ಸರಸಮ್ಮ, ತುಂಗಮ್ಮನನ್ನೇ ದಿಟ್ಟಿಸಿ ನೋಡಿದರು. ತುಂಗಮ್ಮ ಉಟ್ಟಿದ್ದುದು ಸರಸಮ್ಮನ ಸೀರೆ. ತಾವು ವಿಧವೆಯಾದ ಮೇಲೊಮ್ಮೆ ತಮ್ಮ ಬಾಳಿನ ಕತ್ತಲೆಯಲ್ಲಿ ಚಂದ್ರೋದಯವಾಗುತ್ತದೆಂದು ಸರಸಮ್ಮ ಭಾವಿಸಿದ್ದದಿನ, ಅಂತಹದೇ ಸೀರೆಯನ್ನು ಅವರು ಉಟ್ಟಿದ್ದರು. ಬಿಳಿಯಮೇಲೆ ನೀಲಿ ಚುಕ್ಕೆಗಳಿದ್ದ ಸಾದಾ ಸೀರೆ. ಅದರ ಸರಳತೆಯೇ ಒಂದು ರೀತಿಯ ಸೊಬಗು. ಆದರೆ ಆ ಚಂದ್ರೋದಯದ

ಕಲ್ಪನೆ ಬರಿಯ ಭ್ರಮೆಯಾಗಿತ್ತು. ಆ ಕಲ್ಪನೆಯ ಮಧುರತೆಯೇ ಅವರ ಪಾಲಿಗೆ ಉಳಿದಿದ್ದ ನೆನಪು. ಅದಕ್ಕೆ ಸಾಕ್ಷ್ಯವಾಗಿ, ಆ ದಿನ ಉಟ್ಟಿದ್ದುದೇ ಅವರ ಮೆಚ್ಚುಗೆಯ ಸೀರೆಯಾಗಿತ್ತು. ಅಂದಿನಿಂದ ಆಗಾಗ್ಗೆ ಅಂತಹ ಸೀರೆಯೊಂದನ್ನು ಅವರು ಕೊಳ್ಳುತ್ತ ಬಂದಿದ್ದರು.

ತುಂಗಮ್ಮ ಅಭಯಧಾಮಕ್ಕೆ ಬಂದ ಮೂರನೆಯ ದಿನವೆ, ಬದಲಿ ಉಟ್ಟುಕೊಳ್ಳಲೆಂದು ಆಕೆಗೊಂದು ಸೀರೆಯನ್ನು ಸರಸಮ್ಮ ಕೊಡಬೇಕಾಯಿತು. ಆಗ, ಹೆಚ್ಚುಕಡಿಮೆ ಹೊಸದೇ ಆಗಿದ್ದ ತಮ್ಮ ಮೆಚ್ಚುಗೆಯ ಸೀರೆಯನ್ನೇ ಅವರು ಕೊಟ್ಟರು.

ಆದರೆ ಆ ಸೀರೆಗೆ ಸರಸಮ್ಮನ ಬಾಳ್ವೆಯಲ್ಲಿದ್ದ ವಿಶಿಷ್ಟಸ್ಥಾನದ ವಿಷಯ ಹುಡುಗಿಯರಿಗೆ ತಿಳಿದಿರಲಿಲ್ಲ - ಜಲಜೆಗೂ ಕೂಡಾ. ಅದು, ಸರಸಮ್ಮ ಭದ್ರವಾಗಿ ತಮ್ಮೊಳಗೇ ಕಾಯ್ದಿಟ್ಟುಕೊಂಡಿದ್ದ ಪವಿತ್ರ ರಹಸ್ಯವಾಗಿತ್ತು. ಅದೊಂದನ್ನೂ ತಿಳಿಯದೆಯೇ ತುಂಗಮ್ಮ ಆ ಸೀರೆಯನ್ನುಟ್ಟಿದ್ದ ತುಂಗಮ್ಮನನ್ನು ನೋಡಿದಾಗ ಮಾತ್ರ ಸರಸಮ್ಮನಿಗೆ ತಮ್ಮದೇ ಬದುಕಿನ ಕಳೆದು ಹೋದ ಅಧ್ಯಾಯವೊಂದು ನೆನಪಿಗೆ ಬರುತಿತ್ತು.

ಆಗ ಅವರು ಮನಸಿನಲ್ಲೆ ಅಂದುಕೊಳ್ಳುತಿದ್ದರು :

ತುಂಗಮ್ಮನ ಬಾಳು ಹಸನಾಗಬೇಕು. ಆಕೆ ಸುಖ ಕಾಣಬೇಕು. ಆಕೆಯ ಬದುಕಿನ ಗಿಡ ಬೆಳೆದು ಹೆಮ್ಮರವಾಗಬೇಕಲ್ಲದೆ, ಈಗಲೆ ಬಾಡಿ ಒಣಗಿ ಹೋಗಬಾರದು....

"ಯಾಕೆ ದೊಡ್ಡಮ್ಮ, ಹಾಗೆ ನೋಡ್ತಿದೀರಿ ನನ್ನ ?"

ಯೋಚನೆಗಳ ನಾವೆ ಕುಲುಕಿದಂತಾಗಿ ಸರಸಮ್ಮ ಎಚ್ಚರಗೊಂಡರು.

"ಅಯ್ಯೊ, ಯಾಕೂ ಇಲ್ಲ. ನೋಡ್ಬಾರ್ದೇನೆ ನಿನ್ನ ?"

"ದೃಷ್ಟಿತಾಕುತ್ತೆ" ಎನ್ನುವ ಉತ್ತರ ತುಂಗಮ್ಮನ ನಾಲಿಗೆಯ ತುದಿಗೆ ಬಂತು. ಆದರೆ ಹಾಗೆ ಹೇಳುವ ಧೈರ್ಯಸಾಲವೆ ಅದನ್ನು ಆಕೆ ತಡೆ ಹಿಡಿದಳು. ಅದರ ಬದಲು ಆಕೆಯ ತುಟಿಗಳಮೇಲೆ ನಗು ರೂಪುಗೊಂಡಿತು.

ಆಗ ಒಮ್ಮೆಲೆ, ತಮಗೇ ಅನಿರೀಕ್ಷಿತವೆಂಬ ತೋರಿವ ರೀತಿಯಲ್ಲಿ, ಸರಸಮ್ಮ ಕೇಳಿದರು :

"ನಿಮ್ತಂದೆ ಬಂದ್ರೇಲೆ ಹೊರಟ್ಹೋಗ್ತೀಯೇನಮ್ಮ ತುಂಗ?"

ಆ ಪ್ರಶ್ನೆಗೆ ತುಂಗಮ್ಮ ಸಿದ್ಧವಾಗಿರಲಿಲ್ಲ. ಏನು ಉತ್ತರ ಕೊಡ ಬೇಕೆಂಬುದೇ ತೋಚಲಿಲ್ಲ ಆಕೆಗೆ. ಆದರೂ ಪ್ರಬಲವಾಗಿಯೆ ಎದ್ದು ಕಾಣಿಸಿಕೊಂಡ ಮುಂದೇನು ಪ್ರಶ್ನಾರ್ಥಕ ಚಿಹ್ನೆ ಆಕೆಯನ್ನು ಅಧೀರಳಾಗಿ ಮಾಡಿತು.

"ನಂಗೊತ್ತಿಲ್ಲ ದೊಡ್ಡಮ್ಮ. ಏನಂತಾರೊ ನಮ್ಮಣ್ಣ?"

ತಾವು ಪ್ರಶ್ನೆಕೇಳಿದ ತಪ್ಪನ್ನು ತಿದ್ದಿಕೊಳ್ಳುವವರಂತೆ ಸರಸಮ್ಮ ನೆಂದರು :

"ಸರಿಬಿಡು. ಆಮೇಲೆ ಮಾಡಿದರಾಯ್ತು ಆ ಯೋಚ್ನೆ".

ಸ್ವಲ್ಪಹೊತ್ತು ಮೌನವಾಗಿದ್ದು ತುಂಗಮ್ಮ ಬೇರೆಮಾತು ತೆಗೆದಳು :

"ಇವತ್ನಿಂದ ಜಗಲೀಲೆ ಮಲಗ್ತೀನಿ ದೊಡ್ಡಮ್ಮ."

"ಯಾಕೆ ಒಳಗೆ ಸೆಖೇನಾ?"

"ಹಾಗಲ್ಲ ದೊಡ್ಡಮ್ಮ. ನಾನೇನೂ ಇನ್ನು ರೋಗಿ ಅಲ್ಲವಲ್ಲ. ಬೇರೆಯವರ ಜತೇಲೆ ಹೊರಗೆ ಮಲಗೋದು ನ್ಯಾಯ ಅಲ್ವೆ?"

ನಟನೆಯ ಗದರಿಕೆಯ ಧ್ವನಿಯಲ್ಲಿ ಸರಸಮ್ಮ ಹೇಳಿದರು :

"ಸಾಕ್ಸಾಕು! ತಿಳ್ದೋರಹಾಗೆ ಜಾಸ್ತಿ ಮಾತಾಡ್ಬೇಡ. ಇನ್ನೂಹಸಿಮೈ —ಆಗ್ಲೇ—"

"ಹಾಗಲ್ಲ ದೊಡ್ಡಮ್ಮ. ಬೇರೆ ಹುಡುಗೀರು ಏನೂ ಅನ್ನೊಲ್ವೆ?"

ತಾನು ಅಭಯಧಾಮಕ್ಕೆ ಬಂದ ಮೂರನೆ ದಿನ ಬೆಳಗ್ಗೆ ಕಳ್ಳಿ ದಮಯಂತಿ ಜಲಜೆಯನ್ನು ಕುರಿತು ಆಡಿದ್ದಮಾತನ್ನು ತುಂಗಮ್ಮ ಮರೆತಿರ ಲಿಲ್ಲ. ಆದರೂ ಸರಸಮ್ಮನ ನಿರ್ಧಾರದ ಸ್ವರ ಕೊನೆಯ ಮಾತು ಹೇಳಿತು :

"ಅಮ್ಮ ತುಂಗಾ! ಇಲ್ಲಿ ನಾನು ಮೇಟ್ರನ್. ತಿಳೀತಾ?"

ತುಂಗಮ್ಮ ನಿರುತ್ತರಳಾದಳು.

ಕಾಲಕಳೆಯುವ ಸಮಸ್ಯೆಗೆ ಪರಿಹಾರವಾಗಿ ಆಕೆ ಆ ಕೊಠಡಿಯಲ್ಲಿದ್ದ ಸಣ್ಣ ಪುಟ್ಟ ಸಾಮಗ್ರಿಗಳನ್ನೆತ್ತಿ, ಫೂ ಎಂದು ಧೂಳು ಊದಿ, ಮತ್ತೆ ಅಲ್ಲಿಯೆ ಇಡ ತೊಡಗಿದಳು. ಸರಸಮ್ಮ ಅದಕ್ಕೂ ಆಕ್ಷೇಪಿಸಿದರು. ಸಂದರ್ಶಕರ

ಉಪಯೋಗಕ್ಕೆಂದು ಅಲ್ಲಿ ಹಾಕಿದ್ದ ಪುಟ್ಟ ಒರಗು ಬೆಂಚನ್ನು ತೋರಿಸುತ್ತ ಅವರೆಂದರು.

"ತುಂಗಾ, ತೆಪ್ಪಗೆ ಅಲ್ಲಿ ಕೂತ್ಕೊಮ್ಮ ನೀನು."

"ನಾನೊಲ್ಲೆ. ಬೇರೆ ಹುಡುಗೀರು ಏನಾದ್ರೂ ಅಂತಾರೆ."

ಸರಸಮ್ಮನಿಗೆ ರೇಗಿಹೋಯಿತು.

"ಸಾಕು ಹುಚ್ಚುಚ್ಚಾರ! ಏನಾದರೂ ಪುಸ್ತಕ ಹಿಡಕೊಂಡು ಓದ್ತಾ ಕೂತ್ಕೊ!"

ಮನಸ್ಸಿಲ್ಲದ ಮನಸಿನಿಂದ ತುಂಗಮ್ಮ, ಪುಸ್ತಕಗಳಿದ್ದ ಬೀರುವಿನತ್ತ ಸಾಗಿದಳು.

ಆಗ ಜಲಜೆಯ ಸ್ವರ ಕೇಳಿಸಿತು:

"ಓ! ಇಲ್ಲಿದೀಯಾ. ಆ ಹುಡುಗೀರು ಹೇಳೋದಕ್ಕೂ ನೀನು ಮಾಡೋದಕ್ಕೂ ಸರಿಹೋಯ್ತು."

ತುಂಗಮ್ಮ ತಿರುಗಿ ನೋಡಿದಳು.

ಜಲಜೆಯ ಎದುರು ಹುಬ್ಬುಗಳನ್ನೇರಿಸುತ್ತ ಸರಸಮ್ಮ ಕೇಳಿದರು:

"ಅದೇನೆ ಹುಡುಗೀರು ಹೇಳ್ತಿರೋದು?"

"ತುಂಗಕ್ನಿಗೆ ಈಗ್ಲೇ ಪುಕೀ ಅಂತ ಹೆಸರಿಟ್ಬಿಟ್ಟಿದಾರೆ ದೊಡ್ಡಮ್ಮ."

"ಓ!"

ಸರಸಮ್ಮ ನಕ್ಕರು. ತುಂಗಮ್ಮನಿಗೆ ಮಾತ್ರ ಅರ್ಥವಾಗಲಿಲ್ಲ. ಕಳವಳ ಕುತೂಹಲಗಳೆರಡೂ ಬೆರೆತ ಧ್ವನಿಯಲ್ಲಿ ಆಕೆ ಜಲಜೆಯನ್ನು ಕೇಳಿದಳು:

"ಅದೇನೆ ಜಲಜ ಹಾಗಂದ್ರೆ?"

"ಪುಕೀ – ನಿಂಗೊತ್ತಿಲ್ವೆ ತುಂಗಕ್ಕ?"

"ಇಲ್ಲ, ಹೇಳು."

"ಪುಸ್ತಕ ಕೀಟ ಅಂತ. ಅದೇನು ತುಮಕೂರು ಸ್ಕೂಲೊ ನಿಮ್ಮದು! ಇಷ್ಟೂ ಹೇಳ್ಕೊಟ್ಟಿಲ್ವೆ ಅಲ್ಲಿ?"

"ಹೌದು ಅದನ್ನೆಲ್ಲ ಹೇಳ್ಕೊಡೋಕೇ ಸ್ಕೂಲು ಇರೋದು."

—ಎಂದು ಸರಸಮ್ಮ ಜಲಜೆಯನ್ನು ಅಣಕಿಸಿದರು.

ತುಂಗವ್ಮ್ಮ ನಕ್ಕು ಸಮಾಧಾನದ ಉಸಿರುಬಿಟ್ಟಳು. ಪುಸ್ತಕಕೀಟ ಎನ್ನುವುದು ಲಜ್ಜೆ ಪಟ್ಟುಕೊಳ್ಳಬೇಕಾದ ವಿಷಯವೇನೂ ಆಗಿರಲಿಲ್ಲ.

ಜಲಜ ಕಾರ್ಯನಿಮಿತ್ತದಿಂದ ಬಂದಿದ್ದಳು.

"ದೊಡ್ಡಮ್ಮ, ನಿಮ್ಮ ಒಪ್ಪಿಗೆ ಪಡೆಯೋಕೆ ನನ್ನ ಕಳಿಸಿದಾರೆ ಒಪ್ಪಿಗೆ ಕೊಡ್ತೀರಾ?"

"ಏನು ಸಮಾಚಾರ?"

"ಒಪ್ಪಿಗೆ ಕೊಡ್ತೀರಿ ತಾನೆ?"

"ಸಾಕು ಹುಡುಗಾಟ!"

ದೊಡ್ಡಮ್ಮನ ಸ್ವರವನ್ನೂ ಮುಖಮುದ್ರೆಯನ್ನೂ ಗಮನಿಸಿ ಜಲಜ ಗಂಭೀರಳಾದಳು.

"ಇವತ್ತು ಸಾಯಂಕಾಲ ಸುಮತೀ ನರ್ತನ ಇಟ್ಕೋಬೇಕೂಂತ ಮಾಡಿದೀವಿ. ಜತೇಲೆ ಸುಂದ್ರಾ ಮತ್ತು ರಾಧಾ ದೇವರ ನಾಮ ಹೇಳ್ತಾರೆ. ತುಂಗಕ್ಕನಿಗೆ ಗುಣವಾಗಿದೇಂತ ಈ ಕಾರ್ಯಕ್ರಮ."

"ಅಷ್ಟೇತಾನೆ? ಸರಿ. ರಾತ್ರೆ ಅಡುಗೆ ಮಾಡಿ ಆದ್ಮೇಲೆ ಕಾರ್ಯಕ್ರಮ ಶುರುವಾಗ್ಲಿ. ಎಲ್ಲಿ ಇಟ್ಕೋತೀರಾ?"

ಸಂತೋಷದಿಂದ ಜಲಜೆಯ ಮುಖ ಗೆಲುವಾಯಿತು.

"ಹಜಾರದಲ್ಲೇ. ತುಂಗಕ್ಕನ ರೂಮ್ನಲ್ಲಿ ಜಾಗ ಇಲ್ಲ. ಹಜಾರದಲ್ಲೇ ಮೇಲು, ಅಲ್ವೆ ದೊಡ್ಡಮ್ಮ?"

"ಹೂಂ ಹೌದು. ಸಂಗೀತದ ಮೇಷ್ಟ್ರನ್ನೂ ಇರೋಕೆ ಹೇಳ್ತೀರೊ?"

"ಇಲ್ಲ. ಆ ಅಮ್ಮ ಇದ್ರೆ ಸುಮತಿ ಕುಣಿಯೋಲ್ವಂತೆ?"

"ಸರಿ ಸರಿ. ನಾನೂ ಹೊರಟ್ಹೋಗ್ಬೇಕೊ?"

"ನೀವು ಇರ್ಬೇಕು ದೊಡ್ಡಮ್ಮ. ಅಯ್ಯೊ!"

ಅಷ್ಟು ಹೇಳಿ, ಕಾಯಕ್ರಮದ ಸಿದ್ಧತೆಯ ಭಾರ ಹೊತ್ತ ಜಲಜ ಹೊರಟು ಹೋದಳು.

"ನಾನೂ ಹೋಗ್ತೀನಿ ದೊಡ್ಡಮ್ಮ"

—ಎನ್ನುತ್ತ ತುಂಗಮ್ಮನೂ ಜಲಜೆಯನ್ನು ಹಿಂಬಾಲಿಸಿದಳು.

ಜಲಜ,—ಸರಸಮ್ಮನ ನಂಬುಗೆಗೆ ಅರ್ಹಳಾಗಿದ್ದ ಹುಡುಗಿ ಸ್ನೇಹ

ಮಯಿ. ಸದ್ಗುಣಗಳ ಖನಿ. ಆಕೆ ಅಭಯಧಾಮಕ್ಕೆ ಬಂದುದರಿಂದಲೆ, ಅಲ್ಲಿನ ವಾತಾವರಣದ ಕಾರಣದಿಂದಲೆ, ತಾವು ತೋರಿದ ಪ್ರೀತಿಯ ಪರಿಣಾಮವಾಗಿಯೆ, ಜಲಜ ಒಳ್ಳೆಯವಳಾಗಿ ಮಾರ್ಪಟ್ಟಳೆಂಬುದನ್ನು ಸರಸಮ್ಮ ಅರಿತಿದ್ದರು. ಮೊದಲು ಆಕೆಯಲ್ಲಿದ್ದುದು ಸಂದೇಹ ಪ್ರಕೃತಿ. ಕ್ರಮೇಣ ಅದು ಮರೆಯಾಗಿ, ಅದರ ಜಾಗದಲ್ಲಿ ಸಂಕೋಚ ಪ್ರವೃತ್ತಿ ಮೆರೆಯಿತು. ಬೇಗನೆ ಆ ಘಟ್ಟವನ್ನೂ ದಾಟಿ ಆಕೆ ಅಭಯಧಾಮದ ಕೆಲವೇ ಆಧಾರ ಸ್ತಂಭಗಳಲ್ಲಿ ಒಬ್ಬಳಾದಳು.

ಒಂದಲ್ಲ ಒಂದು ದಿನ ಈ ಹಕ್ಕಿ ಗೂಡು ಬಿಟ್ಟು ಹಾರಿ ಹೋಗುವು ದೆಂಬುದರ ಬಗ್ಗೆ ಸರಸಮ್ಮನಿಗೆ ಸಂಶಯವಿರಲಿಲ್ಲ. ಯಾರ ಕಣ್ಣಿಗಾದರೂ ಆಕೆ ಬಿದ್ದು ಒಳ್ಳೆಯ ವರ ಕೂಡಿಬಂದರೆ ಜಲಜೆಯನ್ನು ಬೇಗನೆ ಮದುವೆ ಮಾಡಿಸಿ ಕಳುಹಿಸಬೇಕೆಂಬುದೇ ಸರಸಮ್ಮನ ಅಪೇಕ್ಷೆಯಾಗಿತ್ತು. ಹಾಗೆ ಹೋಗುವ ಜಲಜ, ಅಭಯಧಾಮದ ಹಿರಿಮೆಯ ಕೀರ್ತಿಪತಾಕೆಯೊಡನೆ ಹೋಗುತಿದ್ದಳು....ಜಲಜ ತಮ್ಮ ಪ್ರೀತಿಪಾತ್ರಳಾಗಿದ್ದರೂ ಆಕೆ ಹೋಗು ವುದರಿಂದ ತಾವು ದುರ್ಬಲರಾದೇವೆಂದು ಸರಸಮ್ಮನಿಗೆ ಅನಿಸುತ್ತಿರಲಿಲ್ಲ.

ಆದರೆ ತುಂಗಮ್ಮನ ವಿಷಯವೇ ಬೇರೆ. ಬೌದ್ಧಿಕವಾಗಿ ಆಕೆಗೂ ಜಲಜೆಗೂ ನಡುವೆ ಅಳೆಯಲಾಗದ ಅಂತರವಿತ್ತು. ಜಲಜೆಯಲ್ಲಿ ಸರಸಮ್ಮ ಕಂಡುದು ಒಂದು ಸಂಸಾರವನ್ನು ಬೆಳಗಿಸುವ ಶಕ್ತಿ. ತುಂಗಮ್ಮನಲ್ಲಿ ಮಾತ್ರ ಅಪರಿಮಿತವಾದ ಸುಪ್ತ ಸಾಮರ್ಥ್ಯವಿದೆ ಎಂಬುದು ಅವರ ಅಭಿಪ್ರಾಯ ವಾಗಿತ್ತು.

ಸರಸಮ್ಮ, ಮೇಜಿನ ಕೆಳಗೆ ಕಾಲು ಚಾಚಿ ಕುರ್ಚಿಗೊರಗಿ ಕುಳಿತರು.

ಕಟ್ಟಡದೊಳಗಿನ ಹೂದೋಟದೊಂದು ಮೂಲೆಯಲ್ಲಿ ಸೂರ್ಯಕಾಂತಿ ಹೂವೊಂದು ಅಷ್ಟಗಲಕ್ಕೆ ಅರಳಿ ಸರಸಮ್ಮನನ್ನೇ ನೋಡುತಿತ್ತು.

ಅಭಯಧಾಮದಲ್ಲಿ ಕೆಲಸಮಾಡಲು ಸರಸಮ್ಮ ಬಂದಾಗ, ಅವರ ಯೌವನ ಕಾನನದ ಕುಸುಮವಾಗಿ ಕಳೆಗುಂದಿತ್ತು. ಹೃದಯವೋ ಕಪಿ— ಕಲ್ಲು. ಮೊದಲು ಹೊತ್ತುಕಳೆಯುವ, ಒಂದಿಷ್ಟು ಸಂಪಾದಿಸುವ, ವೃತ್ತಿಯಾಗಿದ್ದುದು, ಕ್ರಮೇಣ ಜೀವಿತದ ಮಹಾಧ್ಯೇಯವಾಗಿ ಮಾರ್ಪಟ್ಟಿತು....ಆಗ ಕಟ್ಟಡವಿದ್ದುದು ಇಕ್ಕಟ್ಟಾದ ಜಾಗದಲ್ಲಿ. ಯಾವ

ಅನುಕೂಲತೆಯೂ ಇರಲಿಲ್ಲ. ವಾರಕ್ಕೊಬ್ಬಳು ಹುಡುಗಿಯಾದರೂ ತಪ್ಪಿಸಿ ಕೊಂಡು ಓಡಿಹೋಗುತಿದ್ದಳು. ಅದಕ್ಕೆ ಕಾರಣ, ದೇಹಕ್ಕಂಟಿದ ಚಟವಲ್ಲ; ತುಂಬದೇ ಇದ್ದ ಹೊಟ್ಟೆ....ಆ ಬಳಿಕ ಆಡಳಿತ ಸಮಿತಿ ಬದಲಾಯಿತು. ಅನಾಮಧೇಯರೊಬ್ಬರು ಹೊಸಕಟ್ಟಡಕ್ಕಾಗಿ ಇಪ್ಪತ್ತೈದು ಸಾವಿರ ರೂಪಾಯಿಯ ಸಹಾಯಧನವನ್ನಿತ್ತರು. ಸಮಿತಿಯ ಕಾರ್ಯದರ್ಶಿನಿಗೆ ಈ ಕೆಲಸ ಸ್ವಯಂಪ್ರತಿಷ್ಠೆಯನ್ನು ಬೆಳೆಸುವ ಸಾಧನವಾಗಿರಲಿಲ್ಲ. ಮತ ಪ್ರಸಾರಕರೂ ನಾಚುವಹಾಗೆ ಆಕೆ ಪತಿತೆಯ ಉದ್ಧಾರಕ್ಕಾಗಿ ದುಡಿದರು.

ಆ ರೀತಿ ಎಷ್ಟು ಉದ್ಧಾರವಾಯಿತೆನ್ನುವ ಮಾತು ಬೇರೆ. ಎಷ್ಟೋ ವೇಳೆ ಸರಸಮ್ಮನಿಗೆ ನಿರಾಶೆ-ನಿರುತ್ಸಾಹಗಳುಂಟಾಗುತಿದ್ದುವು. ಆದರೂ ತಾವು ಮಾಡುತಿದ್ದುದು ಒಳ್ಳೆಯ ಕೆಲಸವೆಂಬ ಅವರ ವಿಶ್ವಾಸ ಅಚಲ ವಾಗಿತ್ತು.

ಸರಸಮ್ಮನ ತಲೆಗೂದಲೆಲ್ಲ ಬಿಳಿಯಾದುದು ಆ ಬದುಕಿನಲ್ಲೆ. ಎಷ್ಟೊಂದು ಜನಕ್ಕೆ ಅವರು ದೊಡ್ಡಮ್ಮನಾಗಿರಲಿಲ್ಲ!....ಕಾಹಿಲೆ ಬಿದ್ದು ನರಳಿದ ಮೇಲೂ ಅದೇ ಕೊಂಪೆಗೆ ಓಡಿ ಹೋದವರು, ಕ್ರಮಬದ್ಧ ಜೀವ ನಕ್ಕೆ ಒಳಗಾಗಲಾರದೆ ಪ್ರತಿಭಟಿಸಿ ತಪ್ಪಿಸಿಕೊಂಡವರು, ಮದುವೆಯಾಗಿ ಹೋದಮೇಲೂ ಹಳೆಯ ಜೀವನಕ್ಕೆ ಹಿಂದಿರುಗಿದವರು ಹಲವರಿದ್ದರೂ ಸರಿಯಾದ ಹಾದಿಯಲ್ಲಿ ಸಾಗಿ ಮನುಷ್ಯ ಜೀವಿಗಳು ಎನ್ನಿಸಿಕೊಂಡವರ ಸಂಖ್ಯೆಯೇನೂ ಕಡಿಮೆಯಾಗಿರಲಿಲ್ಲ. ಅಂಥವರನ್ನು ನೆನೆಸಿಕೊಂಡಾಗ ಸರಸಮ್ಮನಿಗೆ ಸಮಾಧಾನವೆನಿಸುತಿತ್ತು....

ಆ ಸೂರ್ಯಕಾಂತಿ ಹೂ-ಹೂದೋಟ....

ಹಿಂದೆ ಅಭಯಧಾಮವಿದ್ದ ಕಟ್ಟಡದಲ್ಲಿ ಹೂದೋಟವಿರಲಿಲ್ಲ. ಹೂ ಹೋಗಲಿ, ಒಂದು ತುಳಸಿ ಕಟ್ಟೆಯೂ ಇರಲಿಲ್ಲ. ಈಗಿನದು, ಈಗ ಎಂಟು ವರ್ಷಗಳ ಹಿಂದೆ ಸಿದ್ಧವಾದ ಹೊಸಕಟ್ಟಡ. ಅದರ ನಿರ್ಮಾಣದಲ್ಲಿ ಸರಸಮ್ಮ ಬಹಳ ಆಸಕ್ತಿ ವಹಿಸಿದ್ದರು....ಆಗ ಪತ್ರಿಕೆಗಳು ವರದಿ ಮಾಡಿದ ಹಾಗೆ 'ದಿವಾನರ ಪತ್ನಿಯವರ ಅಮೃತ ಹಸ್ತದಿಂದಲೇ' ಅಭಯಧಾಮದ ಹೊಸಕಟ್ಟಡದ ಉದ್ಘಾಟನೆಯಾಯಿತು.

ಹೊಸಕಟ್ಟಡದೊಡನೆ ಆರಂಭವಾದುದು ಹೊಸ ಅಧ್ಯಾಯ.

ತಾವೇ ಅಲ್ಲಿ ಇಲ್ಲಿ ಕಾಡಿ ಬೇಡಿ ಹೂ ಗಿಡಗಳನ್ನೂ ಬೀಜಗಳನ್ನೂ ತಂದು ನೆಟ್ಟರು. ಹುಡುಗಿಯರ ಜತೆಯಲ್ಲಿ ತಾವೂ ಪಾತಿಗಳಿಗೆ ನೀರೆರೆದರು.

ಮೊದಲು ಗುಲಾಬಿಯ ಮೊಗ್ಗು.... ಮಲ್ಲಿಗೆಯ ಕಂಪಿನ ಮೊದಲದಿನ....

ಆ ಬಳಿಕ ನಗುತ್ತ ಅರಳತೊಡಗಿದ ಸೂರ್ಯಕಾಂತಿ....

...."ಪೋಸ್ಟ್!"

—ಆ ಪದ ಸರಸಮ್ಮನನ್ನು ಎಚ್ಚರಗೊಳಿಸಿತು. ಕಿಟಕಿಯ ಮೂಲಕ ಏನೋ ಹಾದುಬಂದು ಕೊಠಡಿಯೊಳಕ್ಕೆ ಬಿತ್ತು. ಸರಸಮ್ಮ ಎದ್ದುನಿಂತು ತಿರುಗಿನೋಡಿದರು.

ಕಾಗದಗಳಿರಲಿಲ್ಲ. ಇದ್ದುದೊಂದೇ ಪತ್ರಿಕೆ. ಸಂಪಾದಕರೊಬ್ಬರು ಆ ವಾರಪತ್ರಿಕೆಯನ್ನು ಅಭಯಧಾಮಕ್ಕೆಂದು ಉಚಿತವಾಗಿ ಕಳುಹುತಿದ್ದರು.

ಅದನ್ನೆತ್ತಿಕೊಂಡು ಬಿಡಿಸಿದರು ಸರಸಮ್ಮ.

....ಹೊದಿಕೆಯಮೇಲೆ ತುಂಟತನ - ಮುಗ್ಧತೆಗಳ ಪ್ರತಿಮೂರ್ತಿಯಾದೊಂದು ವಿಶಾಲ ವದನದ ಭಾವ ಚಿತ್ರವಿತ್ತು. ಅದರ ಕೆಳಗೆ ಬರೆದಿದ್ದರು:

'ಭಾರತೀಯ ಚಿತ್ರರಂಗದಲ್ಲಿ ಉದಿಸಿರುವ ನವತಾರೆ - ನಿಮ್ಮ.'

ಸಂಜೆ, ಹಾರ್ಮೋನಿಯಂ ಸ್ವರಹೊರಡಿಸಿತು. ಮೃದಂಗ ತಂ - ತಂ ಎಂದು ಧ್ವನಿಗೂಡಿಸಿತು. ಗಜಲ್ ಗಜಲ್ ಎಂದಿತು ಸುಮತಿಯ ಕಾಲಗೆಜ್ಜೆ...

ಸರಸಮ್ಮನಿಗೆ ಅದನ್ನೆಲ್ಲ ನೋಡಿ ಆಶ್ಚರ್ಯವೆನಿಸುತಿತ್ತು. ಮುಖ ಕೈಗಳಿಗೆ ಬಳಿದಿದ್ದ ಆ ಬಣ್ಣವನ್ನು ಅವರು ಹೇಗೆ ತಯಾರಿಸಿದರೊ! ಕಚ್ಚೆಯುಟ್ಟಿದ್ದ ಬಣ್ಣದಸೀರೆ. ಎರಡು ತಿಂಗಳ ಹಿಂದೆ ಬಂದ ತೆಲುಗು ಹುಡುಗಿಯದಿರಬೇಕು. ಎದ್ದು ನಿಂತಿದ್ದ ಮಾಟವಾದ ಎದೆಯನ್ನು ನೋವಾಗದಂತೆ ಮುಚ್ಚಿದ್ದ ರೇಷ್ಮೆಯ ಕುಪ್ಪಸ. ವರ್ಷದ ಆರಂಭದಲ್ಲಿ ಅಭಯಧಾಮವನ್ನು ಬಿಟ್ಟುಹೋದ ಶ್ರೀಮಂತ ಹುಡುಗಿ ಅದನ್ನು ಕೊಟ್ಟಿರಬೇಕು.

ದಿಮಿ ಧಿಮಿ ತಕ - ತಕ ಥಕ ಧಿಮಿ....ತದಿಗಡತ್ತೋಂ....

ಸುಮತಿ, ಕೈ ಜೋಡಿಸಿ ಬಾಗಿ ನಮಿಸಿದಾಕೆ, ಹಗ್ಗ ಹರಿದುಕೊಂಡ ಕರುವಿನ ಹಾಗೆ, ನಡುವಿನಲ್ಲಿ ಖಾಲಿಯಾಗಿರಿಸಿದ್ದ ವೃತ್ತದೊಳಗೆ ಸುತ್ತು ಸುತ್ತುವರಿದು ಕುಣಿದಳು.

ಸರಸಮ್ಮನಿಗೆ ಗೊತ್ತಿತ್ತು. ಹುಡುಗಿಯರಿಗೂ ತಿಳಿದಿತ್ತು ಆ ವಿಷಯ. ಆಕೆ ಕಸಬಿನವಳು. ಆದರೆ ಆಕೆ ಆ ಜೀವನದಿಂದ ತಪ್ಪಿಸಿಕೊಂಡು, ಬಂದಿದ್ದಳು. ಪೋಲೀಸರು ನಡುರಾತ್ರೆಯಲ್ಲಿ ಬೀದಿಯಲ್ಲಿ ಒಬ್ಬಂಟಿಗಳಾಗಿಯೆ ಇದ್ದ ಆಕೆಯನ್ನು ಹಿಡಿದಾಗ ಪ್ರತಿಭಟನೆ ಇರಲಿಲ್ಲ. ತಪ್ಪಿಸಿಕೊಂಡು ಹೋಗುವ ಯತ್ನವಿರಲಿಲ್ಲ. ಅಭಯಧಾಮಕ್ಕೆ ಸೇರಿಸಲ್ಪಟ್ಟಾಗಲಂತೂ ಆಕೆಗೆ ಸಂತೋಷವಾಗಿತ್ತು.

ಈ ನೃತ್ಯ ಕಸಬಿನ ಮನೆಯಲ್ಲಿ ಆಕೆ ಕಲಿತ ಕಲೆ.

ಝುಣಕ್ ಝುಣಕ್....ಜಣಿರ್ ಜಣಿರ್....ಐ....ಟಣಕ್ ಟಣಕ್....

ಆ ನಾದಮಾಧುರ್ಯದ ಗುಂಗಿನಲ್ಲಿ ತುಂಗಮ್ಮ ಜಲಜೆ ಲಲಿತೆಯರೆಲ್ಲ ಕುಳಿತು, ತಮ್ಮೆದುರು ನೋಡಿಬೀಸುತಿದ್ದ ಸೊಬಗಿಗೆ ಮಾರುಹೋದರು. ಮುಗುಳುನಗು, ಹುಬ್ಬುಗಳ - ಎದೆಯ ಕುಣಿತ, ಹಾವಿನಂತೆ - ಬಳ್ಳಿಯಂತೆ ಬಳುಕಿ ಬಾಗುತಿದ್ದ ದೇಹ....

ಶಾಸ್ತ್ರೀಯವಲ್ಲದ ನೃತ್ಯ ನಿಜ. ಆದರೆ ನೋಡುತಿದ್ದ ಪ್ರಿಯತಮನನ್ನು — ವಿಟನನ್ನು — ಹುಚ್ಚನಾಗಿ ಮಾಡುವ ಸಾಮರ್ಥ್ಯವಿತ್ತು ಅದಕ್ಕೆ.

ನೃತ್ಯ ನೋಡಿ ಸರಸಮ್ಮ, ಸುಮತಿಯ ಪಾದಗಳ ಚಲನೆಯನ್ನೇ ದಿಟ್ಟಿಸುತ್ತ ಕುಳಿತರು.

ಆ ಬಳಿಕ ಕುರುಡಿ ಸುಂದ್ರಾ ಹಾಡು:

"ಎಲ್ಲಿರುವೆ ರಂಗ ಬಾರೋ...."

ರಾಧಾ ಹಾಡಿದಳು:

"....ನಾನು ನಿಮ್ಮಯ ದಾಸನಹುದು; ನೀವು ಈ ಜಗದೀಶನಹುದು ....ನಾನಿನ್ನ ದಾಸನಯ್ಯ...."

ಮತ್ತೆ ಸುಮತಿಯ ಬೇಟೆಗಾತಿಯ ಕುಣಿತ....

ಬೇಟೆಗಾರನಿರಲಿಲ್ಲ....ಆದರೆ ಸುಮತಿ ಲಲಿತೆಯತ್ತ ಕುಡಿನೋಟ ಬೀರುತಿದ್ದಳು. ಲಲಿತ ನಿಶ್ಚಲಳಾಗಿದ್ದಳು. ಆದರೆ ಅದನ್ನು ನೋಡಿದ ಬೇರೆ ಹುಡುಗಿಯರು ಹಲವರ ಮುಖಗಳು ಕೆಂಪಗಾದುವು.

ಕೊನೆಯದಾಗಿ ಸುಮತಿ ಕೃಷ್ಣನಾಗಿ ಕುಣಿದಳು....ಕೊಳಲನೂದುವ

ಕೃಷ್ಣ....ಆ ಮುದ್ದುಕೃಷ್ಣನ ಬಾಲಲೀಲೆಗಳು 'ಅಸಾಧ್ಯ'ವಾಗಿದ್ದುವು.... ಬೆಣ್ಣೆಯನ್ನು ಕದ್ದ ಕೃಷ್ಣ – ರಾಧೆಯನ್ನು ಮೋಹಿಸಿದ ಕೃಷ್ಣ....

ಮೊದಲ ನೃತ್ಯವಾದಾಗಲೇ ಯಾರೋ ಎದ್ದು ದೀಪ ಹಾಕಿದ್ದರು.... ವಿದ್ಯುದ್ದೀಪಗಳ ಬೆಳಕಿನಲ್ಲಿ ಕುಣಿಯುತಿದ್ದ ಕೃಷ್ಣ ಅಲ್ಲಿದ್ದ ಗೋಪಿಕಾ ಸ್ತ್ರೀಯರ ಮೇಲೆಲ್ಲಾ ಮಾಯೆಯ ಬಲೆ ಬೀಸಿದ.

ನೃತ್ಯ ಮುಗಿದಾಗ ಚೆನ್ನಾಗಿ ಕತ್ತಲಾಗಿತ್ತು.

ಜಲಜ ಎದ್ದು ನಿಂತು, "ಕಾರ್ಯಕ್ರಮ ಮುಗಿಯಿತು,....ಎಲ್ಲರಿಗೂ ವಣಕ್ಕಂ," ಎಂದಳು....

ಹುಡುಗಿಯರು ಗುಂಪು ಗುಂಪಾಗಿ ಕೃಷ್ಣನಿಗೆ ಮುತ್ತಿಗೆ ಹಾಕಿದರು. ತುಂಗಮ್ಮನೂ ಬಳಿಹೋಗಿ ಸುಮತಿಯ ಕೈ ಕುಲುಕಿ "ಚೆನ್ನಾಗಿತ್ತು?" ಎಂದಳು.

ಮೂಗಿ ಕಲ್ಯಾಣಿ ಮಾತ್ರ ನಾಚಿಕೆಯ ಮುದ್ದೆಯಾಗಿ ಮೂಲೆಯಲ್ಲಿ ನಿಂತಳು. ಲಲಿತಾ, ಗುಂಪಿನತ್ತ ಸುಳಿಯಲಿಲ್ಲ.

ಸರಸಮ್ಮ ಹುಡುಗಿಯರನ್ನೊಮ್ಮೆ ನೋಡಿನಕ್ಕು, ತಮ್ಮ ಕೊಠಡಿಗೆ ಹೋದರು. ಆದರೆ ಒಬ್ಬರೆ ಉಳಿದಾಗ ಅವರ ಮುಖದ ಮೇಲೆ ನಗುವಿರಲಿಲ್ಲ.

ದೇವತಾಪ್ರಾರ್ಥನೆ....ಆಫೀಸು ಕೊಠಡಿಯಲ್ಲಿ ಹೂದಾನಿ ಇಡುವ ಪ್ರಸ್ತಾಪ....ಊಟ....ನಿದ್ದೆ.

ಸರಸಮ್ಮನಿಗೆ ಬಹಳ ಹೊತ್ತು ನಿದ್ದೆಬರಲಿಲ್ಲ. ಸೆಖೆ ಅಸಹನೀಯ ವಾಗಿತ್ತು.

ಅವರೆದ್ದು ಹೊರಬಂದರು..ಜಗಲಿಯಲ್ಲೂ ಹಜಾರದಲ್ಲೂ ಮಲಗಿದ್ದರು ಹುಡುಗಿಯರು. ತಿಂಗಳ ಬೆಳಕು ಹಜಾರದೊಂದು ಭಾಗದ ಮೇಲೆ ಬಿದ್ದಿತ್ತು.

ಸರಸಮ್ಮ ನೋಡಿದರು – ಸುಮತಿಯ ಹಾಸಿಗೆ ಖಾಲಿಯಾಗಿತ್ತು.

ಆಕೆಯನ್ನು ಹುಡುಕುವುದು ಕಷ್ಟವಾಗಿರಲಿಲ್ಲ. ಲಲಿತೆಯ ಹಾಸಿಗೆ ಯಲ್ಲಿದ್ದಳಾಕೆ – ಮೈಮುದುಡಿಕೊಂಡು, ಲಲಿತೆಗೆ ಅಂಟಿಕೊಂಡು.

ಸರಸಮ್ಮನ ಊಹೆ ಸುಳ್ಳಾಗಿರಲಿಲ್ಲ.

ಅವರು ಮುಖಬಾಡಿಸಿಕೊಂಡು ಒಳಹೋದರು.

## ೧೧

ಮಾತು ಬಾರದೆ ಮೂಕನಾಗಿ ಕುಳಿತ ತಂದೆ, ಪ್ರೀತಿಯ ನೆಟ್ಟ ದೃಷ್ಟಿಯಿಂದ ಅಕ್ಕನನ್ನೆ ನೋಡುತಲಿದ್ದ ತಮ್ಮ, ಕಣ್ಣುಗಳಿಂದ ಗಂಗೆ ಯಮುನೆಯರನ್ನು ಹರಿಯಗೊಟ್ಟು ಕಾಲಿನಿಂದ ನೆಲಕೆರೆಯುತ್ತಾ ನಿಂತ ತುಂಗಮ್ಮ....

ಇದು ಹೊಸನೋಟವಾಗಿರಲಿಲ್ಲ ಸರಸಮ್ಮನಿಗೆ. ಅಂತಹ ಸಂದರ್ಭಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನೂ ಅವರು ತಿಳಿದಿದ್ದರು.

ತಂದೆ ಮಗಳನ್ನು ಅವರ ಪಾಡಿಗೆ ಬಿಟ್ಟು ಸರಸಮ್ಮ ತಮ್ಮ ಕೊಠಡಿಯಿಂದ ಹೊರಹೋದರು.

" ಚೆನ್ನಾಗಿದೀಯಾ ಮಗು ?"

" ಹೂಂ ಅಣ್ಣ."

" ಕಾಹಿಲೆ ಕಸಾಲೆ ಏನೂ ಇಲ್ವಾ ?''

" ಇಲ್ಲ ಅಣ್ಣ....ದೊಡ್ಡಮ್ಮ ಚೆನ್ನಾಗೇ ನೋಡ್ಕೊಂಡ್ರು."

ತಂದೆಗಾಗಲೇ ಎಲ್ಲವನ್ನೂ ವಿವರಿಸಿ ಸರಸಮ್ಮ ಕಾಗದ ಬರೆದಿದ್ದರು. ತಂದೆ ವಹಿಸಿದ ಮುನ್ನೆಚ್ಚರಿಕೆಯಿಂದಾಗಿ ತುಂಗಮ್ಮನ ತಮ್ಮನಿಗೆ ವಿವರವೊಂದೂ ತಿಳಿದಿರಲಿಲ್ಲ. "ಏನೋ ಆಗಿದೆ. ನಾರಾಯಣಮೂರ್ತಿ ಹೊರಟುಹೋದುದರಿಂದ ಅಕ್ಕನಿಗೆ ದುಃಖವಾಗಿದೆ. ಅವಳ ಮನಸ್ಸು ಕಹಿಯಾಗಿದೆ. ಅದಕ್ಕಾಗಿಯೆ, ಬೆಳಗಾಂವಿಗೆ ಎಂದು ಹೊರಟಿದ್ದವಳು ಬೆಂಗಳೂರು ಬಂದು ಸೇರಿದ್ದಾಳೆ. ಇದು ಹಾಸ್ಟೆಲು...." ಎಂದಷ್ಟೆ ಆತ ಭಾವಿಸಿದ್ದ.

" ಪದ್ದಕ್ಕ ಕಾಗ್ದ ಬರೆದಿದ್ಲಾ ಅಣ್ಣ ?"

" ಹೂಂ ತುಂಗ."

" ಅಕ್ಕನಿಗೆ ಗೊತ್ತಾ ಅಣ್ಣ ?"

ತಮ್ಮ ಬಳಿಯಲ್ಲಿ ಕುಳಿತಿದ್ದ ಮಗನನ್ನೆ ನೋಡುತ್ತ ತಂದೆಯೆಂದರು:

"ಇಲ್ಲವಮ್ಮ. ನಿನ್ನ ಕಾಹಿಲೆ ವಿಷಯ ಪದ್ದೂಗೆ ಬರೀಲೆ ಇಲ್ಲ. ಜೂನ್ ತಿಂಗಳಲ್ಲಿ ನಾನೇ ಹೋಗೋಣಾಂತಿದೀನಿ...."

ತನ್ನ ಈ ಅಕ್ಕ ಕಾಹಿಲೆ ಮಲಗಿದ್ದಳು ಹಾಗಾದರೆ ಎಂದುಕೊಂಡ ತಮ್ಮ. ಗುಣಮುಖಳಾಗಿದ್ದ ಆಕೆಯನ್ನು ಮುಟ್ಟಿ ನೋಡುವ ಆಸೆಯಾಯಿತು ಅವನಿಗೆ.

"ರಿಟೈರಾಯ್ತಲ್ಲಣ್ಣ ? ಇನ್ನೇನ್ಮಾಡ್ಬೇಕೊಂತಿದೀರಾ ?"

ಆ ಪ್ರಶ್ನೆಯನ್ನು ತಾವೇ ಮಗಳಿಗೆ ಕೇಳಬೇಕೆಂದು ಆ ತಂದೆ ಬಂದಿದ್ದರು. ಆದರೆ, ತಮಗಿಂತ ಮುಂದಾಗಿ ಮಗಳೇ ಅದನ್ನು ಕೇಳಿದ್ದಳು.

ಆದರೆ ಆ ಪ್ರಶ್ನೆಗೆ ನೇರವಾದ ಉತ್ತರವನ್ನೀಯುವುದು ಸುಲಭ ವಾಗಿರಲಿಲ್ಲ.

"ತುಮಕೂರು ಬಿಟ್ಬಿಡೋಣ್ವೆ ತುಂಗ ?"

ತುಂಗಮ್ಮನಿಗೆ ತಿಳಿದಿತ್ತು. ತನ್ನಿಂದಾಗಿಯೇ ಆ ತೀರ್ಮಾನಕ್ಕೆ ತಂದೆ ಬಂದಿದ್ದರು. ಅದರಲ್ಲಿ ಸಂದೇಹವಿರಲಿಲ್ಲ.

ಆ ತಮ್ಮನಿಗೋ, - ಅದು ಆಶ್ಚರ್ಯವನ್ನುಂಟುಮಾಡಿದ ಹೊಸ ವಿಷಯ. ಆಗಲೆ ಅವನ ಮನಸ್ಸು, ತುಮಕೂರನ್ನು ಬಿಟ್ಟು ಮುಂದೆ ತಾವು ಹೋಗಲಿರುವ ಊರನ್ನು ಚಿತ್ರಿಸಿಕೊಳ್ಳತೊಡಗಿತು.

"ಯಾಕಣ್ಣ ?"

"ಯಾಕೊ ಬೇಜಾರು. ರಿಟೈರಾದಮೇಲೆ ಆ ಊರಲ್ಲಿ ಇರೋಕೆ ಇಷ್ಟವಿಲ್ಲ."

ಆ ಮಾತಿನಲ್ಲಿ ಸ್ವಲ್ಪ ಸತ್ಯಾಂಶವೂ ಇತ್ತು. ಆದರೆ ಅದು ಬಲು ಸ್ವಲ್ಪ. ನಿಜವಾದ ಕಾರಣವನ್ನು ಅವರು ಹೇಳಲಿಲ್ಲ. ಆದರೆ, ಅವರು ಹೇಳದೆ ಇದ್ದರೂ, ತುಂಗಮ್ಮ ತಿಳಿದುಕೊಂಡಳು.

"ತುಮಕೂರು ಬಿಟ್ಟು ಎಲ್ಲಿರೋದೂಂತ ?"

"ಯಾವುದಾದರೂ ಒಂದೂರಲ್ಲಿ. ಅಂತೂ ಪುಟಾಣಿ ಓದಿಗೆ ಅನು ಕೂಲವಾಗೋಹಾಗೆ ಹೈಸ್ಕೂಲು ಇದ್ದರಾಯಿತು."

"ಬೆಳಗಾಂವಿಗೆ ಹೋಗಿ ಪದ್ದಕ್ಕನ ಮನೇಲಿ ಇರ್ತೀರಾ ?"

ತಾನು ಪ್ರಾಯಶಃ ಬರಲಾಗುವುದಿಲ್ಲವೆಂಬ ಭಾವನೆ ತುಂಗಮ್ಮನ ಮನಸ್ಸಿನಲ್ಲಿಯೆ ಆ ವರೆಗೆ ಉಳಿದಿದ್ದುದು, ಮಾತಿನ ರೂಪತಳೆದು ಹೊರ ಬಿತ್ತು. ಅದನ್ನು ಕೇಳಿ ತಂದೆಯ ಹಣೆ ನೆರಿಗೆ ಕಟ್ಟಿತು.

"ನೀನು ?"

ತುಂಗಮ್ಮ ಆ ವಿಷಯವಾಗಿ ಕೊನೆಯ ತೀರ್ಮಾನಕ್ಕೇನೂ ಬಂದಿರ ಲಿಲ್ಲ. ತಾವಾಗಿಯೇ ಯಾವ ಸಲಹೆಯನ್ನೂ ಕೊಟ್ಟಿರಲಿಲ್ಲ ಸರಸಮ್ಮ. ಜಲಜ ಕೇಳಿದಾಗ, "ನಮ್ತಂದೆ ಬರಲಿ....ಆಮೇಲೆ ನೋಡಿಕೊಂಡ ರಾಯಿತು," ಎಂದಿದ್ದಳು. ಈಗ ತಂದೆ ಬಂದಿದ್ದರು. ಆಕೆಯ ಮನಸ್ಸಿನ ಆಳದಲ್ಲಿ ಹುದುಗಿದ್ದ ಹೊಸ ಆಸೆಗಳು ಮಾತಿನ ಉಡುಗೆ ತೊಟ್ಟು ಹೊರ ಬರಲು ಧಾವಿಸುತಿದ್ದುವು. ಇಷ್ಟುದಿನ ನಿರೀಕ್ಷಿಸಿಯೆ ಇದ್ದ ಪ್ರಶ್ನೆಯೂ ಬಂದಿತ್ತು.

ಉತ್ತರ ಥಟ್ಟನೆ ಬರಲಿಲ್ಲ. ಮಾತುಗಳು ನಿಧಾನವಾಗಿ ತಡೆ ತಡೆದು ಬಂದುವು.

"ಅಣ್ಣಯ್ಯ, ನೀವೇನೂ ಭಾವಿಸ್ಕೊಡ್ಡ. ನಾನು ಬರೋಲ್ಲ...."

"ತುಂಗ!"

"ಹೂಂ ಅಣ್ಣಯ್ಯ. ನಾನೂ ಏನಾದರೂ ಕೆಲ್ಸಕ್ಕೆ ಸೇರ್ತೀನಿ."

"ಕೆಲಸ!"

"ಹೂಂ. ಕೆಲಸಕ್ಕೆ. ಅದರಲ್ಲಿ ತಪ್ಪೇನಣ್ಣ ?"

"ತಪ್ಪೇನೂಂತ ನನ್ನ ಯಾಕ್ಮಗು ಕೇಳ್ತೀಯಾ ?"

ಆ ಪ್ರಶ್ನೆಯ ಹಿಂದೆ, ಬೇಡ ಬೇಡವೆಂದರೂ, ಕಟುವಾದ ವ್ಯಂಗ್ಯ ಅಸ್ಪಷ್ಟವಾಗಿ ತನ್ನ ಮೂತಿ ತೋರಿಸಿತ್ತು. ಹಿಂದೆ, ತನ್ನ ಕಾಲಮೇಲೆ ತಾನೇ ಕಲ್ಲು ಹೇರಿಕೊಂಡಾಗ, ತಪ್ಪೇನು ಅದರಲ್ಲಿ ಎಂದು ಆ ಮಗಳು ಕೇಳಿದ್ದಳೆ ?

ನೆನಪಿನ ವಿಕಾರವಾದ ಚೇಳು, ತನ್ನ ವಿಷಕೊಂಡಿಯಿಂದ ತುಂಗಮ್ಮ ನಿಗೆ ಬಲವಾಗಿ ಕುಟುಕಿ, ಮೈ ಉರಿಯುವಂತೆ ಮಾಡಿತು. ಮಾತಿನ ಎಡೆ ಯಲ್ಲಿ ಮರೆಯಾಗಿದ್ದ ಕಣ್ಣೀರು ಮತ್ತೆ ಮುಖ ತೋರಿಸಿತು.

ಕಂಪಿಸುವ ಧ್ವನಿಯಲ್ಲಿ ತಂದೆ ಹೇಳಿದರು :

"ಯಾಕೆ ತುಂಗಾ ಅಳ್ತೀಯ? ಅಳ್ಬೇಡ...."

ಇಷ್ಟು ಹೊಟ್ಟೆಉರಿಸಿದ್ದೂ ಸಾಲದೆ, ಇನ್ನೂ ಹಿಂಸೆ ಕೊಡಬೇಕೆ? ಎಂಬ ಮಾತು ಹೊರಬೀಳಲೆಂದು ಬಂದಿತ್ತು. ಆದರೆ, ಆಕೆಯ ನೊಂದ ಮನಸ್ಸಿನ ಮೇಲೆ ಮತ್ತೆ ಮತ್ತೆ ಬರೆ ಎಳೆಯುವುದು ತರವಲ್ಲವೆಂದು, ಅವರು ಸುಮ್ಮನಾದರು.

ತುಂಗಮ್ಮನ ಮನಸಿನಲ್ಲೂ ಅದೇ ಯೋಚನೆ ಮೂಡಿತ್ತು. ಅವಳೆಂದಳು:

"ನಿಮಗೆ ಸಾಕಷ್ಟು ಹಿಂಸೆ ಕೊಟ್ಟಿದೀನಿ ಅಣ್ಣ. ಈಗ ಅದು ಸಾಲದೂಂತ—"

"ಹೇಳು ತುಂಗ. ನಿನ್ನ ಮನಸ್ನಲ್ಲಿ ಏನಿದೆ ಹೇಳು."

"ನೀವಿನ್ನು ನನಗಾಗಿ ಯಾವ ಕಷ್ಟಾನೂ ಅನುಭವಿಸ್ಕೂಡ್ದು."

"ಅಂದರೆ—"

"ನನ್ನ ಜವಾಬ್ದಾರಿ ನಾನು ನೋಡ್ಕೋತೀನಿ ಅಣ್ಣ."

"ತುಂಗ!"

"ನನಗೆ ಆಗ್ಬೇಕಾದ ಭಾಗ್ಯವೆಲ್ಲ ಆಗಿದೆ ಅಣ್ಣ. ಇನ್ನೇನೂ ಬೇಡ. ಏನೂ ಬೇಡ!"

ಮದುವೆ ಎಂಬ ಪದಮಾತ್ರ ಬಂದಿರಲಿಲ್ಲ. ಆದರೆ ಅದನ್ನು ಕುರಿತೇ ಆಕೆ ಹೇಳುತಿದ್ದಳು. ತಂದೆಯ ಮುಖ ಕಪ್ಪಿಟ್ಟಿತು. ಮದುವೆಯಾಗಬೇಕು ಎಂದಿದ್ದರೂ ಅದೇನೂ ಸುಲಭವಾಗಿರಲಿಲ್ಲ. ಆದರೂ ಅವರು ಯೋಚಿಸಿದ್ದಿತ್ತು....ದೂರದ ಊರಲ್ಲಿ, ಬೆಳಗಾಂವಿಯಲ್ಲೋ ಎಲ್ಲಾದರೂ, ಹೊಸ ಆವರಣದಲ್ಲಿ ಮದುವೆಯ ಸಾಧ್ಯತೆ....?....ಹಾಗೆ ಆಶಿಸುವುದೂ ಸುಲಭವಾಗಿರಲಿಲ್ಲ....ಸಾಯುವುದಕ್ಕೆ ಮುಂಚೆ ಮಗನೊಬ್ಬ ಗಣ್ಯವ್ಯಕ್ತಿಯಾಗುವುದನ್ನು ಕಾಣಬೇಕು; ಮಗಳನ್ನು ಉಳಿಸಿಕೊಂಡು ಒಳ್ಳೆಯ ಹಾದಿಗೆ ಹಚ್ಚಬೇಕು; ಅಷ್ಟಾದರೆ ನಿಶ್ಚಿಂತೆಯಾಗಿ ಕೊನೆಯ ಉಸಿರೆಳೆಯುವುದು ಸುಲಭ....

ಆದರೆ ಆ ಮಗಳೀಗ ತನಗೇನೂ ಬೇಡವೆನ್ನುತಿದ್ದಾಳೆ.

"ಹಾಗನ್ಬಾರ್ದು ತುಂಗ. ವ್ಯಥೆ ಪಟ್ಕೊಂಡು ನಿರಾಶೆಪಟ್ಕೊಂಡು ಏನು ಪ್ರಯೋಜನ?"

" ಇನ್ನೆಂಥ ನಿರಾಶೆಯಣ್ಣ ? ನನಗೆ ಇನ್ನೇನಣ್ಣ ಆಗ್ಬೇಕಾಗಿದೆ ?"

ಆ ಮಾತಿಗೆ ಏನು ಉತ್ತರ ಕೊಡುವುದು ಸಾಧ್ಯವಿತ್ತು ? ಉತ್ತರವಾದರೂ ಏನಾದರೂ ಇತ್ತೆ ?

ತಂದೆ ಸಹಾಯಕ್ಕೆಂದು ಮಗನತ್ತ ತಿರುಗಿದರು :

" ನೋಡು ಪುಟಾಣಿ.... ನಿನ್ನಕ್ಕ ನಮ್ಜತೇಲಿ ಬರೋಲ್ವಂತೆ."

" ಬರೊಲ್ವೆ ಅಕ್ಕ ?"

ತುಂಗ ಉತ್ತರವೀಯಲಿಲ್ಲ. ತಂದೆಯೇ ಹೇಳಿದರು :

" ಇನ್ನು ನಿನ್ನಕ್ಕ ನಮ್ಮನ್ನ ಬಿಟ್ಬಿಟ್ಟು ಇಲ್ಲೇ ಇರ್ತಾಳಂತೆ."

ವ್ಯಥೆಯಿಂದ ತಂದೆಯ ಧ್ವನಿ ನಡುಗುತಿತ್ತು. ಮಗನ ಕಣ್ಣುಗಳು ಸಜಲವಾದುವು.

" ಹಾಗಾದರೆ ನಾವೂ ಇಲ್ಲೇ ಇದ್ಬಿಡೋಣ್ವೆ ಅಣ್ಣ ?"

ಎಂತಹ ಪರಿಹಾರ !

ಮೌನವಾಗಿಯೆ ದುಃಖದ ಉಗುಳು ನುಂಗುತ್ತ ತಂದೆ ತಮ್ಮ ಹುಬ್ಬುಗಳ ಮೇಲೆ ಬೆರಳೋಡಿಸಿದರು.

ಆ ಮೂವರೂ ಉಸಿರಾಡುವುದು ಕಷ್ಟವಾದಂತಹ ಯಾತನೆಯ ಸನ್ನಿವೇಶ....

ಸರಸಮ್ಮ ಬಾಗಿಲಿನತ್ತ ಸುಳಿದಿದ್ದರು. ಅಷ್ಟರೊಳಗೆ ಆಗಲೇ ಹೊರಡುವ ತೀರ್ಮಾನ ಮಾಡಿ, ತಂದೆ-ಮಗಳು ತಮ್ಮ ಹಾದಿ ನೋಡುತ್ತಿರಬಹುದು ಎಂದುಕೊಂಡಿದ್ದರು ಆಕೆ. ತುಂಗಮ್ಮನನ್ನು ಮಧ್ಯಾಹ್ನದ ಊಟಕ್ಕೆ ನಿಲ್ಲಿಸಿಕೊಳ್ಳಬೇಕು ; ಬೀಳ್ಕೊಡುವ ಸಮಾರಂಭಕ್ಕಾಗಿ ವಿಶೇಷ ಅಡುಗೆ ಮಾಡಿಸಬೇಕು ;—ಎಂದು ಅವರು ಭಾವಿಸಿಕೊಂಡಿದ್ದರು....ಆದರೆ ಇಲ್ಲಿ ಆಕೆ ಕಂಡ ದೃಶ್ಯ ನಿರೀಕ್ಷಿಸಿದ್ದುದಕ್ಕಿಂತ ಭಿನ್ನವಾಗಿತ್ತು.

ಸರಸಮ್ಮ ಒಳಬಂದುದನ್ನು ಕಂಡು ಎಲ್ಲರಿಗೂ ಒಂದು ರೀತಿಯ ಸಮಾಧಾನವಾಯಿತು. ಆದರೆ ಅವರೆಲ್ಲರನ್ನೂ ನೋಡಿ ಅಣಕಿಸಿತು. ವಿಜಯಿಯಾಗಿದ್ದ ಮೌನ.

ಹೀಗೆ ದುರ್ಬಲ ಮನಸಿನಿಂದ ವರ್ತಿಸುವುದು ನಿವೃತ್ತ ಹೈಸ್ಕೂಲು

ಅಧ್ಯಾಪಕರಾದ ತಮಗೆ ಅಪಮಾನವೆಂಬಂತೆ ತುಂಗಮ್ಮನ ತಂದೆ ಗಂಟಲು ಸರಿಪಡಿಸಿಕೊಂಡು ಮಾತಿಗೆ ಹಾದಿಮಾಡಿಕೊಟ್ಟರು.

"ಅಮ್ಮ, ತಾವು ನನ್ನ ಮಗಳಿಗೆ ರಕ್ಷಣೆಕೊಟ್ಟು ದೊಡ್ಡ ಉಪಕಾರ ಮಾಡಿದೀರಿ. ಆ ಋಣ ಈ ಜನ್ಮದಲ್ಲಿ ತೀರಿಸೋದು ಸಾಧ್ಯವಿಲ್ಲ...."

ಸರಸಮ್ಮ ತಮ್ಮ ಮಂಚದಮೇಲೆ ಕುಳಿತುಕೊಂಡರು.

"ಅಯ್ಯೊ, ಅದೆಂಥ ಉಪಕಾರಸಾರ್. ಏನೋ ಕರ್ತವ್ಯ ಅಂತ ಕೈಲಾದ್ದು ಮಾಡ್ತೀವಿ."

ಹೊರಡುವ ಹೊತ್ತಿಗೆ ಅಭಯಧಾಮದ ಸುಖದುಃಖ ವಿಚಾರಿಸು ತಿದ್ದಾರೆ, ಎಂದುಕೊಂಡರು ಸರಸಮ್ಮ. ಅಭಯಧಾಮದ ಈವರೆಗಿನ ಸೇವೆ-ಸಾಧನೆಗಳ ವರದಿಕೊಡಲು ಅವರು ಸಿದ್ಧರಾದರು.

ಆದರೆ ತುಂಗಮ್ಮನ ತಂದೆಗೆ ಅದು ಬೇಕಾಗಿರಲಿಲ್ಲ. ನಿರಾಶೆಯ ಧ್ವನಿಯಲ್ಲಿ ಅವರು ಹೇಳಿದರು:

"ನನ್ನ ಮಗಳು, ಬರೋದಿಲ್ಲ - ಇಲ್ಲೇ ಇರ್‍ತೀನಿ, ಅಂತಾಳೆ."

ಸರಸಮ್ಮನಿಗೆ ಆಶ್ಚರ್ಯವಾಯಿತು, ಸಂತೋಷವಾಯಿತು. ಆದರೂ, ಮೊದಲ ಭಾವವನ್ನಷ್ಟೆ ತೋರ್ಪಡಿಸುತ್ತ ಅವರೆಂದರು:

"ಹೌದೇ ತುಂಗ? ನನಗೆ ಹೇಳ್ಲೇ ಇಲ್ವೆ!"

ಮಗಳ ನಿರ್ಧಾರಕ್ಕೆ ಆ ಸರಸಮ್ಮನೇ ಕಾರಣವಿರಬೇಕೆಂದು ಭಾವಿಸಿದ್ದ ತಂದೆ, ಸೂಕ್ಷ್ಮವಾಗಿ ಆ ಮುಖವನ್ನು ಪರೀಕ್ಷಿಸಿ ನೋಡಿದರು, ಮಾತುಗಳನ್ನು ತೂಗಿ ನೋಡಿದರು. ಅಲ್ಲಿ ಕೃತ್ರಿಮತೆ ಇರಲಿಲ್ಲ, ಪ್ರಾಮಾಣಿಕತೆ ಇತ್ತು.

ತುಂಗಮ್ಮ ಮಾತನಾಡಲಿಲ್ಲ. ಸರಸಮ್ಮ ಮತ್ತೂ ಕೇಳಿದರು:

"ಏನಮ್ಮ ತುಂಗ? ಏನಿದೆ ನಿನ್ನ ಮನಸ್ನಲ್ಲಿ? ಯಾಕೆ ಹೋಗೊಲ್ಲ ಅಂತಿಯಾ ಊರಿಗೆ?"

"ನನಗೆ ಇಷ್ಟವಿಲ್ಲ ದೊಡ್ಡಮ್ಮ. ನಾನು ಇಲ್ಲೇ ಇರ್‍ತೀನಿ, ಓದ್ತೀನಿ, ಏನಾದರೂ ಕೆಲಸ ಮಾಡ್ತಿನಿ....ವಾಪಸು ಹೋಗೊಲ್ಲ ದೊಡ್ಡಮ್ಮ."

ತನ್ನನ್ನು ಯಾರೂ ತಪ್ಪು ತಿಳಿಯಬಾರದು, ತಾನೇ ಸರಿ, ಯಾರೂ ವಿರೋಧಿಸಬಾರದು - ಎಂಬ ಆಗ್ರಹವಿತ್ತು ಆ ಧ್ವನಿಯಲ್ಲಿ.

ತುಂಗಮ್ಮನ ತಂದೆಗೆ ಆಶ್ಚರ್ಯವಾಯಿತು. ಮಾತಿನಲ್ಲಿ ಆ ದೃಢತೆ, ದಿಟ್ಟತನ....ಮಗಳೇ ಅಲ್ಲವೆ ಹಾಗೆ ಅಂದದ್ದು ?....ತನಗೂ ಇರದ, ಆಕೆಯ ತಾಯಿಗೂ ಇರದ, ಗುಣವಿತ್ತು ಅವಳಲ್ಲಿ. ಹಿಂದೆ ತಾನೇ ಎತ್ತಿ ಆಡಿದ್ದ, ಪಾಲಿಸಿ ಪೋಷಿಸಿದ, ಲಂಗ ಉಡಿಸಿ ದೊಡ್ಡವಳಾಗಿ ಮಾಡಿದ, ಹುಡುಗಿಯೇ ಏನು ಈಕೆ ?....

ಹಾಗೆ ಯೋಚನೆಯಲ್ಲಿ ತನ್ಮಯರಾದ ಆ ಒಂದುಕ್ಷಣ ಅವರ ಮನಸ್ಸು ತಿಳಿಯಾಯಿತು. ಎಲ್ಲ ಸಮಸ್ಯೆಗಳೂ ಒಮ್ಮೆಲೆ ಬಗೆಹರಿದಂತೆ ಅವರ ಮಿದುಳು ಹಗುರವಾಯಿತು.

“ಸರಿ, ಅವಳಿಷ್ಟ ಹಾಗಾದರೆ.”

ಸರಸಮ್ಮ, ತಮ್ಮನ್ನು ತಾವೇ ನಂಬದವರ ಹಾಗೆ, ಪಿಳಿಪಿಳಿ ಕಣ್ಣು ಬಿಟ್ಟರು. ತಂದೆಯ ಆಗ್ರಹ, ಮಗಳ ಪ್ರತಿಭಟನೆ, ರಾದ್ಧಾಂತ, ಸಮಿತಿಗೆ ದೂರು....ಹೀಗೆ ಏನೇನನ್ನೊ ಅವರು ನಿರೀಕ್ಷಿಸಿದ್ದರು. ಇದೊಂದು ಸಾರಿ ಅವರ ಒಂದು ನಿರೀಕ್ಷೆಯೂ ಸರಿಹೋಗಲಿಲ್ಲ.

“ನೀವೇನೂ ಚಿಂತಿಸ್ಬೇಡಿ ಸಾರ್. ನಿಮ್ಮ ಮಗಳ ಜವಾಬ್ದಾರಿ ನನ್ಮೇಲಿರ್ಲಿ....ನನಗ್ಯಾರೂ ಮಕ್ಕಳಿಲ್ಲ. ನನ್ನ ಮಗಳು ಅಂತಾನೇ ನೋಡ್ಕೊಳ್ತೀನಿ.”

ಹೃದಯದ ಆಳದಿಂದ ಆ ಮಾತುಗಳು ಹೊರಟಿದ್ದುವು. ಕೇಳುತಿದ್ದವರ ಮೇಲೆ ನಿರೀಕ್ಷಿಸಿದ ಪರಿಣಾಮವೂ ಆಗದಿರಲಿಲ್ಲ.

ಕೃತಜ್ಞತೆ ಸೂಚಿಸುವ ಕಣ್ಣುಗಳಿಂದ ತುಂಗಮ್ಮ ತನ್ನ ದೊಡ್ಡಮ್ಮನನ್ನು ನೋಡಿದಳು.

ಸರಸಮ್ಮನೆಂದರು :

“ತುಂಗಾ, ನಿನ್ನ ತಮ್ಮನ್ನ ಕರಕೊಂಡು, ಒಳಗೆಲ್ಲಾ ತೋರಿಸ್ಬಿಟ್ಟು ಬಾರಮ್ಮ.”

ತುಂಗಮ್ಮ ಸೆರಗಿನಿಂದ ಕಣ್ಣೊರೆಸಿಕೊಂಡು, ತಮ್ಮನ ಕೈ ಹಿಡಿದು, ತಾನೂ ಎಳೆಯ ಮಗುವಾಗಿ, ಹೊರಗೆ ತನ್ನ ಗೆಳತಿಯರತ್ತ ಹೋದಳು.

....ವಯಸ್ಸಾದವರಿಬ್ಬರು ಯಾವ ಮುಚ್ಚುಮರೆಯೂ ಇಲ್ಲದೆ ಪರಸ್ಪರರೊಡನೆ ಮಾತನಾಡುವುದು ಕಷ್ಟವಾಗಲಿಲ್ಲ....ಲೋಕಾಭಿರಾಮ

ವಾದ ಮಾತುಗಳು....ಅಭಯಧಾಮಕ್ಕೆ ಸರಕಾರವೂ ಸಾರ್ವಜನಿಕರೂ ನೀಡುತಿದ್ದ ನೆರವು....ಸಮಾಜದಲ್ಲಿ ಅಧೋಗತಿಗಿಳಿಯುತಿದ್ದ ನೀತಿಯ ಮಟ್ಟ.

ಏನನ್ನು ಮಾತನಾಡಿದರೂ ತಮ್ಮದೇ ಪ್ರಶ್ನೆ ಮತ್ತೆ ಮತ್ತೆ ತುಂಗಮ್ಮನ ತಂದೆಯ ಕಣ್ಣೆದುರು ಬಂದು ನಿಲ್ಲುತಿತ್ತು.

"ಹೀಗಾಗುತ್ತೇಂತ ನಾನು ಭಾವಿಸಿರ್ಲಿಲ್ಲ ಅಮ್ಮ."

ಆ ಹೆಣ್ಣಿನ ತಂದೆಗೆ ಮನಸ್ಸಮಾಧಾನವಾಗುವಂತಹವೇನನ್ನಾದರೂ ಹೇಳಬೇಕೆಂದು ಸರಸಮ್ಮ ಅಪೇಕ್ಷೆ ಪಟ್ಟರು.

"ನೀವು ತಪ್ಪುತಿಳೀಬಾರ್ದು. ನಿಮ್ಮಮಗಳು ಒಳ್ಳೆಯವಳು. ಏನೋ ಅಚಾತುರ್ಯದಿಂದ ಹಾಗಾಯ್ತು. ನಂಬಿಕೆ-ಮೋಸ. ಏನ್ಮಾಡೋದ ಕ್ಕಾಗತ್ತೆ ಹೇಳಿ?....ಆದರೆ ಇಷ್ಟು ಮಾತ್ರ ನಿಜ. ಆಕೆ ಸದ್ಗುಣ ಸಂಪನ್ನೆ. ಆಕೆಯ ತಾಯ್ತಂದೆಯರು ಭಾಗ್ಯವಂತರು."

"ಒಳ್ಳೇ ಹೇಳಿದಿರಿ!"

—ಎಂದರು ತುಂಗಮ್ಮನತಂದೆ ಒಣನಗೆನಕ್ಕು.

ಸರಸಮ್ಮನ ಸ್ವಾಭಿಮಾನವನ್ನು ಕೆಣಕಿದಂತಾಯಿತು.

"ಯಾಕೆ ಹಾಗಂತೀರಾ? ಸಭ್ಯ ಗೃಹಸ್ಥರು ಅನ್ನಿಸಿಕೊಂಡ ದೊಡ್ಡೋರ ನೂರು ಮನೆತನಗಳ ಸಾವಿರ ಹುಳುಕು ತೋರಿಸಿ ಕೊಡ್ಲೇನು? ದುಡ್ಡಿದೆ, ಪ್ರಭಾವ ಇದೆ, ಅಂತ ಮುಚ್ಕೊಂಡು ಹೋಗುತ್ತೆ!"

ತುಂಗಮ್ಮನ ತಂದೆ ತಲೆದೂಗಿದರು. ಸರಸಮ್ಮ ಆಡಿದ ಮಾತು ನಿಜವಾಗಿತ್ತು.

....ತನ್ನ ಮಗಳ ಬಾಳ್ವೆಯ ಆ ಪ್ರಕರಣವನ್ನೂ ಹಾಗೆಯೇ ಸುಲಭ ವಾಗಿ ಮುಚ್ಚಿಕೊಂಡು ಹೋಗುವುದು ಸಾಧ್ಯವಾಗಿದ್ದರೆ?

"ಅಮ್ಮ, ಏನೇನಾಯ್ತೂಂತ ತುಂಗ ಎಲ್ಲ ಹೇಳಿವಾಳಾ?'

"ಹೇಳಿದಾಳೆ."

"ಹೆರಿಗೆ—"

"ಸುಲಭವಾಗಿರ್ಲಿಲ್ಲ. ಸಾಧ್ಯವಿರೋವನ್ನೆಲ್ಲಾ ಮಾಡಿದ್ವಿ....ಮಗೂನ ಉಳಿಸಿಕೊಳ್ಳೋದಕ್ಕಾಗ್ಲಿಲ್ಲ."

ತುಂಗಮ್ಮನ ತಂದೆಯ ಮುಖದ ಭಾವನೆ ಸಿಕ್ಕುಗಟ್ಟಿಕೊಂಡಿದ್ದುದು ಹಾಗೆಯೇ ಉಳಿಯಿತು. ನಾರಾಯಣಮೂರ್ತಿಯನ್ನು ಸರಸಮ್ಮ ನೋಡಿರ ಲಿಲ್ಲ. ಆದರೆ ಅವರು ಕಂಡಿದ್ದರು. ಎಂತಹ ಮಾನವಕೀಟ!....ಆ ಮಗು ....ಅದು ಸತ್ತೇ ಹುಟ್ಟಿತು....

ಆದ ನಷ್ಟ ಅಷ್ಟರಲ್ಲೇ ಇದೆ - ಎಂದಿತು ವಯಸ್ಸಾಗಿದ್ದ - ಆದರೆ ಕಹಿ ಯಾದ - ಅವರ ಮನಸ್ಸು.

"ಆಮೇಲೇನಾದರೂ ಮದುವೆ ಯೋಚನೆ ಮಾಡಿದ್ರಾ?"

—ಆಗಿನಿಂದಲೇ ತುಂಗಮ್ಮನ ಭವಿಷ್ಯತ್ತಿಗೆ ತಾವೇ ಜವಾಬ್ದಾರ ರೆಂಬಂತೆ ಸರಸಮ್ಮ ಕೇಳಿದರು.

"ಇಲ್ಲ. ಹ್ಯಾಗೆ ಸಾಧ್ಯನೋಡಿ. ನಮ್ಮ ಹುಡುಗ್ನಿಗೂ ಗೊತ್ತಿಲ್ಲ. ಮಾವಳ್ಳೀಲಿ ಆಕೇನ ಅಷ್ಟು ದಿವಸ ಸಾಕಿದ ಆ ಇಬ್ಬರನ್ನು ಬಿಟ್ಟು ಬೇರೆ ಯಾರಿಗೂ ಗೊತ್ತಿಲ್ಲ....ಆದರೂ....ಹ್ಯಾಗೇಂತ ವರ ಹುಡುಕಿಕೊಂಡು ಹೋಗ್ಲಿ? ನಾಳೆದಿವಸ ಯಾವುದಾದರೂ ಕೆಟ್ಟನಾಲಿಗೆ ಏನಾದರೂ ಅಂದರೆ ಅನುಭವಿಸೋರು ಯಾರು?"

"ಆದರೆ ಹೀಗೇ ಬಿಡೋದ್ಕಾಗುತ್ತಾ? ನಾನೂ ನೋಡ್ತಿರ್ತೀನಿ. ಒಳ್ಳೆಯ ಸಂಬಂಧವೇನಾದರೂ ಕುದುರೋ ಲಕ್ಷಣವಿದ್ದರೆ ನಿಮಗೆ ಬರೀತೀನಿ...........ಹಾಗೇನಾದರೂ ಆದರೆ ನನಗೆಷ್ಟೋ ಸಂತೋಷ ವಾಗುತ್ತೆ."

"ಅಮ್ಮ! ಅಷ್ಟುಮಾಡಿ ಪುಣ್ಯ ಕಟ್ಕೊಳ್ಳಿ. ನನ್ನ ಮಗಳು ಬೀದಿ ಪಾಲಾಗದ ಹಾಗೆ ನೋಡ್ಕೊಳ್ಳಿ."

"ದೇವರಿದಾನೆ. ಒಳ್ಳೆಯೋರ್ನ ದೇವರು ಬಿಟ್ಟು ಹಾಕೊಲ್ಲ!"

ಅದು ಯಾವಾಗಲೂ ಕೊನೆಯದಾಗಿ ಸರಸಮ್ಮ ಉಚ್ಚರಿಸುತಿದ್ದ ಉದ್ಗಾರ. ಅದೆಷ್ಟು ಸಾರೆ ಎಷ್ಟು ಜನಕ್ಕೆ ಹಾಗೆ ಹೇಳಿದ್ದರೊ!

ತುಂಗಮ್ಮನ ತಂದೆಯೂ ಕ್ಷಣಕಾಲ, ದೇವರು ನೀಡುವ ಅಭಯದ ಸತ್ಯಾಸತ್ಯತೆಯನ್ನು ಕುರಿತು ಚಿಂತಿಸಬಯಸಿದರು.

"ನಾನು ಪ್ರಯತ್ನಪಟ್ಟು, ಸಮಿತಿಯವರಿಗೆ ಹೇಳಿ, ಓದು ಬರಹ ಏನೂ ಬಾರದ ಹುಡುಗೀರಿಗೆ ಪಾಠ ಹೇಳ್ಕೊಡೊ ಕೆಲಸ ತುಂಗಮ್ನಿಗೆ

ಕೊಡಿಸ್ತಿನಿ....ಈಗ ಎಲ್ಲಾ ಹುಡುಗೀರ್ನೂ ಒಂದೇ ಗುಂಪು ಮಾಡಿಧೋದ್ರಿಂದ ಕಲ್ಸೋಕೂ ತೊಂದರೆಯಾಗಿದೆ."

"ಓ! ತುಂಗನಿಂದ ಆ ಕೆಲಸ ಆದೀತು ಅಂತೀರಾ?"

"ಯಾಕೆ? ನೀವೇನೂಂತ ತಿಳಿದಿದೀರಿ ನಿಮ್ಮ ಮಗಳ್ನ? ಆಕೆ ತುಂಬಾ ಬುದ್ಧಿವಂತೆ ಕಣ್ರೀ...."

ಅಂತಹ ವಾತಾವರಣದಲ್ಲೂ ಆ ಹೊಗಳಿಕೆ ಉಪಾಧ್ಯಾಯರಿಗೆ ಹಿತಕರವಾಗಿ ತೋರಿತು.

ಅಷ್ಟರಲ್ಲೆ, ತನ್ನ ತಮ್ಮನೊಡನೆ ತುಂಗಮ್ಮ ಬಂದಳು.

"ಎಲ್ಲಾ ನೋಡಿದ್ಯೇನಪ್ಪ?"

—ಎಂದರು ಸರಸಮ್ಮ ಹುಡುಗನನ್ನು ಉದ್ದೇಶಿಸಿ.

"ಹೂಂ"

—ಎಂದನಾತ ಬಲು ಸಂಕೋಚದಿಂದ. ಆದರೆ ತಂದೆಯತ್ತ ತಿರುಗಿ ಹೇಳಿದ:

"ಇಲ್ಲಿ ಕ್ಲಾಸ್ ಮಾಡ್ತಾರಂತಣ್ಣ. ಇನ್ನು ಸ್ವಲ್ಪ ಹೊತ್ನಲ್ಲೇ ಷುರು ವಾಗುತ್ತಂತೆ. ಟೀಚರ್ ಬರ್‍ತಾರಂತೆ."

"ಇನ್ನು ನಿಮ್ಮಕ್ಕನೂ ಮೊದಲ್ನೇಕ್ಲಾಸಿಗೆ ಪಾಠ ಹೇಳ್ಕೊಡ್ತಾ ಳಂತಪ್ಪ!"

—ಎಂದರು ಸರಸಮ್ಮ.

ತುಂಗಮ್ಮ ಅವಾಕ್ಕಾಗಿ, ತಂದೆಯ ಮತ್ತು ದೊಡ್ಡಮ್ಮನ ಮುಖ ನೋಡಿದಳು. ಹುಡುಗ ಬೆರಗಾಗಿ ಎಲ್ಲರನ್ನೂ ದಿಟ್ಟಿಸಿದ.

"ಅಕ್ಕ ನಂಗೆ ಹೇಳ್ಲೇ ಇಲ್ಲ....ಹೌದೇನೆ?

ತಂದೆ ಮಗನ ನೆರವಿಗೆ ಬಂದರು.

"ಹೂಂ ಪುಟಾಣಿ....ಇನ್ನು ನಿನ್ನಕ್ಕ ಟೀಚರ್ ಕೆಲಸ ಮಾಡ್ತಾಳೆ."

"ಓ!"

—ಎಂದ ಆ ಹುಡುಗ, ನಗುತ್ತ, ಹಲ್ಲು ಕಿಸಿದು.

ಮುಂಜಾವದ ಗಾಡಿಗೆ ಬಂದಿದ್ದವರೇ ತಂದೆ ಮತ್ತು ಮಗ, ರೈಲು

ನಿಲ್ದಾಣದ ರಸ್ತೆಯಲ್ಲೇ ಇದ್ದ ಉಡುಪಿ ಬ್ರಾಹ್ಮಣರ ಹೊಟೆಲಿನಲ್ಲಿ ಒಂದಿಷ್ಟು ತಿಂಡಿತಿಂದು, ಅರ್ಧ ಹಾದಿ ನಡೆದು, ಅರ್ಧ ಹಾದಿ ಜಟಕಾ ಗೊತ್ತು ಮಾಡಿ, ಅಭಯಧಾಮ ತಲಪಿದ್ದರು.

....ಮಾತನಾಡುತ್ತಾ ಹೊತ್ತು ಕಳೆದಿತ್ತು. ಅದನ್ನು ಗಮನಿಸುತ್ತಾ ತುಂಗಮ್ಮನ ತಂದೆ ಹೇಳಿದರು:

"ನನ್ನದೊಂದು ಸಣ್ಣ ಕೋರಿಕೆ ಇದೆ. ನಡೆಸಿಕೊಡ್ತೀರಾ ?"

"ಏನು, ಹೇಳಿ."

"ಮಗಳ್ನ ಕರಕೊಂಡು ಒಂದಿಷ್ಟು ಪೇಟೆಕಡೆ ಹೋಗಿಬರ್ಲಾ ?"

ಆ ಪ್ರಶ್ನೆ ರೂಪುಗೊಳ್ಳುತಿದ್ದಂತೆಯೇ ಒಪ್ಪಿಗೆಯ ಉತ್ತರವನ್ನೀಯುವ ತೀವ್ರ ನಿರ್ಧಾರವನ್ನು ಸರಸಮ್ಮ ಮಾಡಿದರು.

"ಹಾಗೆಯೇ ಆಗ್ಲಿ. ಊಟದ ಹೊತ್ತಿಗೆ ತಂದು ಬಿಡ್ತೀರಾ? ನಿಮ್ಮನ್ನಂತೂ ಕರಿಯೋ ಸ್ಥಿತೀಲಿ ನಾವಿಲ್ಲ!"

"ನೀವು ಒಪ್ಪೋದಾದರೆ, ತಂದೆ ಮಕ್ಕಳೆಲ್ಲಾ ಜತೆಯಾಗಿಯೇ ಇವತ್ತು ಹೋಟೆಲಿನಲ್ಲಿ ಊಟಮಾಡ್ತೀವಿ."

"ಆಗಲಿ ಅದಕ್ಕೇನಂತೆ?"

—ಎಂದರು ಸರಸಮ್ಮ ನಗುತ್ತ. ಅರೆಕ್ಷಣ, ಹೊರಹೋಗುವ ತುಂಗಮ್ಮ ಮತ್ತೆ ಬರುವಳೋ ಇಲ್ಲವೊ ಎಂಬ ಶಂಕೆ ಅವರನ್ನು ಬಾಧಿಸಿತು. ಆದರೆ, ನೋವಿನಿಂದ ಜರ್ಜರಿತವಾಗಿದ್ದರೂ ಪ್ರಾಮಾಣಿಕತೆಯನ್ನೆ ಪ್ರತಿಪಾದಿಸುತಿದ್ದ ನಿವೃತ್ತ ಉಪಾಧ್ಯಾಯರ ಮುಖವನ್ನು ಕಂಡಾಗ, 'ಛೆ-ಎಂಥ ಯೋಚ್ನೆ' - ಎಂದು ಅವರಿಗೆ ಲಜ್ಜೆಯಾಯಿತು.

ಆ ದಿನ ತುಂಗಮ್ಮ ತನ್ನದೇ ಸೀರೆಯುಟ್ಟುಕೊಂಡಿದ್ದಳು.

"ತಂದೆ ಜತೇಲೆ ಹೋಗ್ಬಿಟ್ಟು ಬರ್ತೀಯೇನಮ್ಮ?"

—ಎಂದು ಸರಸಮ್ಮ ಕೇಳಿದಾಗ ಸಂತೋಷದಿಂದ ಕತ್ತು ಕೊಂಕಿಸಿದ ತುಂಗಮ್ಮ, ಮುಖ ತೊಳೆದುಕೊಂಡು ಬಂದು ಸಿದ್ಧಳಾಗಲು ಬಹಳ ಹೊತ್ತು ಹಿಡಿಯಲಿಲ್ಲ. ಜಲಜ ಆಕೆಗೆ ಹೆರಳು ಹಾಕಿದಳು.

ಕೈಸನ್ನೆ ಮಾಡಿ ದೊಡ್ಡಮ್ಮನನ್ನು ಹೊರಗೆ ಕರೆದಳು ಜಲಜ.

"ಏನಮ್ಮ?"

"ಒಂದು ರೋಜಾ ಹೂ ಕಿತ್ತು ಮುಡಿಸ್ಲಾ ತುಂಗಕ್ಕನಿಗೆ?"

"ಅದಕ್ಕೂ ಕೇಳ್ಬೇಕೇನೆ?"

ಇನ್ನೊಂದು ಕೈಯಲ್ಲಿ ಬೆನ್ನಹಿಂದೆ ಅಡಗಿಸಿ ಇಟ್ಟಿದ್ದ ರೋಜಾ ಹೂವನ್ನು ಎದುರಿಗೆ ಹಿಡಿದು ತೋರಿಸಿದಳು ಜಲಜ.

"ನೋಡಿ ದೊಡ್ಡಮ್ಮ! ನಿಮ್ಮ ಒಪ್ಪಿಗೆ ಸಿಕ್ಕಿಯೇ ಸಿಗತ್ತೇಂತ ಆಗ್಩ೇ ಕಿತ್ತಿದ್ದೆ."

"ಖಿಲಾಡಿ!"

ತಂದೆ ಮಕ್ಕಳು ಎದ್ದು ನಿಂತಾಗ, ಸರಸಮ್ಮನ ಸೂಚನೆಯಂತೆ ಜಲಜ ಮುಂದಾಗಿಯೇ ಹೋಗಿ ಬಾಗಿಲು ತೆರೆದಳು. ಹೊಸತಾಗಿ ಬಂದವರು, ಸದಾಕಾಲವೂ ಬಾಗಿಲಿಗೆ ಜೋತುಕೊಂಡೇ ಇರುತಿದ್ದ ಬೀಗವನ್ನು ನೋಡುವುದು ಸರಸಮ್ಮನಿಗೆ ಇಷ್ಟವಿರಲಿಲ್ಲ.

ಬಾಗಿಲಬಳಿ ನಿಲ್ಲುತ್ತ, ಹೊರಕ್ಕೆ ಮೆಟ್ಟಲಿಳಿಯುತಿದ್ದ ತಂದೆ ಮಕ್ಕಳನ್ನುದ್ದೇಶಿಸಿ ಅವರೆಂದರು.

"ಸಾಯಂಕಾಲ ಐದು ಘಂಟೆಯೊಳಗಾಗಿ ಬಂದ್ಬಿಡಿ."

ತಾವು ಮೂವರ ಪರವಾಗಿಯೂ ತುಂಗಮ್ಮ ಉತ್ತರವಿತ್ತಳು:

"ಬರ್ತೀವಿ ದೊಡ್ಡಮ್ಮ."

ಹಾಗೆ ಹೇಳಲು ತಿರುಗಿ ನೋಡಿದಾಗ, ಅಭಯಧಾಮದ ಎಲ್ಲರ ಕಣ್ಣುಗಳೂ ತನ್ನನ್ನೆ ದಿಟ್ಟಿಸುತಿದ್ದಂತೆ ತುಂಗಮ್ಮನಿಗೆ ತೋರಿತು.

ಜಲಜ ಎವೆಇಕ್ಕದೆ ತುಂಗಮ್ಮನನ್ನೂ ಆಕೆಯ ತಂದೆಯನ್ನೂ ತಮ್ಮನನ್ನೂ ನೋಡುತಿದ್ದಳು. ಆಕೆಯೆಂದಳು:

"ತುಂಗಕ್ಕ, ಬೇಗ ಬಾ."

"ಹೂಂ."

ಬಾಗಿಲು ಮುಚ್ಚಿಕೊಂಡಿತು.

ಹೊರಗೆ ಬೀದಿಗಿಳಿದ ಮೇಲೂ ತುಂಗಮ್ಮ ತಿರುಗಿನೋಡಿದಳು. ಅಭಯಧಾಮದ ಆಫೀಸು ಕೊಠಡಿಯ ಕಿಟಿಕಿ ಕಾಣಿಸಿತು. ಆ ಕಿಟಿಕಿಯಲ್ಲಿ ಜಲಜೆಯ ಮುಖವಿತ್ತು....ಆ ಮುಖದಲ್ಲಿ ನಗುವಿರಲಿಲ್ಲ. ಅದು ಬಾಡಿತ್ತು.

## ೧೨

ಹೈಹೈ-ಟಕಟಕಟಕ-ಬಾಜೋ಼ ಸಾಮಿ ಸದ್ದುಗಳೊಂದೂ ಇಲ್ಲದೆ, ನಿರ್ಜನವಾದ ಆ ಬೀದಿಯಲ್ಲಿ ಕುದುರೆಯ ಗಾಡಿ ಸರಾಗವಾಗಿ ಸಾಗಿ ಬಂದು, ಅಭಯಧಾಮದ ಹಿತ್ತಿಲಗೋಡೆಯಾಚೆ ನಿಂತಿತು.

ಜಲಜ, ಅಭಯಧಾಮದ ಕಿಟಕಿಯ ಎಡೆಯಿಂದ ನೋಡುತ್ತಲಿದ್ದಳು. ಕಳೆದು ಹೋದ ಆಟದ ಸಾಮಾನನ್ನು ಮರಳಿ ಪಡೆದಾಗ ಮಗುವಿಗೆ ಆಗುವ ಸಂತೋಷವನ್ನು ಹೊರಸೂಸುತಿತ್ತು ಆಕೆಯ ಮುಖ.

ನಿಂತಲ್ಲಿಂದಲೆ ಕೂಗಿಕೊಂಡಳು ಜಲಜ:

"ತುಂಗಕ್ಕ ಬಂದ್ಲು ದೊಡ್ಡಮ್ಮ; ತುಂಗಕ್ಕ ಬಂದ್ಲು !"

ಗಾಡಿಯಿಂದ ತುಂಗಮ್ಮನ ತಮ್ಮ ಮೊದಲು ಕೆಳಕ್ಕೆ ಧುಮುಕಿದ. ಆ ಬಳಿಕ ಆತನ ಅಕ್ಕ. ಅದಾದ ಮೇಲೆ ತುಂಬಿದೊಂದು ಚೀಲವೂ ಪುಟ್ಟ ಕೈ ಗಂಟೂ ಕೆಳಕ್ಕಿಳಿದುವು. ಗೊತ್ತಾಗಿದ್ದ ಬಾಡಿಗೆಯನ್ನು ಗಾಡಿಯವನಿಗೆ ಕೊಟ್ಟು ತುಂಗಮ್ಮನ ತಂದೆಯೂ ನಿಧಾನವಾಗಿ ಇಳಿದರು.

ತುಂಗಮ್ಮನ ಕೈ ಸೋಂಕಿಗೆ ಕಿರುಗೇಟು ಕಿರ್ ಎಂದಿತು.

ಈ ಸಲ ಆಕೆ ಬಾಗಿಲು ಬಡೆದು 'ಅಮ್ಮಾ' 'ಅಮ್ಮಾ' ಎಂದು ಕೂಗ ಬೇಕಾಗಿರಲಿಲ್ಲ. ಅಭಯಧಾಮದ ತಲೆ ಬಾಗಿಲು ತೆರೆದೇ ಇತ್ತು. ಮುಗುಳು ನಗುತ್ತ ಸ್ವಾಗತಿಸಿದರು ಸರಸಮ್ಮ. ಆ ದೊಡ್ಡಮ್ಮನಿಗೆ ಆತುಕೊಂಡು ಜಲಜ, ಲಲಿತ ಮತ್ತಿತರ ಮೂವರು ಹುಡುಗಿಯರಿದ್ದರು.

ಹಜಾರದಿಂದ ಹಾರ್ಮೋನಿಯಂ ಸ್ವಲ್ಪ ಕರ್ಕಶವಾಗಿಯೆ ಶಬ್ದಿಸು ತಿತ್ತು. ಆ ಸ್ವರಪೆಟ್ಟಿಗೆಯ ಸಹವಾಸದಲ್ಲಿ ಅನ್ಯಾಯಕ್ಕೆ ಗುರಿಯಾಗಿದ್ದ ಒಂದು ಮಧುರ ಕಂಠದಿಂದ ಹಾಡು ಕೇಳಿ ಬರುತಿತ್ತು :

"ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ...."

"ಬನ್ನಿ"

—ಎಂದರು ಸರಸಮ್ಮ. ಹಾಡಿಗೆ ವಿವರಣೆ ಎಂಬಂತೆ ಅವರೆಂದರು:

"ಸಂಗೀತದ ಪಾಠ ಆಗ್ತಿದೆ."

ನಿವೃತ್ತ ಉಪಾಧ್ಯಾಯರಿಗೆ ಹಾಗೆಂದು ಹೇಳಬೇಕಾದ್ದೇ ಇರಲಿಲ್ಲ. ಅವರು ಕುತೂಹಲದಿಂದ ಪಾಠ ಹೇಳಿಕೊಡುತಿದ್ದ ಅಧ್ಯಾಪಿಕೆಯನ್ನು ನೋಡಿದರು. ಅಲ್ಪ ಗೌರವ ಧನ ಸ್ವೀಕರಿಸಿ, ಅಭಯಧಾಮಕ್ಕಾಗಿ ತಮ್ಮ ಅಮೂಲ್ಯ ಸಮಯದ ಒಂದಂಶವನ್ನು ವ್ಯಯಮಾಡುತಿದ್ದ ಆ ಸಂಗೀತ ವಿದುಷಿ ಒಂದು ಹತ್ತು ಹುಡುಗಿಯರೆದುರು ಚಾಪೆಯ ಮೇಲೆ ಗಂಭೀರವಾಗಿ ಕುಳಿತಿದ್ದರು.

ಸರಸಮ್ಮ ಮುಂದಾಗಿ, ತಂದೆಮಕ್ಕಳನ್ನು ಆಫೀಸು ಕೊಠಡಿಯತ್ತ ಕರೆದೊಯ್ದರು. ಹೊರಗಿನಿಂದ ಬಂದ ಗಂಟು ಮೂಟೆಗಳಲ್ಲೇನಿವೆಯೆಂದು ಹುಡುಗಿಯರು ನೋಡಬಯಸಿದರೂ ಬಾಗಿಲ ಬಳಿ ನಿಲ್ಲದೆ, ಅಭಯಧಾಮದ ಶಿಷ್ಟಾಚಾರಕ್ಕೆ ಅನುಗುಣವಾಗಿ, ಚೆದರಿ ಹೋದರು.

ಉಲ್ಲಾಸವಾಗಿದ್ದಳು ತುಂಗಮ್ಮ. ಬಿಳಿಚಿಕೊಂಡಿದ್ದ ಮುಖದಲ್ಲಿ ರಕ್ತ ಸಂಚಾರವಾಗಿ, ಆಕೆಯ ಸೌಂದರ್ಯಕ್ಕೆ ಕಳೆಕಟ್ಟಿತ್ತು. ತುಂಗಮ್ಮ, ಮಮತೆಯ ತಂದೆಯನ್ನೂ ಪ್ರೀತಿಯ ತಮ್ಮನನ್ನೂ ಮರಳಿ ಪಡೆದು ಸುಖಿಯಾಗಿದ್ದಳು.... ಜನದಟ್ಟಣೆಯ ಬೀದಿಗಳಲ್ಲಿ ಸಂಚಾರ...ಇಂದ್ರಭವನದಲ್ಲಿ ಮೇಜಿನಮೇಲಿನ ಊಟ....ಬಳೆಯಂಗಡಿ—ಬಟ್ಟೆಯಂಗಡಿ....ಹೂವು ಹಣ್ಣಿನಂಗಡಿ.....ತಾನು ಬೇಡವೆಂದಿದ್ದರೂ ತಂದೆ ಖರ್ಚುಮಾಡಿದ್ದರು. ತಂದೆಯಿಂದ ಹಣ ಪಡೆದು ತುಂಗಮ್ಮ, ಬಿಸ್ಕತ್ತು ಬಣ್ಣದೊಂದು ಬುಷ್‌ಕೋಟನ್ನು ತಮ್ಮನಿಗೆ ತೆಗೆದು ಕೊಟ್ಟಿದ್ದಳು....ಏಕಾಂತದಲ್ಲಿ ಜಲಜೆಯ ಭುಜದ ಮೇಲೆ ತಲೆಯಿರಿಸಿ ಸದ್ದಿಲ್ಲದೆ ನಗು ನಗುತ್ತ ಅಳುವಷ್ಟು ಸುಖಿಯಾಗಿದ್ದಳು ತುಂಗಮ್ಮ.

ಕ್ಷಮೆ ಯಾಚಿಸುವವರ ಸ್ವರದಲ್ಲಿ ಆಕೆಯ ತಂದೆ ಹೇಳಿದರು:

"ಇಲ್ಲಿಗೇಂತ ಒಂದಿಷ್ಟು ಏನೇನೊ ತಗೊಂಡು ಬಂದಿದೀವಿ. ನೀವು ನಿರಾಕರಿಸಬಾರದು."

ಸರಸಮ್ಮನಿಗೆ ಯೋಚನೆಗಿಟ್ಟುಕೊಂಡಿತು.

"ಅಯ್ಯೊ! ಯಾಕ್ತಂದ್ರಿ? ಹೊರಗಿನ ತಿಂಡಿಗಿಂಡಿ ಏನೂ ತಗೋ ಕೂಡದೂಂತ ನಿಯಮ ಇದೆಯಲ್ಲ! ಹೇಳ್ಲಿಲ್ವೆ ತುಂಗ ನೀನು?"

ತನ್ನದೇನೂ ತಪ್ಪಿಲ್ಲವೆನ್ನುವಂತೆ ತುಂಗಮ್ಮನೆಂದಳು :

"ಹೇಳ್ದೆ ದೊಡ್ಡಮ್ಮ."

"ಹೇಳಿದ್ಲು, ಹೇಳಿದ್ಲು. ಆದರೂ ಇದೊಂದ್ಸಾರೆ ಕ್ಷಮಿಸ್ತೀರೀಂತ ತಗೊಂಡ್ಬಂದೆ....ಅಲ್ಲದೆ, ಹೇಳಿಕೊಳ್ಳೋವಂಥ ತಿಂಡಿ ಏನೂ ಅಲ್ಲ."

ತಿಂಡಿಯ ಕತೆ ಬಲು ದೊಡ್ಡದು. ತುಂಗಮ್ಮನಿಗೂ ಅದು ತಿಳಿದಿರಲಿಲ್ಲ. ಆ ಘಟನೆ ನಡೆದುದು ಬಲು ಹಿಂದೆ. ಅಭಯಧಾಮ ಬಿಟ್ಟು ಮತ್ತೆ ಬೀದಿಗೆ ಬರಲೊಪ್ಪದ ಹುಡುಗಿಯೊಬ್ಬಳಿಗೆ ಬುದ್ಧಿಕಲಿಸಬೇಕೆಂದು ಆಕೆಯ 'ಸಂಬಂಧಿಕ' ಮನಸಿನಲ್ಲೆ ನಿರ್ಧರಿಸಿದ. ಹುಡುಗಿಯ ಸುಖ ದುಃಖ ವಿಚಾರಿಸಲೆಂದು ವಾರಕ್ಕೊಮ್ಮೆ ಬರುತಿದ್ದವನು ಒಮ್ಮೆ ತಂದುಕೊಟ್ಟ ತಿಂಡಿ ತಿಂದು ಆ ಹುಡುಗಿ ಮರಣ ಸಂಕಟಕ್ಕೆ ಗುರಿಯಾದಳು. ಆಕೆಯನ್ನು ಆಸ್ಪತ್ರೆಗೆ ಸೇರಿಸಬೇಕಾಯಿತು. ಅಲ್ಲಿಂದ ಆಕೆಯನ್ನು ಓಡಿಸಿಕೊಂಡು ಹೋಗಲು ಯತ್ನಿಸಿದ ಆ 'ಸಂಬಂಧಿಕ'. ಆತನಿಗೆ ಯಶಸ್ಸೇನೋ ದೊರೆಯಲಿಲ್ಲ. ಆದರೆ ಆ ಹುಡುಗಿ ಮತ್ತೆ ಆರೋಗ್ಯವಂತಳಾಗಲು ದೀರ್ಘಕಾಲ ಹಿಡಿಯಿತು. ಅಂದಿನಿಂದ ಹೊರಗೆ ತಯಾರಿಸಿದ ತಿಂಡಿ ಅಭಯಧಾಮದ ಒಳಕ್ಕೆ ಬರುವುದು ನಿಂತೇ ಹೋಯಿತು. ತಿಂಡಿಯನ್ನು ಯಾರೂ ತಂದುಕೊಡಬಾರದೆಂಬುದು ನಿಯಮವಾಯಿತು.

ತುಂಗಮ್ಮನ ತಂದೆ ತುಂಬಿದ್ದ ಚೀಲವನ್ನು ಹಾಗೆಯೇ, ಸರಸಮ್ಮನಿಗೆ ಒಪ್ಪಿಸಿದವರಂತೆ, ಮಂಚದ ಕಾಲಿಗೆ ಒರಗಿಸಿ ನಿಲ್ಲಿಸಿದರು.

"ಏನೇನಿದೆ ಅದರಲ್ಲಿ ?"

ನಾಲ್ಕು ಡಜನ್ ಕಿತ್ತಳೆ ಹಣ್ಣುಗಳಿದ್ದುವು; ಮೂರು ಪೌಂಡು ಬಿಸ್ಕತ್ತು. ಬಾಳೆಯ ಎಲೆಯಲ್ಲಿ ಕಟ್ಟಿದ್ದ ಪೊಟ್ಟಣದಲ್ಲಿ ತುಂಗಮ್ಮನ ಸೂಚನೆಯಂತೆ ಕೊಂಡುಕೊಂಡಿದ್ದ ನಾಲ್ಕು ಸೇರು ಮಲ್ಲಿಗೆ ಮೊಗ್ಗುಗಳಿದ್ದುವು.

ಆದರೆ ಹಾಗೆಂದು ತುಂಗಮ್ಮನ ತಂದೆ ವಿವರಿಸಲಿಲ್ಲ.

ಅವರೆಂದರು :

"ಏನೋ ಒಂದಿಷ್ಟು ಕಿತ್ತಳೆ ಹಣ್ಣು-ಬಿಸ್ಕತ್ತು."

"ನಿಮ್ಮ ಮಗೂಗಾದರೂ ಒಂದಿಷ್ಟು ಇಟ್ಕೊಳ್ಳಿ"

"ಇದೆ. ಇದೆ. ಅದಕ್ಕೇನು? ಹೋಗ್ತಾ ಕೊಂಡು ಕೊಂಡರಾಯ್ತು, ಬೇಕಾದ್ರೆ."

ಇನ್ನೊಂದು ಪೊಟ್ಟಣವನ್ನು ತನ್ನ ಎದೆಗೊರಗಿಸಿಕೊಂಡು ತುಂಗಮ್ಮ ನಿಂತಿದ್ದಳು:

ಅಪರಾಧಿಯಂತೆ ಆಕೆಯ ತಂದೆಯೆಂದರು:

"ಮಗಳಿಗೆ ಒಂದು ಸೀರೆ ತೆಗಿಸಿಕೊಟ್ಟೆ. ಆಮೇಲೆ ಅವಳೇ ಏನೇನೊ ಕೊಂಡ್ಕೊಂಡ್ಳು. ತೋರ್ಸಮ್ಮ ತುಂಗ."

ತುಂಗಮ್ಮನಿಗೆ ನಾಚಿಕೆಯಾಯಿತು. ದೊಡ್ಡಮ್ಮ ಏನೆನ್ನುವರೋ ಎಂದು ಹೃದಯ ಡವಡವನೆ ಹೊಡೆದುಕೊಂಡಿತು. ಆದರೂ ಆಕೆ ಕಟ್ಟು ಬಿಚ್ಚಿದಳು.

....ಅದರಲ್ಲಿದ್ದುದು ಹನ್ನೆರಡು ರೂಪಾಯಿಯ ಬಿಳಿಯ ಪ್ರಿಂಟ್ ಸೀರೆ. ಹಸುರು ಬಣ್ಣದ ರವಕೆ ಕಣವೊಂದು ಆ ಸೀರೆಯೊಳಗಿತ್ತು. ಅಷ್ಟಲ್ಲದೆ ಬೇರೆ ಆರು ರವಕೆ ಕಣಗಳಿದ್ದುವು. ಆ ಕಣಗಳನ್ನೆತ್ತಿ ತುಂಗಮ್ಮ ಮೇಜಿನ ಮೇಲಿರಿಸಿದಳು.

"ಇದರಲ್ಲೊಂದು ನಿಮಗೆ ದೊಡ್ಡಮ್ಮ."

"ನನಗೆ!"

ದೊಡ್ಡಮ್ಮ ನಿರಾಕರಿಸುವರೆಂದು ತುಂಗಮ್ಮನ ಮುಖ ಕಪ್ಪಿಟ್ಟಿತು. ಆದರೊಂದು ಮುಗುಳು ನಗು ಮೂಡಿತು ದೊಡ್ಡಮ್ಮನ ತುಟಿಗಳ ಮೇಲೆ.

"ನಂಗ್ಯಾಕಮ್ಮ ಕೊಂಡ್ಕೊಂಡು ಬಂದೆ?"

ಮಗಳ ಬದಲು ತಂದೆ ಉತ್ತರವಿತ್ತರು:

"ಆಗಾಗ್ಗೆ ಗುರುಕಾಣಿಕೆ ಕೊಡೋದೂಂತ ಇಲ್ವೆ?"

"ಓ!....ಈಗ ಅಂಥ ಕಾಣಿಕೆಗೆ ಲಂಚ ಅಂತಾರೆ."

ದೊಡ್ಡಮ್ಮ ಬೇಡವೆಂದರೆ ಅಳಲು ಸಿದ್ಧವಾಗಿದ್ದ ತುಂಗಮ್ಮ ಆಗ್ರಹದ ಧ್ವನಿಯಲ್ಲಿ ಹೇಳಿದಳು:

"ನೀವು ತಗೋಬೇಕು ದೊಡ್ಡಮ್ಮ."

"ಹೂನಮ್ಮ....ಉಳಿದಿರೋದು?"

"ಜಲಜ, ಲಲಿತಾ, ಸಾವಿತ್ರಿ, ಸುಂದ್ರಾ—ಕಲ್ಯಾಣೀಗೇಂತ ತಗೊಂಡ್ಬಂದೆ."

ಅದಕ್ಕೆ ವಿವರಣೆ ಎಂಬಂತೆ ಸರಸಮ್ಮನೇ ಗಟ್ಟಿಯಾಗಿ ಅಂದರು:

"ಸುಂದ್ರಾ ಕುರುಡಿ; ಕಲ್ಯಾಣಿಗೆ ಮಾತು ಬರೊಲ್ಲ; ಉಳಿದ ಮೂವರೂನೂ ತುಂಗನ ಆರೈಕೆ ಮಾಡ್ದೋರು."

"ಗೊತ್ತು, ತುಂಗ ಹೇಳಿದ್ಲು ಹಾಗೇಂತ...."

—ಎಂದು ತಂದೆ ಹಾಗೆ ಕೊಂಡು ಕೊಳ್ಳಲು ಅದೇ ಕಾರಣವೆಂಬಂತೆ ಹೇಳಿದರು.

"ಹೀಗೆ ಕೆಲವರಿಗೇ ಆರಿಸಿ ಉಡುಗೊರೆ ಕೊಟ್ರೆ ಬೇರೆ ಹುಡುಗೀರಿಗೆ ಒಂದು ಥರಾ ಆಗುತ್ತೆ."

"ಹೌದು. ನನಗೂ ಹಾಗೆ ಅನಿಸ್ತು."

ಸರಸಮ್ಮ ಮತ್ತೂ ಒಂದು ಕ್ಷಣ ಯೋಚಿಸಿದರು....ಕುರುಡಿಗೂ ಮೂಗಿಗೂ ಕೊಟ್ಟರೆ ಯಾರೂ ಬೇಡವೆನ್ನುವ ಹಾಗಿರಲಿಲ್ಲ. ತುಂಗಮ್ಮ ಕಾಹಿಲೆ ಬಿದ್ದಾಗ ಆರೈಕೆ ಮಾಡಿದವರೆಂಬ ಕಾರಣದಿಂದ ಉಳಿದ ಮೂವರಿಗೂ ಕೊಡುವುದು ತಪ್ಪಾಗುತ್ತಿರಲಿಲ್ಲ....

ಆಕ್ಷೇಪಣೆಗಳನ್ನೆಲ್ಲ ಬದಿಗೆ ಸರಿಸಿ ಸರಸಮ್ಮ ತೀರ್ಪುಕೊಟ್ಟರು:

"ಆಗಲಿ ಕೊಡೋಣ."

ಹೊರಗೆ ಸಂಗೀತದ ತರಗತಿ ಮುಗಿದಿತ್ತು. ಸಂಗೀತದ ಅಧ್ಯಾಪಿಕೆ ಸದ್ದಿಲ್ಲದೆಯೆ ಹೊರಟು ಹೋಗಿದ್ದರು.

ಆ ಉಡುಗೊರೆಗಳನ್ನೆಲ್ಲ ನೋಡುತ್ತಾ ಸರಸಮ್ಮನಿಗೆ ಥಟ್ಟನೆ ಒಂದು ವಿಷಯ ಹೊಳೆಯಿತು....ತುಂಗಮ್ಮ ಮನಸ್ಸು ಬದಲಾಯಿಸಲಿಲ್ಲ ಅಲ್ಲವೆ? ಹೊರಟು ಹೋಗುವುದಕ್ಕೆ ಇದು ಪೂರ್ವ ಸಿದ್ಧತೆಯೋ ಏನೋ?

ಸಂದೇಹಗಳ ನಡುವಿನಿಂದಲೆ ಅವರಿಂದೊಂದು ಪ್ರಶ್ನೆ ಬಂತು:

"ಏನು ತೀರ್ಮಾನ ಮಾಡಿದಿರಿ?"

"ಇವತ್ತು ರಾತ್ರೆಯೇ ಹೋಗೋದೂಂತ."

"ಓ!"

ಕ್ಷಣಕಾಲ, ತಮ್ಮ ಸುತ್ತಮುತ್ತೆಲ್ಲವೂ ಬರಿದಾದಂತೆ ಸರಸಮ್ಮನಿಗೆ ತೋರಿತು.

ತಂದೆ ಮಗಳನ್ನುದ್ದೇಶಿಸಿ ಕೇಳಿದರು :

"ಆಗ್ದೆ ಮಗೂ ? ರಾತ್ರೆ ಗಾಡೀನೇ ಮೇಲು ಅಲ್ವಾ ?''

"ಹೂಂ ಅಣ್ಣ. ಹನ್ನೆರಡು ಗಂಟೆ ಹೊತ್ತಿಗೆಲ್ಲಾ ಮನೆ ಸೇರ್ತೀರಾ."

ಸರಸಮ್ಮ ತಮ್ಮ ಬೆಪ್ಪುತನ ಕಂಡು ತಾವೇ ನಕ್ಕರು. ರಾತ್ರೆಯ ಗಾಡಿಗೆ ಹೋಗುವವರು ತಂದೆ ಮತ್ತು ಆ ಹುಡುಗ—ಅವರಿಬ್ಬರೇ.

ತುಂಗಮ್ಮನ ತಂದೆ ಕೋಟಿನ ಜೇಬಿನಿಂದ ಚರ್ಮದ ಪಾಕೀಟು ತೆಗೆದು ಅದರೊಳಗಿದ್ದ ನೋಟುಗಳನ್ನೆತ್ತಿಕೊಂಡರು. ಹತ್ತರ ಐದು ನೋಟುಗಳಿದ್ದುವು, ಐದು ರೂಪಾಯಿನದೊಂದು ಬಿಡಿ ನೋಟಿತ್ತು. ಹತ್ತರ ಐದು ನೋಟುಗಳನ್ನೂ ಅವರು ಸರಸಮ್ಮನ ಮೇಜಿನ ಮೇಲಿರಿಸಿದರು.

ಹಣವನ್ನೆಂದೂ ಬೇಡವೆನ್ನುವವರಲ್ಲ ಆ ದೊಡ್ಡಮ್ಮ. ಅಭಯಧಾಮ ಉಸಿರಾಡುವುದಕ್ಕೂ ಅಗತ್ಯವಿತ್ತು ಹಣ.

"ಇದಿಷ್ಟು ಅಭಯಧಾಮಕ್ಕೆ. ಬಡವನ ಕಾಣಿಕೆ.''

ಯಾವುದೋ ಲೋಕದ ದೃಶ್ಯಗಳೆಂಬಂತೆ ತುಂಗಮ್ಮನ ತಮ್ಮ ಅಕ್ಕನ ಬಳಿಯಲ್ಲೆ ನಿಂತು ನೋಡುತ್ತಲಿದ್ದ. ತಂದೆಯ ಔದಾರ್ಯ ಕಂಡು ತುಂಗಮ್ಮ ನಿಗೆ ಸಮಾಧಾನವೆನಿಸಿತು. ತಾನು, ಕಡುಬಡವರ ಹೊಟ್ಟೆಯಲ್ಲಿ ಹುಟ್ಟಿದ ಅನಾಥ ಶಿಶುವೇನೂ ಅಲ್ಲ, ಅಲ್ಲವೆ ?....ಆದರೆ, ಇಷ್ಟು ಹಣವೆಲ್ಲಿಂದ ಬಂತು ತಂದೆಗೆ ? ನೂರು ರೂಪಾಯಿಯಷ್ಟಾದರೂ ಆತ ಸಾಲ ಮಾಡಿರಲೇ ಬೇಕು.

"ಆಗಲಿ. ಇದೊಂದನ್ನ ಬೇಡ ಅನ್ನೋ ಹಾಗೇ ಇಲ್ಲ."

ಸರಸಮ್ಮ ಕುರ್ಚಿಯ ಮೇಲೆ ಕುಳಿತು ಡ್ರಾಯರಿನಿಂದ ರಶೀತಿ ಪುಸ್ತಕವನ್ನೆತ್ತಿಕೊಂಡು ಬರೆದರು ; ಬರೆದು, ಹರಿದುಕೊಟ್ಟರು.

ಅವರಿಗನ್ನಿಸಿತು :

ತುಂಗಮ್ಮನಿಗಾಗಿ ತಂದ ವಿಶೇಷ ಔಷಧಿಗೆಂದು ಮೂವತ್ತು ರೂಪಾಯಿ ಕೈಯಿಂದ ಹಾಕಿದ್ದೆ. ಅಷ್ಟನ್ನೂ ಈ ಹಣದಿಂದ ಎತ್ತಿಕೊಂಡು ಬಿಡಲೆ ?....ಅದರಲ್ಲಿ ತಪ್ಪೇನು ?

ಮನಸಿನೊಳಗೆ ಆ ಗೊಂದಲವಿದ್ದುದು ಒಂದೆರಡು ನಿಮಿಷ ಮಾತ್ರ. ತಾವೇನನ್ನೂ ಆ ಹಣದಿಂದ ತೆಗೆದುಕೊಳ್ಳಕೂಡದೆಂದೇ ಅವರು ನಿರ್ಧರಿಸಿದರು.

"ಇದು ನೀವು ಅಭಯಧಾಮಕ್ಕೆ ಕೊಡೋ ಮೊದಲ್ನೇ ಕಾಣಿಕೆ ಮತ್ತು ಕೊನೇ ಕಾಣಿಕೆ, ಅಲ್ವೆ?"

"ಯಾಕೆ?"

"ಇನ್ನೇನು? ತುಂಗ ಇನ್ನು ಇಲ್ಲಿ ಅನಾಥೆಯಾಗಿ ಇರೋದಿಲ್ಲ. ಸಮಿತಿಯವರು ಒಪ್ಪಿದ್ಮೇಲೆ ಆಕೆ ಸ್ಟಾಫಿನವಳಾಗ್ತಾಳೆ—ಉಪಾಧ್ಯಾಯಿನಿ ಎಂತಲೋ, ನನಗೆ ಸಹಾಯಕಿ ಎಂತಲೋ. ಆ ಮೇಲೆ ಆಕೇನೆ ಸಂಪಾದಿಸ್ತಾಳೆ....ಏನಮ್ಮ ತುಂಗ?"

ಬದುಕು ನಿರಾಶಾಮಯವೆಂದು ಯಾವ ಕಾಲದಲ್ಲಿಯೂ ತೋರಿಯೇ ಇರಲಿಲ್ಲವೇನೊ ಎಂಬ ಭ್ರಮೆ ಹುಟ್ಟಿಸುವಷ್ಟು ಸಮರ್ಥವಾಗಿದ್ದುವು ಆ ಮಾತುಗಳು.

ಅಷ್ಟು ಹೊತ್ತೂ ಮುಂದೆ ಬಾಗಿದ್ದ ತಂದೆ ಒರಗು ಬೆಂಚಿಗೊರಗಿ ನೇರವಾಗಿ ಕುಳಿತರು. ಹಾಗೆ ಕುಳಿತು ಅವರು ಮಗಳ ಮುಖ ನೋಡಿದರು. ಎಷ್ಟೊಂದು ನಿರ್ಮಲವಾಗಿತ್ತು, ನಿಷ್ಕಪಟವಾಗಿತ್ತು ಆ ಮುಖ ಮುದ್ರೆ! ಕಣ್ಣುಗಳು ಮಿನುಗುತಿದ್ದುವಲ್ಲವೆ? ನಿನ್ನೆಯ ತನಕ ನಡೆದುದೆಲ್ಲವೂ ಬರಿಯ ಕನಸಾಗಿ ಇಂದಿನದೊಂದೇ ನಿಜವಾಗುವುದು ಸಾಧ್ಯವಾದರೆ!

"ಆಗಲಿ ಹಾಗಾದರೆ. ಮಗಳಿಗೆ ಕಾಗದ ಬರೀತಾ ಇರಿ. ಆಕೇನೂ ಬರೀತಾಳೆ."

....ತಾವಿನ್ನು ಹೊರಡಬೇಕು. ಹೊತ್ತಾಯಿತೆನ್ನುವ ಸೂಚ್ಯ ಸೂಚನೆ ಆ ಮಾತು.

ತುಂಗಮ್ಮನ ತಂದೆ ಎದ್ದರು. ಸರಸಮ್ಮನೂ ಕುಳಿತಲ್ಲಿಂದ ಎದ್ದರು. ತನಗರಿಯದಂತೆಯೇ ತುಂಗಮ್ಮ ತಂದೆಯ ಬಳಿಗೆ ಬಂದು ನಿಂತಳು.

"ಸರಸಮ್ಮನವರೆ—"

ಅದು ತಂದೆಯ ಧ್ವನಿ. ಒಮ್ಮೆಲೆ, ಹೆಸರು ಹಿಡಿದು ಅವರು ಸಂಬೋಧಿಸಿದ್ದರು.

"ಇನ್ನು ಬದುಕಿರೋವಷ್ಟು ಕಾಲವೂ ಕಣ್ಣೀರಿನ ಅನ್ನವೇ ನನ್ನ ಪಾಲಿಗಿರತ್ತೆ ಅಂತಿದ್ದೆ. ನೀವು ಅದನ್ನು ಸುಳ್ಳಾಗಿ ಮಾಡಿದಿರಿ. ಇನ್ನು ಸತ್ತರೂ ಸರಿಯೆ, ಅಂದ್ಕೊಂಡಿದ್ದೆ. ಸಾಯೋ ಬದಲು, ಇನ್ನೂ ಒಂದಷ್ಟು ದಿವಸ ನಾನು ಬದುಕಿರೋ ಹಾಗೆ ಮಾಡಿದಿರಿ...."

ಹೆತ್ತ ಒಡಲು. ಆ ಭಾವನೆಗಳು ಸರಸಮ್ಮನಿಗೆ ಅರ್ಥವಾಗುತಿದ್ದುವು. ಆದರೂ ಆಕೆ ಅಂದರು:

"ಹಾಗೆಲ್ಲ ನೀವು ಹೇಳಬಾರದು! ಅದೆಲ್ಲ ಮನುಷ್ಯನ ಅಧೀನವೆ?"

"ನಾನು ಈ ಆರೆಂಟು ತಿಂಗಳು ಏನೇನು ಅನುಭವಿಸಿದೀನಿ ಅಂತ ನಿಮಗೆ ಗೊತ್ತಾದರೆ—...."

ತುಂಗಮ್ಮ ಒಮ್ಮೆಲೆ ಸೆರಗಿನಿಂದ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ತನ್ನ ಅರಿವಿಗೆ ನಿಲುಕದ ಏನೇನೋ ಮಾತುಗಳು ಬರುತಿದ್ದುದನ್ನು ಕಂಡು, ಏನೂ ಅರ್ಥವಾಗದವನಂತೆ ಹಾಗೆಯೇ ನಿಂತಿದ್ದ ತುಂಗಮ್ಮನ ತಮ್ಮ ಗಾಬರಿಯಾದ.

"ಅಕ್ಕಾ!"

ಆದರೆ ಅಳುತಿದ್ದುದು ಆಕೆಯೊಬ್ಬಳೇ ಅಲ್ಲ. ತಂದೆಯ ಕಣ್ಣುಗಳಿಂದಲೂ ಹನಿಗಳು ತೊಟ್ಟಿಕ್ಕುತಿದ್ದುವು.

"ಅಣ್ಣ!"

ತಂದೆ, ಕಿಟಕಿಯಿಂದ ಹೊರ ನೋಡಿದರು. ಅವರ ಕೈ ಮಗನ ಮುಂಗುರುಳು ನೇವರಿಸಿತು. ಭಾವನೆಗಳನ್ನು ಅವರು ಹತೋಟಿಗೆ ತಂದುಕೊಂಡರು....ತುಂಗಮ್ಮನೂ ಕಣ್ಣೊತ್ತಿಕೊಂಡು ಸರಾಗವಾಗಿ ಉಸಿರಾಡತೊಡಗಿದಳು.

....ಕರಿಯ ಮೋಡವೊಂದು ಮುಖತೋರಿಸಿ, ಎರಡು ಹನಿಯುದುರಿಸಿ, ಮತ್ತೆ ಗಾಳಿಯಲ್ಲಿ ತೇಲಿ ಹೋಯಿತು....

ಅದೆಷ್ಟು ಹೊತ್ತು ಬಾಗಿಲಿನಾಚೆ ಮರೆಯಲ್ಲಿ ನಿಂತಿದ್ದಳೊ—ಜಲಜ ಒಳ ಬಂದಳು.

ತುಂಗಮ್ಮನೆಂದಳು ಆಕೆಯನ್ನು ತೋರಿಸುತ್ತ:

"ಇವಳೇ ಅಣ್ಣ ಜಲಜ."

ತಂದೆ, ಆಕೆಯನ್ನು ನೋಡಿದರು. ತಮ್ಮನೂ ಕೂಡಾ. ನಿನ್ನ ವಿಷಯ ಆಗಲೆ ಕೇಳಿ ತಿಳಿದಿದೇವೆ—ಎನ್ನುತಿದ್ದುವು ಆ ದೃಷ್ಟಿಗಳು.

“ಬೆಳಿಗ್ಗೇನೆ ನೋಡಿದೀನಿ ಅವಳ್ನ,” ಎಂದರು ತಂದೆ; “ಏನಮ್ಮ ಜಲಜ, ಚೆನ್ನಾಗಿದೀಯಾ ?”

“ಇದೀನಿ ಸಾರ್.”

ತನ್ನನ್ನು ಮಾತನಾಡಿಸಿದರೆಂದು ಎಷ್ಟೊಂದು ಹೆಮ್ಮೆಯಿತ್ತು ಆ ಧ್ವನಿಯಲ್ಲಿ!

ತುಂಗಮ್ಮನ ತಂದೆ, ತಮ್ಮ ಪುಟ್ಟ ಕೈ ಚೀಲವನ್ನೆತ್ತಿಕೊಂಡು, ಮಗನ ಕೈಯನ್ನೂ ಹಿಡಿದು, ಹೊರಡಲು ಸಿದ್ಧರಾದರು.

“ನಮಗಿನ್ನು ಅಪ್ಪಣೆಕೊಡಿ....ನನ್ನದಿಷ್ಟೇ ಪ್ರಾರ್ಥನೆ. ನಿಮ್ಮನ್ನ ದೊಡ್ಡಮ್ಮ ಅಂತ ಕರೆಯೋದು ಇಲ್ಲಿನ ಪದ್ಧತಿಯಂತೆ. ತುಂಗನೂ ನಿಮ್ಮನ್ನ ದೊಡ್ಡಮ್ಮ ಅಂತ್ಲೇ ಕೂಗ್ತಾಳೆ. ಆಕೆ ತಾಯಿ ಇಲ್ಲದ ತಬ್ಬಲಿ. ದಯವಿಟ್ಟು ನೋಡ್ಕೊಳ್ಳಿ. ನೀವೇ ಅವಳ ಪಾಲಿನ ನಿಜವಾದ ದೊಡ್ಡಮ್ಮ. ....ಇನ್ನೇನು ಹೇಳ್ಲಿ ?”

ಹೆಚ್ಚು ಮಾತುಗಳನ್ನಾಡದೆ ಸರಸಮ್ಮನೆಂದರು :

“ಆಗಲಿ....ಹೋಗ್ಬನ್ನಿ....ದೇವರಿದ್ದಾನೆ.”

ಬೀಳ್ಕೊಡುವ ಕೊನೆಯ ನಿಮಿಷ....

ಮಾರ್ಕೆಟನವರೆಗೂ ನಡೆದುಹೋಗುವೆವೆಂದು ಹೊರಟ ತಂದೆ ಮತ್ತು ಮಗನನ್ನು ಕಳುಹಿಕೊಡಲು, ದೊಡ್ಡಮ್ಮ, ತುಂಗಮ್ಮ ಮತ್ತು ಜಲಜ ಕಿರುಗೇಟಿನವರೆಗೂ ಬಂದರು. ನಿಶ್ಚಲ ಮುಖಮುದ್ರೆಯ ಲಲಿತಾ ಬಾಗಿಲಿಗಡ್ಡವಾಗಿ ನಿಂತಿದ್ದಳು ದ್ವಾರಪಾಲಕಿಯಾಗಿ. ಅಭಯಧಾಮದ ಹುಡುಗಿಯರೆಲ್ಲ ಆಕೆಯ ಹಿಂದೆ ನಿಂತುಕೊಂಡು ಕುತೂಹಲದಿಂದ, ವಯಸ್ಸಾದ ಆ ಒಬ್ಬ ಗಂಡಸು ಪುಟ್ಟ ಹುಡುಗನೊಡನೆ ನಡೆದು ಹೋಗುತಿದ್ದುದನ್ನು ನೋಡಿದರು.

ತಂದೆ ಮತ್ತು ತಮ್ಮ ಹೊರಟು ಹೋದ ಮೇಲೆ ತುಂಗಮ್ಮನಿಗೆ ಎಲ್ಲವೂ ಶೂನ್ಯವಾದಂತೆ ತೋರಿತು.

ಆದರೆ ಜಲಜ, ತನ್ನ ತುಂಗಕ್ಕನ ಆತ್ಮೀಯರನ್ನು ಕುರಿತು ಹಲವಾರು ಪ್ರಶ್ನೆಗಳನ್ನು ಕೇಳುತ್ತ, ಆ ಶೂನ್ಯವನ್ನು ಮಧುರವಾದ ನೆನಪುಗಳಿಂದ ತುಂಬಿದಳು.

"ನಿನ್ನ ತಮ್ಮ ನಿನ್ನ ಹಾಗೇ ಇದಾನೆ ತುಂಗಕ್ಕ."

"ಹೌದಾ ?"

"ಅದೇ ಮೂಗು, ಬಾಯಿ, ಕಣ್ಣು. ಎಲ್ಲಾ ನಿನ್ನದೇ ಪ್ರತಿ."

"ಹೋಗಮ್ಮ. ಬರೀ ತಮಾಷೆ ನಿನ್ನದು."

"ಅವನೇನ ತುಂಗಕ್ಕ ಚಂದಮಾಮ ಓದೋನು ?"

"ಹೂಂ. ಅಬ್ಬ! ಯಾವತ್ತೋ ಹೇಳಿದ್ನ ನೆನಪಿಟ್ಕೊಂಬಿಟ್ಟದೀಯಲ್ಲೆ!"

"ಮರೆತು ಬಿಡೋಕೆ ಸಂಗೇನಾಗಿದೆ ಧಾಡಿ!"

ತುಂಗಮ್ಮನಿಗೆ, ಮಾತಿಲ್ಲದ ಮೌನವೇ ಹಿತಕರವೆನಿಸಿತು. ಆದರೆ ಜಲಜ ಬಿಡಬೇಕಲ್ಲವೆ ?

"ಅಕ್ಕ, ನಾನೆಷ್ಟು ಹೆದರ್ಕೊಂಡೇಂತ."

"ಯಾಕೆ ?"

"ನೀನು, ನಮ್ಮನ್ನ ಬಿಟ್ಬಿಟ್ಟು ಹೊರಟ್ಹೋಗ್ತೀಂತ್ಲೇ ತಿಳಕೊಂಡಿದ್ದೆ."

"ಅಣ್ಣ ಏನೋ ಬಾ ಹೋಗೋಣ ಅಂದ್ರು."

—ತನ್ನ ಸಂಸಾರಕ್ಕೆ ತಾನು ಬೇಡವಾದವಳಲ್ಲವೆಂದು ತಿಳಿಸುವತವಕ.

"ಜಲಜ ನೆನಪಾಗಿ, ಬರೊಲ್ಲ ಅಂದ್ಬಿಟ್ಟೆಯಾ ಅಕ್ಕ ?"

"ಹೂಂಕಣೇ."

—ತುಂಗಮ್ಮ ಜಲಜೆಯ ಗಲ್ಲ ತಿವಿದಳು.

"ಚಿನ್ನ ನನ್ನಕ್ಕ. ನಂಗೆಲ್ಲಾ ಗೊತ್ತಿದೆ. ದೊಡ್ಡಮ್ಮ ಆಗ್ಲೇ ಹೇಳಿದಾರೆ. ಇಲ್ದಿದ್ರೆ ನಾನು ಹಾಗೆ ತೆಪ್ಪಗೆ ಕೈ ಕಟ್ಟಕೊಂಡು ನಿಂತಿರ್‍ತಿದ್ದೇಂತ ಭಾವಿಸಿದ್ಯಾ ?"

"ಮತ್ತೇನು ಮಾಡ್ತಿದ್ದೆ ?"

"ವ್ಹಾ ! ಏನು ಮಾಡ್ತಿದ್ದೆ ಅಂತೆ! ನಿಮ್ಮಪ್ಪನ ಕಾಲು ಹಿಡಿದು ತುಂಗಮ್ಮನ ಬಿಟ್ಟು ಹೋಗೀಂತ ಅಂತಿದ್ದೆ."

"ಹುಚ್ಚಿ!"

ಹುಚ್ಚಿಗೆ, ಎರಡುನಿಮಿಷ ಮೌನವಾಗಿರಬೇಕೆಂದು ತೋರಿತು—ಎರಡು ನಿಮಿಷ ಮಾತ್ರ.

"ನಿಮ್ಮ ತಂದೆ ಒಳ್ಳೆಯೋರು, ಅಲ್ವ ತುಂಗಕ್ಕ ?"

ಗಂಟಲು ಕಟ್ಟಿಕೊಂಡಿತ್ತು ತುಂಗಮ್ಮನಿಗೆ. ಆಕೆ ಉತ್ತರವೀಯಲಿಲ್ಲ. ಕುಳಿತಿದ್ದ ಚಾಪೆಯಲ್ಲೆ ತುಂಗಮ್ಮನ ತೊಡೆಯಮೇಲೆ ತಲೆ ಇರಿಸಿ, ಮೈ ಮುದುಡಿಸಿ, ಆಕೆ ಮಲಗಿಕೊಂಡಳು ?

ಆ ಸಂಜೆ ಸರಸಮ್ಮನೂ ಉಲ್ಲಾಸವಾಗಿದ್ದರು. ಹುಡುಗಿಯರೊಡನೆ ತಾವೂ ಹೂವಿನ ಗಿಡಗಳಿಗೆ ಪಾತಿಗಳಿಗೆ ನೀರೆರೆದರು.

ಕತ್ತಲಾದಾಗ ಭಜನೆಯಾಯಿತು.

ವರ್ಷವೆಲ್ಲಾ ದಿನಗಳು ಹೀಗೆಯೇ ಇರಬಾರದೆ-ಎನಿಸಿತು ಸರಸಮ್ಮನಿಗೆ-

ಅವರು, ಜಲಜ-ಲಲಿತ-ಸಾವಿತ್ರಿಯರನ್ನು, ಸುಂದ್ರಾ-ಕಲ್ಯಾಣಿಯರನ್ನು, ತಮ್ಮ ಆಫೀಸು ಕೊಠಡಿಗೆ ಕರೆಸಿ ರವಕೆ ಕಣಗಳನ್ನು ಕೊಟ್ಟರು.

ಮೂಗಿ ತನಗೆ ಅರ್ಥವಾಯಿತೆಂದು ಸನ್ನೆಮಾಡಿದಳು.

ಕುರುಡಿ ಮಾತ್ರ ಕೇಳಿದಳು:

"ಯಾಕ್ರವ್ವಾ ಇದು ?"

"ತುಂಗಮ್ನ ತಂದೆ ಬಂದಿದ್ರು ನೋಡು—"

"ಊಂ. ಅಂಗೇಂತ ಅಂದ್ಲು ಪಾರೋತಿ."

"ಅವರ್ಕೊಟ್ಟದ್ದು."

"ತುಂಗಕ್ಕ ಕೊಡಿಸಿದ್ಲೂ ಅನ್ನಿ!"

ಕುರುಡಿಯ ಕೈ ಬೆರಳು, ರವಕೆ ಕಣದ ಮೇಲಿನ ಹೂವಿನ ಚಿತ್ರಗಳನ್ನು ಬಟ್ಟೆಯಿಂದ ಬೇರೆಯಾಗಿಯೆ ಗುರುತಿಸಲು ಯತ್ನಿಸುತಿತ್ತು.

ಅದಾದ ಮೇಲೆ ಸರಸಮ್ಮ, ಎಲ್ಲ ಹುಡುಗಿಯರನ್ನೂ ಒಬ್ಬೊಬ್ಬರಾಗಿ ಕರೆದು ಒಂದು ಕಿತ್ತಳೆ ಹಣ್ಣು-ಎರಡೆರಡು ಬಿಸ್ಕತ್ತು ಕೊಟ್ಟರು. ಒಬ್ಬಳು ಹುಡುಗಿ ಮಾತ್ರ ಎರಡನೆಯ ಬಾರಿ ಪಡೆಯಲೆತ್ನಿಸಿ ಸಿಕ್ಕಿಬಿದ್ದಳು. ತುಂಗಮ್ಮ ಗದರಿಸಲಿಲ್ಲ. "ಕೆಟ್ಟ ಹುಡುಗಿ!" ಎಂದು ನಗುತ್ತ ಛೀಮಾರಿ ಹಾಕಿ ಹಾಗೆಯೇ ಓಡಿಸಿದರು.

ಊಟಕ್ಕೆ ಕುಳಿತಾಗ ಕಲ್ಯಾಣಿ ಬಂದು ಗಲಾಟೆ ಮಾಡಿದಳು.

'ಇವತ್ತಾದರೂ ಹೇಳೆ-ಹೇಳೆ'

—ಎನ್ನುವಂತಿತ್ತು ಜಲಜೆಯ ಎದುರು ಆಕೆ ಮಾಡಿದ ಸದ್ದು-ಅಭಿನಯ.

"ಏನಂತೆ ಅವಳಿಗೆ ?"

—ಎಂದು ತುಂಗಮ್ಮ ಕೇಳಿದಳು.

"ಅದೇ-ತಟ್ಟೆಯ ವಿಷಯ."

ತುಂಗಮ್ಮನ ಹುಬ್ಬು ಗಂಟಿಕ್ಕಿತು. ಎಷ್ಟೊಂದು ಸಮಯದಿಂದ ಅದೇನೆಂದು ಹೇಳದೆ ಸತಾಯಿಸುತ್ತ ಬಂದಿದ್ದಳು ಆ ಜಲಜ !

"ಹೋಗಲಿ, ಹೇಳು !"

ಜಲಜ ನಗುವನ್ನು ತಡೆಯುತ್ತಾ ಅಂದಳು :

"ಹಿಂದೆ ಕಮಲಾಕ್ಷೀಂತ ಒಬ್ಬಳಿದ್ಲು."

"ಹೂಂ."

"ಅವಳಿಗೆ ಮದುವೆಯಾಗಿ ಹೊರಟ್ಹೋದ್ಲು."

"ಅದಕ್ಕೆ-?"

"ಆ ಮೇಲೆ ವಿಶಾಲಾಕ್ಷೀಂತ ಒಬ್ಳು ಬಂದ್ಲು."

"ಹೂಂ."

"ಅವಳೂ ಮದುವೆಯಾಗಿ ಹೋದ್ಲು."

"ಆಗಲಿ. ಅವರ ಮದುವೆಗೂ ಈ ತಟ್ಟೆಗೂ ಸಂಬಂಧ ?"

"ಅವರಿಬ್ಬರೂ ನಿನ್ನ ಈ ತಟ್ಟೇಲೆ ಊಟಮಾಡಿದ್ದು."

ತುಂಗಮ್ಮನ ಮುಖ ಕೆಂಪಗಾಯಿತು. ನಗುತ್ತ ಜಲಜ ಅಂದಳು :

"ಈ ತಟ್ಟೇಲಿ ಊಟ ಮಾಡ್ದೋರೆಲ್ಲಾ ಮದುವೆಯಾಗಿ ಹೋಗ್ತಾರೆ ಅಕ್ಕ !"

"ಥೂ !"

ತುಂಗಮ್ಮ-ಜಲಜೆಯರ ಸಂಭಾಷಣೆಯನ್ನೆ ಈಕ್ಷಿಸುತಿದ್ದ ಕಲ್ಯಾಣಿ ಬಿದ್ದು ಬಿದ್ದು ನಕ್ಕಳು.

## ೧೩

"ಅಮ್ಮಾ! ಏ ಅಮ್ಮಾ!"

ಬಲವಾಗಿ ಬಾಗಿಲು ತಟ್ಟುತಿದ್ದರು ಯಾರೋ. ಕರೆಯುತಿದ್ದುದು ಗಂಡಸಿನ ಗಡುಸಾದ ಸ್ವರ.

ಎಲ್ಲರ ಹಾಗೆಯೇ ಚಾಪೆಯಮೇಲೆ ಸೀರೆಯನ್ನು ಮಡಚಿಹಾಕಿ ನಿದ್ದೆ ಹೋಗಲು ಯತ್ನಿಸಿದಳು ತುಂಗಮ್ಮ. ಆಕೆ ಮಲಗಿದ್ದುದು ಜಗಲಿಯ ಮೇಲೆ, ಜಲಜೆಯ ಬಳಿಯಲ್ಲಿ. ಆ ಗೆಳತಿಯರು ಗುಣುಗುಣು ಎಂದು ಬಹಳ ಹೊತ್ತು ಮಾತನಾಡಿದ್ದರು. ಆ ಮಾತುಗಳ ನಡುವೆ ಹೂಂಗುಡುತಿದ್ದಾಗಲೊಮ್ಮೆ ಸದ್ದಿಲ್ಲದೆ ಜಲಜ ನಿದ್ದೆ ಹೋಗಿದ್ದಳು. ಆಮೇಲೂ ಎಷ್ಟೋ ಹೊತ್ತು ತುಂಗಮ್ಮನಿಗೆ ನಿದ್ದೆ ಬರಲಿಲ್ಲ.

ಅದೇ ಆಗ ಮಂಪರು ಹೊಂಚಿಹಾಕುತಿದ್ದಾಗಲೇ ಬಾಗಿಲು ತಟ್ಟಿದ ಸದ್ದು ಕೇಳಿಸಿತು.

"ಅಮ್ಮಾ! ಅಮ್ಮಾ!"

– ಮತ್ತೆ ಅದೇ ಕರೆ. ಅದು ಗಂಡಸಿನ ಧ್ವನಿಯಾಗಿತ್ತೆಂದು ತುಂಗಮ್ಮನಿಗೆ ಯಾಕೋ ಭಯವೆನಿಸಿತು.

ಆಕೆ ಎದ್ದು ಕುಳಿತು ಜಲಜೆಯ ಮೈಕುಲುಕಿದಳು.

"ಜಲಜ! ಏ ಜಲಜ!"

ಗಾಬರಿಗೊಂಡ ಜಲಜ ಗಕ್ಕನೆ ಎದ್ದು ಕೇಳಿದಳು.

"ಏನಕ್ಕ? ಏನಾಯ್ತಕ್ಕ?"

"ನೋಡು. ಹೊರಗೆ ಯಾರೋ ಬಾಗಿಲು ತಟ್ತಿದಾರೆ."

ಜಲಜ ಕಿವಿನಿಗುರಿಸಿ, "ಹೂಂ ಹೌದು" ಎಂದಳು.

"ಗಂಡಸಿನ ಸ್ವರ ಇದ್ದಹಾಗಿದೆ, ಅಲ್ವಾ?"

ನಕ್ಕಳು ಜಲಜ.

"ಯಾಕೆ - ಗಂಡಸ್ರು ಬಾಗಿಲು ತಟ್ಟಾರ್ದೇನು? ಹೆದರ್ಕೋಬೇಡ ನಚ್ಚಕ್ಕ. ಗಂಡಸ್ರು ಅಭಯ ಕೇಳ್ಕೊಂಡು ಇರ್ಲ್ಲಿಗ್ಬರಲ್ಲ. ಅವರಿಗೆ ಯಾವ ತಾಪತ್ರಯವೂ ಇಲ್ಲ! ಪೋಲೀಸಪ್ಪ ಬಂದಿರ್ಬೇಕು ಏನ ಹಿಡ್ಕೊಂಡು.... ಏಳು, ದೊಡ್ಡಮ್ಮನ್ನ ಎಬ್ಬಿಸೋಣ."

ಅವರಿಬ್ಬರೂ ಎದ್ದು ನಿಲ್ಲುವುದರೊಳಗೇ ಸರಸಮ್ಮನ ಕೊಠಡಿಯ ದೀಪ ಬೆಳಗಿತು. ಸದ್ದು ಕೇಳಿ ಅವರೂ ಎದ್ದಿದ್ದರು.

ಕರೆಯುತಿದ್ದ ಸ್ವರ ಕಿಟಕಿಯ ಬಳಿಗೆ ಬಂತು.

"ಕದ ತೆರೀರಿ ಅಮ್ಮ. ಇಬ್ಬರು ಹುಡುಗೀರ್ನ ಅಡ್ಮಿಟ್ ಮಾಡ್ಕೊಳ್ಳಿ."

ಆತನ ಹಿಂದೆ ಇಬ್ಬರು ಹುಡುಗಿಯರಿದ್ದರು. ಒಬ್ಬಳ ಬಲಗೈಯನ್ನು ಇನ್ನೊಬ್ಬಳ ಎಡಗೈಗೆ ಕರವಸ್ತ್ರದಿಂದ ಬಿಗಿದಿತ್ತು. ಅವರ ಹಿಂದೆ ಮತ್ತೊಬ್ಬ ಪೋಲೀಸಿನವನಿದ್ದ.

ಹಾಗೆ ಪೋಲೀಸರು ಬೀದಿಯಲ್ಲಿ ಪೋಲಿ ಅಲೆಯುವ ಹುಡುಗಿಯರನ್ನು ಹಿಡಿದುಕೊಂಡು ಬರುವುದುಂಟೆಂದು ತುಂಗಮ್ಮ ಕೇಳಿದ್ದಳು, ಕಂಡಿರಲಿಲ್ಲ. ಈಗ ಅಂತಹ ಮೊದಲ ಪ್ರಸಂಗವಿತ್ತು ಎದುರಿಗೆ.

ಹೆಬ್ಬಾಗಿಲು ತೆರೆದುಕೊಂಡು ಆ ನಾಲ್ವರನ್ನೂ ಬರಮಾಡಿತು.

ಪೋಲೀಸರವನೊಬ್ಬನ ಹಸಿದ ಕಣ್ಣುಗಳು ಆ ಕತ್ತಲೆಯಲ್ಲಿ ಜಗಲಿ ಹಜಾರದ ಸುತ್ತೆಲ್ಲ ಚಲಿಸಿದುವು. ಏನೂ ಕಾಣದೆ ಆತ, ದೊಡ್ಡಮ್ಮನ ಬಳಿಯಲ್ಲೇ ನಿಂತಿದ್ದ ತುಂಗಮ್ಮ ಜಲಜೆಯರನ್ನೇ ನೋಡಿದ. ಆದರೆ ಅವರು ಆತನನ್ನು ಗಮನಿಸುತ್ತಿರಲಿಲ್ಲ. ಅವರ ದೃಷ್ಟಿಯೆಲ್ಲ ಆ ಇಬ್ಬರು ಹುಡುಗಿಯರ ಮೇಲೆ ನೆಟ್ಟಿತ್ತು. ಒಬ್ಬಳಿಗೆ ವಯಸ್ಸು ಇಪ್ಪತ್ತು ದಾಟಿರಬೇಕು. ಯೌವನ, ಉಡುಗೆಯನ್ನು ಬಿರಿದು ಹೊರಸೂಸುತಿತ್ತು. ಉಟ್ಟಿದ್ದುದು ಹಳೆಯದಾದ ಜಿಡ್ಡಾದ ವಾಯಿಲ್ ಸೀರೆ. ಕಣ್ಣುಗಳು ಕೆರಳಿದ ಚಿರತೆಯ ಹಾಗೆ ಎಲ್ಲರನ್ನೂ ದುರುಗುಟ್ಟಿಕೊಂಡು ನೋಡುತಿದ್ದುವು. ಇನ್ನೊಬ್ಬಳು ಚಿಕ್ಕವಳು. ಹದಿನೈದು ದಾಟಿತ್ತೋ ಇಲ್ಲವೋ. ಕಿವಿ, ಕತ್ತು, ಕೈಗಳಲ್ಲಿ ಒಂದಿಷ್ಟು ಚಿನ್ನ ಆಭರಣವಾಗಿ ಕುಳಿತಿತ್ತು. ಬಿಕ್ಕಿಬಿಕ್ಕಿ ಅಳುತಿದ್ದಳು ಆಕೆ. ಆ ಹುಡುಗಿ ಅಳುವುದು ತನಗೆ ಅವಮಾನವೆಂಬಂತೆ ಆಕೆಯನ್ನೂ ಕೆಂಗಣ್ಣಿನಿಂದ ನೋಡುತಿದ್ದಳು ದೊಡ್ಡವಳು.

ಸರಸಮ್ಮ ಮೇಜಿನ ಮೇಲಿನಿಂದೊಂದು ಸಣ್ಣ ಪುಸ್ತಕವನ್ನೆತ್ತಿಕೊಂಡು ಬರೆಯತೊಡಗುತ್ತ ಕೇಳಿದರು :

" ಇವರಿಬ್ಬರ ಹೆಸರು ಹೇಳ್ತೀರಾ ?

ಇರುಳಿನ ನೀರವತೆಯಲ್ಲಿ ಸ್ವರ ವಿಕಟವಾಗಿ ಪ್ರತಿಧ್ವನಿಸುವ ಹಾಗೆ ಒಬ್ಬ ಪೋಲೀಸರವನೆಂದ :

" ಏನ್ರೇ ನಿಮ್ಹೆಸ್ರು ? ಹುಂ ಹೇಳಿ !"

ಆ ಹುಡುಗಿಯರು ಉತ್ತರವೀಯಲಿಲ್ಲ.

ಅವರನ್ನು ಉದ್ದೇಶಿಸಿ ಸರಸಮ್ಮನೇ ಕೇಳಿದರು :

" ಹೆಸರು ಹೇಳ್ತಿರೇನಮ್ಮ ? ಇಲ್ಲಿ ಬರಕೋಬೇಕು."

ಮತ್ತೂ ಮಾತನಾಡಲಿಲ್ಲ ಹುಡುಗಿಯರು.

ಪ್ರಶ್ನೋತ್ತರಕ್ಕೆ ತಕ್ಕ ವಾತಾವರಣ ಏರ್ಪಡಬೇಕೆಂದು ಸರಸಮ್ಮ " ಇದೇನು ಪೋಲೀಸ್‌ಸ್ಟೇಷನ್ನೂಂತ ತಿಳಕೊಂಡ್ರಾ ? ಅವರ ಕೈಗೆ ಕಟ್ಟಿದ್ದನ್ನ ಬಿಚ್ಚಿ !" ಎಂದರು. ಆಸ್ವರದಲ್ಲಿ ನಯವಿನಯವಿರಲಿಲ್ಲ.

ವಯಸ್ಸಾಗಿದ್ದ ಇನ್ನೊಬ್ಬ ಪೋಲೀಸರವನು ಕಟ್ಟಿದ್ದ ಕರವಸ್ತ್ರವನ್ನು ಬಿಚ್ಚಿದ. ದೊಡ್ಡವಳು ಕೈ ಕೊಸರಿಕೊಂಡು ಸೆಟೆದು ನಿಂತಳು. ಚಿಕ್ಕವಳು ಎರಡು ಕೈಗಳನ್ನೆತ್ತಿ ಸೆರಗಿನಿಂದ ಮುಖ ಮುಚ್ಚಿಕೊಂಡಳು.

ಮತ್ತೊಮ್ಮೆ ಹೆಸರು ಕೇಳಿದರು ಸರಸಮ್ಮ. ಆದರೆ ಆ ಹುಡುಗಿಯರು ಮಾತನಾಡುವ ಲಕ್ಷಣ ಕಾಣಿಸಲಿಲ್ಲ.

ಗದರಿಕೆಯ ಧ್ವನಿಯಿಂದ ಮಾತನಾಡಿದ್ದ ಪೋಲೀಸರವನು, ವ್ಯಂಗ್ಯ ಬೆರೆತ ಸ್ವರದಲ್ಲಿ ಹೇಳಿದ :

" ಪೋಲೀಸ್ ಸ್ಟೇಷನ್ನಲ್ಲಾದ್ರೆ ಬಾಯಿ ಬಿಡ್ತವೆ !"

ಸರಸಮ್ಮನಿಗೆ ಪೋಲೀಸರ ಸಹವಾಸವೇನೂ ಪ್ರಿಯವಾಗಿದ್ದಂತೆ ತೋರಲಿಲ್ಲ.

" ಇವರ್ನ ಇಲ್ಲಿಗೆ ಯಾತಕ್ಕೆ ಕರಕೊಂಡು ಬಂದಿದೀರಾ ?"

" ಏನಮ್ಮ ಹೀಗೆ ಹೇಳ್ತೀರಾ ? ಇದೇನು ಹೊಸತೆ ? ಹುಂ. ಏನಾದರೂ ಹೆಸರು ಬರಕೊಂಡ್ಬಿಡಿ, ನಮಗೆ ಹೊತ್ತಾಯ್ತು."

ಸರಸಮ್ಮನಿಗೆ ರೇಗಿತು.

" ಏನಾದರೂ ಹೆಸರು ಬರ್ಕೊಳ್ಳೋದು ಬೇರೆಕಡೆ ನಡೆದೀತು - ಇಲ್ಲಿ ಅಲ್ಲ !"

ಹೆಣ್ಣುಹೆಂಗಸಿನಿಂದ ತನಗೆ ಅವಮಾನವಾಯಿತೆಂದು ಪೋಲೀಸಿನವನಿಗೆ ತಾಳ್ಮೆ ತಪ್ಪಿತು.

" ಹಾಗಾದರೆ, ಇಲ್ಲಿ ಸೇರಿಸ್ಕೊಳ್ಳೋದಿಲ್ಲಾಂತ ಬರ್ಕೊಡಿ. ಲಾಕಪ್ಪಿಗೆ ಕರಕೊಂಡು ಹೋಗ್ತೀನಿ."

ಸರಸಮ್ಮ ಆತನ ದರ್ಪಕ್ಕೆ ಮಣಿಯಬಾರದೆಂದುಕೊಂಡರು.

ಆದರೆ ಲಾಕಪ್ಪಿನ ಪದ ಕಿವಿಗೆ ಬಿದ್ದೊಡನೆಯೆ ದೊಡ್ಡವಳು ಬೆಚ್ಚಿಬಿದ್ದಳು ; ಚಿಕ್ಕವಳ ರೋದನ ಬಲವಾಯಿತು.

ದೃಢವಾದ ಸ್ವರದಲ್ಲಿ ದೊಡ್ಡ ಹುಡುಗಿಯೆಂದಳು :

" ನನ್ನ ಹೆಸರು ಜಾನಕೀಂತ. ಇವಳ ಹೆಸರು ಕಾವೇರಿ."

ಅನಿವಾರ್ಯವಾಗಿದ್ದೊಂದು ಗಂಡಾಂತರ ತಪ್ಪಿತೆಂದು ಎಲ್ಲರಿಗೂ ಸ್ವಲ್ಪ ಸಮಾಧಾನವಾಯಿತು.

ಹೆಸರುಗಳನ್ನು ಪುಸ್ತಕದಲ್ಲಿ ಬರೆದುಕೊಂಡು ಸರಸಮ್ಮ ಆ ಪೋಲೀಸರವನಿಗೆ ಹೇಳಿದಳು :

" ನೀವು ಈ ಪುಟದಲ್ಲಿ, ಇವರಿಬ್ಬರನ್ನೂ ತಂದು ಅಭಯಧಾಮದ ವಶಕ್ಕೆ ಒಪ್ಪಿಸಿದೀವಿ ಅಂತ ಬರೆದು ಸಹಿಮಾಡ್ಬೇಕು. ಇವತ್ತಿನ ತಾರೀಖೂ ಬರೀರಿ. ತಂದು ಬಿಟ್ಟಾಗ ಹೊತ್ತು ಹನ್ನೆರಡೂವರೆ ಗಂಟೆ ಅಂತಾನೂ ಬರೀರಿ."

" ಅದೊಂದೂ ಬರಿಯೋಕಾಗೋದಿಲ್ಲ."

" ಹಾಗಾದರೆ ಇವರ್ನ ವಾಪಸು ಕರಕೊಂಡು ಹೋಗ್ಬಹುದು."

" ಹೋದ್ಸಲಿ ಬಂದಾಗ ಹಾಗೆ ನಾನು ಬರ್ಕೊಟ್ಟಿಲ್ಲ."

" ಅದಕ್ಕೇ ಈಸಲಿ ಬರೀರಿ ಅಂತ ಹೇಳ್ತಿರೋದು. ಹೋದ್ಸಲಿ ನೀವು ಏನೇನು ಮಾಡಿದಿರಿ ಅನ್ನೋದನ್ನ ನನ್ನ ಬಾಯಿಂದಲೂ ಕೇಳ್ಬೇಕೂಂತ ಇದೀರೇನು ? ಡಿ. ಎಸ್. ಪಿ. ಸಾಹೇಬರು ಹೇಳಿದಾರೆ; ನೀವು ಸಹಿಹಾಕಿದ ಹೊರತು ಯಾರನ್ನೂ ಅಡ್ಮಿಟ್ ಮಾಡೋ ಹಾಗಿಲ್ಲ."

ಡಿ. ಎಸ್. ಪಿ. ಎಂಬ ಪದೋಚ್ಚಾರಣೆಕೇಳಿ, ಪೋಲೀಸಿನವನ

ಕರ್ರಗಿನ ಮುಖ ಮತ್ತಷ್ಟು ಕಪ್ಪಿಟ್ಟಿತು. ಅವನ ಪ್ರತಾಪದ ನಿಲುವು ಕುಗ್ಗಿ ಹೋಯಿತು. ಆತ ಗೊಣಗಿದ. ಆದರೆ ಅದೇನೆಂದು ಯಾರಿಗೂ ಅರ್ಥವಾಗ ಲಿಲ್ಲ. ಸರಸಮ್ಮ ಹೇಳಿದಂತೆಯೆ ಬರೆದು ಆತ ಸಹಿಹಾಕಿದ.

ಪೋಲಿಸರೊಡನೆ ಮಾತನಾಡಿದ ಸ್ವರದ ಬದಲು, ಪರಿಚಯದ ದೊಡ್ಡಮ್ಮನ ಮೃದುಸ್ವರವೇ ಕೇಳಿಸಿತು:

"ಜಲಜ, ಒಳಗಿನ ಕೊಠಡೀಲಿ ಎರಡು ಚಾಪೆಹಾಕಿ ಇವರಿಬ್ಬರ್ನ ಅಲ್ಲಿ ಬಿಟ್ಬಿಡಮ್ಮ."

"ಹೂಂ ದೊಡ್ಡಮ್ಮ."

"ನೀವೆಲ್ಲಿ ಮಲಕೊಂಡಿದೀರಾ?"

—ಎಂದರು ಸರಸಮ್ಮ, ತುಂಗಮ್ಮನನ್ನೂ ನೋಡುತ್ತ.

"ಅಲ್ಲೇ, ಆ ಕೊಠಡಿ ಬಾಗಿಲಲ್ಲೇ ದೊಡ್ಡಮ್ಮ."

"ಸರಿ ಹಾಗಾದರೆ."

ಆ ಪೋಲೀಸರವನು ಮತ್ತೊಮ್ಮೆ ತುಂಗಮ್ಮ ಜಲಜೆಯರನ್ನು ನೋಡಿ, ತಾನು ತಂದು ಬಿಟ್ಟಿದ್ದ ಬೇಟೆಗಳನ್ನೂ ನೋಡಿ, ತನ್ನ ಹಳೆಯ ಸಹೋದ್ಯೋಗಿಯೊಡನೆ ಹೊರಟುನಿಂತ. ಸರಸಮ್ಮ ಅವರಿಬ್ಬರನ್ನೂ ಬಾಗಿಲು ದಾಟಿಸಿ ಬೀಗ ತಗಲಿಸಿದರು.

ಆಮೇಲೆ ಅವರ ಕೊಠಡಿಯ ದೀಪ ಆರಲು ಹೆಚ್ಚುಹೊತ್ತು ಹಿಡಿಯ ಲಿಲ್ಲ.

ಹುಡುಗಿಯರನ್ನು ಒಳಕ್ಕೆ ಬಿಟ್ಟು ಜಲಜ ಆ ಕೊಠಡಿಯ ಬಾಗಿಲೆಳೆದು ಕೊಂಡಳು....ಆ ಮಾತುಕತೆ-ಸದ್ದಿಗೆ ಹಲವು ಹುಡುಗಿಯರು ಎಚ್ಚರ ಗೊಂಡರೂ ಮತ್ತೆ ನಿದ್ದೆ ಹೋದರು.

ಜಲಜ-ತುಂಗಮ್ಮರಿಗೆ ಮಾತ್ರ ನಿದ್ದೆ ಬರಲಿಲ್ಲ. ಪಿಸುಮಾತಿನಲ್ಲೆ ಜಲಜ ಪೋಲೀಸರ ಸಾಹಸದ ಕತೆಗಳನ್ನು ಹೇಳಿದಳು.

"ಡಿ. ಎಸ್. ಪಿ. ಗೀಯಸ್ಪಿ ಅಂತ ಗದರಿಸ್ಲಿಲ್ವೆ ದೊಡ್ಡಮ್ಮ? ಅದೇನು ಗೊತ್ತಾಯ್ತೆ ನಿಂಗೆ?"

"ಇಲ್ಲ, ಏನು ಹೇಳು?"

"ಅಯ್ಯೊ! ಒಂದೆರಡ಼್ಲ ಏನಾಯ್ತೂಂತ—"

ಹೀಗಾಗಿತ್ತು ಒಂದೆರಡುಸಲ. ನಡುರಾತ್ರಿ ಇಬ್ಬರು ಮೂವರು ಹುಡುಗಿಯರನ್ನು ಕರೆದುಕೊಂಡು ಬಂದಿದ್ದರು ಪೋಲೀಸರು. ಪುಸ್ತಕದಲ್ಲಿ ಸಹಿ ಮಾಡಿರಲಿಲ್ಲ.

ಮರುದಿನ ಬೆಳಿಗ್ಗೆ ಅವರಲ್ಲಿ ಯಾವನಾದರೂ ಪೋಲೀಸಿನವನು ಬಂದು, ಹುಡುಗಿಯರನ್ನು ವಾಪಸು ಕೇಳುತಿದ್ದ.

"ಇವರ್ನೇನು ಮಾಡ್ತೀರಪ್ಪ?"

—ಎಂದು ದೊಡ್ಡಮ್ಮ ಕೇಳುತಿದ್ದರು.

"ಸ್ಟೇಷನಿಗೆ ಕರಕೊಂಡು ಹೋಗಿ, ಅಲ್ಲಿಂದ ಕೋರ್ಟಿಗೆ ಸಾಗಿಸಿ ನ್ಯಾಯಾಧೀಶರ ಮುಂದೆ ಹಾಜರ್ಮಾಡ್ತೀವಿ."

"ಅಲ್ಲೇನಾಯ್ತೂಂತ ನೀವು ಸ್ವಲ್ಪ ಬಂದು ತಿಳಿಸ್ಬೇಕು."

"ಆಗಲಿ ಅಮ್ಮ."

ಆದರೆ ಏನಾಯಿತೆಂದು ತಿಳಿಸಿದವರು ಯಾರೂ ಇಲ್ಲ. ಎಷ್ಟೋವೇಳೆ ಅಂಥ ಹುಡುಗಿಯರು ನ್ಯಾಯಾಧೀಶರಿಂದ ವಿಚಾರಣೆಗೆ ಗುರಿಯಾಗುವುದಿತ್ತು. ಇನ್ನೆಷ್ಟೋವೇಳೆ, ಹುಡುಗಿಯರು ಹೊರಬಂದು ಅಭಯಧಾಮದ ದೃಷ್ಟಿಯಿಂದ ಮರೆಯಾದೊಡನೆ ಆ ಪೋಲೀಸರೇ ಶಿಕ್ಷೆ ವಿಧಿಸುತಿದ್ದರು.

ಅಂತಹ ಶಿಕ್ಷೆ, ಆ ಹುಡುಗಿಯರ ಇರುವಿಕೆ ರೂಪ-ಲಾವಣ್ಯಗಳನ್ನು ಅವಲಂಬಿಸುತಿತ್ತು. ಒಮ್ಮೊಮ್ಮೆ, ಆ ಹುಡುಗಿಯರಲ್ಲಿದ್ದ ಆಭರಣಗಳನ್ನಾಗಲೀ ದುಡ್ಡುದುಗ್ಗಾಣಿಯನ್ನಾಗಲೀ ಪೋಲೀಸರು ಕಿತ್ತುಕೊಳ್ಳುತಿದ್ದರು. ಅಥವಾ-ಅಥವಾ-....ಪೋಲೀಸರು ಹೇಳಿದಲ್ಲಿಗೆ ಹೋಗಿ ಒಂದೆರಡು ರಾತ್ರಿಗಳನ್ನು ಅವರು ಕಳೆಯಬೇಕಾಗುತಿತ್ತು.

"ಥೂ!"

—ಎಂದಳು ತುಂಗಮ್ಮ, ಜಲಜೆಯಿಂದ ಆ ವಿಷಯವನ್ನು ಕೇಳಿ ತಿಳಿಯುತಿದ್ದಾಕೆ.

"ಇದನ್ನೆಲ್ಲ ನೋಡಿ ದೊಡ್ಡಮ್ನಿಗೆ ಬೇಜಾರಾಗಿದೆ ತುಂಗಕ್ಕ."

"ಬೇಜಾರಾಗ್ದೆ ಇದ್ದೀತೆ? ಎಷ್ಟೊಂದು ಕೆಟ್ಟವರು!"

"ಅಲ್ದೆ ಅವರು ಹಿಡಕೊಂಡು ಬರೋದು ಕೂಡಾ ಎಂಥವರ್ನ

ಅಂತೀಯಾ - ಬರೇ ಬಡವರು. ನಾನು ಎಷ್ಟೋ ಸಾರಿ ನೋಡಿದೀನಿ. ಕಸಬಿನಲ್ಲಿದ್ದು ದುಡ್ಡುಗಿಡ್ಡು ಮಾಡಿರೋ ಹುಡುಗೀರ್ನ ಒಮ್ಮೆಯಾದರೂ ತರ್ಬೇಕಲ್ಲ! ಅವರ್ನ ಹಿಡ್ದಾಗ್ಲೆಲ್ಲಾ ಈ ಪೋಲೀಸರಿಗೆ ಚೆನ್ನಾಗಿ ಕೈ ಬೆಚ್ಚಗೆ ಆಗತ್ತೆ....''

"ಒಳ್ಳೆಯ ಕೆಲಸಕ್ಕೇಂತ ಇರೋರೇ ಹೀಗ್ಮಾಡಿದ್ರೆ—"

"ಅದಕ್ಕೇ ದೊಡ್ಡಮ್ಮ ರೇಗೋದು. ಹೋದಸಾರಿ ಅವರು ಭಾರೀ ಗಲಾಟೆ ಮಾಡಿದ್ರು. ದೂರು ಕೊಟ್ರು. ಡಿ. ಎಸ್. ಪಿ. ವರೆಗೂ ಹೋಗಿ ನೋಡ್ಕೊಂಡು ಬಂದ್ರು. ರಾತ್ರೆಹೊತ್ತು ಪೋಲೀಸರು ಕರಕೊಂಡ್ಬರೋ ಹುಡುಗೀರ್ಗೆ ಮುಂದೆ ಏನಾಗತ್ತೆ ಅನ್ನೋದನ್ನ ಅಭಯಧಾಮಕ್ಕೆ ತಿಳಿಸಿಯೇ ತೀರ್ಬೇಕು ಅಂತ ಹಟತೊಟ್ರು."

"ದೊಡ್ಡಮ್ಮ ಅಂತ ಗೌರವ ಇಟ್ಕೊಂಡಾದ್ರೂ ಮಾತನಾಡಿದ್ನೆ ಆತ? ಹುಂ!''

"ಹಾದೀಲಿ ಯಾರೋ ನೋಡ್ಬಿಟ್ಟಿರ್ಬೇಕು. ಅದಕ್ಕೇ ಇಲ್ಲಿಗೆ ಕರಕೊಂಡ್ಬಂದ. ಇಲ್ದಿದ್ರೆ—''

"ನಮ್ಮನ್ನೂ ಹ್ಯಾಗೆ ನೋಡ್ತಿದ್ದ, ಅಲ್ಲ?''

"ಹೂಂ. ನಿನ್ನ ಗಮನಕ್ಕೂ ಬಿತ್ತು ಹಾಗಾದ್ರೆ."

ಅಳು ಮತ್ತು "ಮಲಕೊಳ್ಳೆ. ಬೋಸುಡಿ" ಎಂಬ ಗದರಿಕೆ ಕೊಠಡಿಯೊಳಗಿಂದ ಕೇಳಿಸಿ, ತುಂಗಮ್ಮ ಜಲಜೆಯರ ಪಿಸುಮಾತಿಗೆ ತಡೆಹಾಕಿತು.

"ಪಾಪ! ಚಿಕ್ಕೋಳು ಅಳ್ತಿದ್ದಾಳೇಂತ ಕಾಣುತ್ತೆ. ಅಲ್ವ ಜಲಜ?"

"ಹೂಂ ಅಕ್ಕ.''

"ನಂಗ್ಯಾಕೊ ಆ ಚಿಕ್ಕೋಳ್ನ ನೋಡಿ ಅಯ್ಯೋ ಅನ್ನಿಸ್ತು."

"ನಂಗೂನು.''

"ಯಾಕಾದರೂ ಕಸಬಿಗೆ ಬಿದ್ದಳೊ?"

"ನಾನು ಹೇಳ್ಲೆ ಅಕ್ಕ? ಇಂಥವರ್ನ ಬಹಳ ನೋಡಿದೀನಿ. ದೊಡ್ಡೋಳು ಕಸಬಿನೋಳೇ. ಸಂಶಯವೇ ಇಲ್ಲ. ಚಿಕ್ಕ ಹುಡುಗೀನ ಇದೇ ಮೊದಲ್ನೆ ಸಾರಿ ಬೀದಿಗೆ ಕರಕೊಂಡು ಬಂದಿದಾಳೆ. ಆಕೆ ಬೇರೆ ಮನೆಯೋಳು. ಖಂಡಿತ."

ಜಲಜೆಯ ಊಹೆ ಸರಿಇರಬೇಕು ಅನ್ನಿಸಿತು, ತುಂಗಮ್ಮನಿಗೂ. ತನ್ನ ಗೆಳತಿಯ ಸೂಕ್ಷ್ಮಬುದ್ಧಿಗಾಗಿ ಮೆಚ್ಚುಗೆ ಎನಿಸಿತು.

"ನಾಳೆ ಏನ್ಮಾಡ್ತಾರೋ ಇವರ್ನ?"

"ದೊಡ್ಡಮ್ಮ ಬರಸ್ಕೊಳ್ದೇ ಇದ್ದಿದ್ರೆ ಆ ಪೋಲೀಸ್ನೋನು ಅವರಿಬ್ಬರ್ನೂ ಇಲ್ಲಿಂದ ಕರಕೊಂಡು ಹೋಗಿ, ಇದ್ದಿದ್ನ ಕಸಕೊಂಡೋ ಏನಾದರೂ ಮಾಡಿಯೋ ಬಿಡ್ತಿದ್ದ. ಆದರೆ ಈಗ—"

ದೊಡ್ಡಮ್ಮ ಹೆಸರು ಬರೆದು ಸಹಿಹಾಕಿಸಿ ಕೊಳ್ಳದೆ ಇದ್ದಿದ್ದರೇ ಚೆನ್ನಾಗಿತ್ತೇನೊ ಎಂದು ತುಂಗಮ್ಮನಿಗೆ ಅನಿಸಿತು. ಹಾಗೆ ಮಾಡಿದ್ದರೆ, ಬೆಳಗಾದೊಡನೆಯೇ ಆ ಚಿಕ್ಕ ಹುಡುಗಿ ಮನೆಗೆ ಹೋಗುವುದು ಸಾಧ್ಯವಾಗುತಿತ್ತು.

"ಆ ಚಿಕ್ಕೋಳ್ನ ಬಿಡಿಸೋಕೆ ಆಗಲ್ವ ಜಲಜ?"

ಕ್ಷಣಕಾಲ ತಡೆದು ಜಲಜ ಹೇಳಿದಳು:

"ಒಂದು ಕೆಲಸ ಮಾಡೋಣ ತುಂಗಕ್ಕ ನಾಳೆ. ದೊಡ್ಡಮ್ನಿಗೆ ಹೇಳೋಣ. ಅವರೇನಾದರೂ ಆ ಹುಡುಗಿ ವಿಷಯ ಇನ್ಸ್‌ಪೆಕ್ಟರಿಗೆ ಒಂದು ರಿಪೋರ್ಟ್ನ ಬರಕೊಟ್ರೆ—"

"ಹಾಗೆ ಮಾಡೋಣವಮ್ಮ!"

ಆ ಹುಡುಗಿಯರಲ್ಲಿ ಒಬ್ಬಳನ್ನು - ಕಾವೇರಿಯನ್ನು - ಆಗಲೆ ತಾನು ಬಿಡುಗಡೆ ಮಾಡಿಸಿದಷ್ಟು ಸಂತೋಷವಾಯಿತು ತುಂಗಮ್ಮನಿಗೆ.

ಮತ್ತೆ ಸ್ವಲ್ಪ ಹೊತ್ತಿನಲ್ಲೆ ನಿದ್ದೆ ಬಂತು.

ದೊಡ್ಡಮ್ಮ ಬಾರಿಸಿದ ಗಂಟೆಯ ಬಡಿತಕ್ಕೆ ಎಚ್ಚರವಾಗಿ, ಇತರ ಹುಡುಗಿಯರೊಡನೆ ತುಂಗಮ್ಮ ಜಲಜೆಯರೂ ಎದ್ದರು.

ಇಂದಿನಿಂದ ತುಂಗಮ್ಮ ಅಭಯಧಾಮದಲ್ಲಿ ಅತಿಥಿಯಾಗಿರಲಿಲ್ಲ. ನಿವಾಸಿಗಳಲ್ಲಿ ಆಕೆಯೂ ಒಬ್ಬಳು; ತಂದೆಯ ಜತೆಯಲ್ಲಿ ಹೊರಟು ಹೋಗದೆ, ತಾನಾಗಿಯೇ ತನ್ನದಾಗಿ ಸ್ವೀಕರಿಸಿದ ಆ ವಿಚಿತ್ರ ಕುಟುಂಬದ ಒಬ್ಬ ಸದಸ್ಯೆ.

ಎದ್ದು ಕಣ್ಣು ತೆರೆದ ತುಂಗಮ್ಮನಿಗೆ, ಹಿಂದಿನ ರಾತ್ರೆ ಕೊಠಡಿಯಲ್ಲಿ ಕೂಡಹಾಕಿದ್ದ ಹುಡುಗಿಯರ ನೆನಪಾಯಿತು. ಆಕೆ ಬಾಗಿಲನ್ನು ಹಿಂದಕ್ಕೆ

ಸರಿಸಿ ನೋಡಿದಳು. ದೊಡ್ಡವಳು ಎದ್ದುಕುಳಿತಿದ್ದಳು ಆಗಲೆ. ಚಿಕ್ಕವಳಿಗೆ ಎಚ್ಚರವಾಗಿರಲಿಲ್ಲ.

ತಮ್ಮ ಕೊಠಡಿಯಿಂದ ಹೊರಬಿದ್ದು ದೊಡ್ಡಮ್ಮ ಅತ್ತಬಂದರು.

" ಅವರಿಗೇನು ಬೇಕೋ ನೋಡ್ಕೊಳ್ರೀ "

—ಎಂದರು, ಜಲಜೆಯನ್ನೂ ತುಂಗಮ್ಮನನ್ನೂ ಉದ್ದೇಶಿಸಿ. ತನಗೂ ಕೆಲಸ ಒಪ್ಪಿಸಿದರೆಂದು ತುಂಗಮ್ಮನಿಗೆ ಸಂತೋಷವಾಯಿತು.

ಸ್ವಲ್ಪ ಹೊತ್ತಾದಮೇಲೆ ದೊಡ್ಡವಳನ್ನು ಕರೆದುಕೊಂಡು ಜಲಜ ಬಚ್ಚಲು ಮನೆಗೆ ಹೋದಾಗ, ಚಿಕ್ಕವಳೊಡನೆ ತುಂಗಮ್ಮ ಮಾತನಾಡಿದಳು. ಏನು - ಎತ್ತ - ಎಂಬ ಹತ್ತು ಪ್ರಶ್ನೆಗಳಿಗೆ ಬಂದ ಉತ್ತರ ಒಂದೇ :

" ನಾನೇನೂ ತಪ್ಪು ಮಾಡಿಲ್ಲ. ನನ್ನ ಬಿಟ್ಬಿಡಿ. ಪೋಲೀಸಪ್ಪನ ಕೈಗೆ ಕೊಡ್ಬೇಡಿ!''

" ಮತ್ತೆ ಅವಳ ಜತೇಲಿ ಹ್ಯಾಗ್ಬಂದೆ ?"

ಉತ್ತರವಿಲ್ಲ.

" ಮಾತೇ ಆಡ್ದಿದ್ರೆ ಹ್ಯಾಗಮ್ಮ? ನಿಂಗೆ ಸಹಾಯ ಮಾಡ್ಬೇಕೊಂತ್ಲೇ ಅಲ್ವೆ ಇದನ್ನೆಲ್ಲಾ ಕೇಳೋದು ?''

ತುಂಗಮ್ಮನ ಮಾತಿನಲ್ಲಿ ನಂಬಿಕೆ ಇಡಲೆತ್ನಿಸುತ್ತಾ ಆ ಹುಡುಗಿ ನಡುಗುವ ಸ್ವರದಲ್ಲಿ ಅಂದಳು :

" ಇವಳು ನಮ್ಮನೇ ಪಕ್ಕದ್ಲೇ ಇರೋದು. ನಮ್ಜನವೂ ಇಲ್ಲ. ಶಿವಾಜಿ ಟಾಕೀಸಿಗೆ ಹೋಗಿ ಸಾಯಂಕಾಲ ಸಿನಿಮಾ ನೋಡ್ಕೊಂಡು ಬರೋಣಾಂತ ಕರದ್ಲು. ಸಿನಿಮಾ ಅಂದ್ರೆ ಇಷ್ಟ ನಂಗೆ. ಸ್ನೇಹಿತರ ಮನೆಗೆ ಹೋಗ್ಬರ್‍ತೀನಿ ಅಂತ ಹೇಳಿ, ಇವಳ್ಜತೇಲಿ ಬಂದೆ. ಸಿನಿಮಾ ಬಿಟ್ಬಿಟ್ಟ ನಾವು ಬರ್‍ತಿದ್ದಾಗ ಯಾವನೋ ಒಬ್ಬನ ಜತೆ ಜಾನಕಿ ಮಾತಾಡೋಕೆ ನಿಂತ್ಲು. ತಡವಾಗುತ್ತೆ, ಬಾ, ಅಂದರೂ ಕೇಳ್ಲಿಲ್ಲ....ಆಮೇಲೆ ಯಾವು ಯಾವುದೋ ಹಾದೀಲಿ ಹೋಗಿ, ಹಾದಿ ತಪ್ಪೋಯ್ತು ಅಂದ್ಲು.... ಆ ಮೇಲೆ—''

ಕಾವೇರಿ ಅತ್ತಳು.

" ಅಳಬೇಡ್ವೆ. ನಾನು ದೊಡ್ಡಮ್ಮಂಗೆ ಹೇಳ್ತೀನಿ. ನಿನ್ನ ಮನೆಗೆ ಕಳಿಸ್ಕೊಡೋಕೆ ಸಹಾಯ ಮಾಡ್ತಾರೆ.''

ದೊಡ್ಡಮ್ಮನ ಪ್ರಸ್ತಾಪವೂ ತುಂಗಮ್ಮನ ಆತ್ಮೀಯತೆಯ ಧ್ವನಿಯೂ ಕಾವೇರಿಯ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡಿದುವು. ಹಿಂದೆ, ಸರಸಮ್ಮ ಜಲಜೆಯ ದೊಡ್ಡಮ್ಮನೇ ಇರಬೇಕೆಂದು ತಾನು ಭಾವಿಸಿದ್ದ ಹಾಗೆ, ಈಗ ಈ ಹುಡುಗಿ, ಮೇಟ್ರನ್ ತನ್ನ ದೊಡ್ಡಮ್ಮನೆಂದು ಭಾವಿಸಿರ ಬಹುದೆಂದು ತುಂಗಮ್ಮ ಊಹಿಸಿಕೊಂಡು ಮನಸಿನಲ್ಲೆ ನಕ್ಕಳು.

"ಹ್ಯಾಗಾದರೂಮಾಡಿ ನನ್ನ ಬಿಡಿಸಿ. ನಿಮಗೆ ಈ ಬಳೆ ಕೊಡ್ತೀನಿ. ನಿಮಗೆ ಏನು ಬೇಕಾದರೂ ಕೊಡ್ತೀನಿ. ನೀವು ಹೇಳಿದ್ಹಾಗೆ ಕೇಳ್ತೀನಿ."

ತುಂಗಮ್ಮನಿಗೆ ನಗು ತಡೆಯಲಾಗಲಿಲ್ಲ.

"ಲಂಚ ಗಿಂಚ ಏನೂ ಕೊಡ್ಬೇಕಾದ್ದಿಲ್ಲವಮ್ಮ ನೀನು!"

ಕಾವೇರಿಗೆ, ತಾನು ಹಾಗೆ ಹೇಳಿದುದು ತಪ್ಪಾಯಿತೆಂದು ಮನವರಿಕೆ ಯಾಯಿತು.

ಸುಲಭವಾಗಿ ಆ ಹುಡುಗಿಯ ವಿಶ್ವಾಸಕ್ಕೆ ಪಾತ್ರಳಾದ ತುಂಗಮ್ಮ ಮತ್ತೊಂದು ಪ್ರಶ್ನೆ ಕೇಳಿದಳು:

"ನೀವು ಯಾರ್‍ಯಾರಿದೀರಾ ಮನೇಲಿ"?

"ನಮ್ಮುಂಡೆ - ತಾಯಿ, ಅಕ್ಕ - ಅಣ್ಣ, ಇಬ್ಬರು ತಮ್ಮಂದಿರು. ಮುಂದಿನ ತಿಂಗಳು ನಮ್ಮಕ್ಕನಿಗೆ ಮದುವೆ ಬೇರೆ ಗೊತ್ತಾಗಿದೆ."

ಆ ಮಾತಿನ ಜತೆಯಲ್ಲೆ ಅಳು....

ತುಂಗಮ್ಮ ನಿಟ್ಟುಸಿರು ಬಿಟ್ಟು, ಸರಸಮ್ಮನ ಕೊಠಡಿಗೆ ನಡೆದಳು. ಜಲಜೆ ಬರುವವರೆಗೆ ಕಾಯುವುದಕ್ಕೂ ಆಕೆ ಸಿದ್ಧಳಿರಲಿಲ್ಲ.

ತುಂಗಮ್ಮನ ಮಾತಿಗೆ ಕಿವಿಗೊಟ್ಟ ಬಳಿಕ ಸರಸಮ್ಮ ಮೃದುವಾಗಿ ಹೇಳಿದರು:

"ನನಗೂ ಹಾಗೆ ತೋರಿತ್ತು ತುಂಗ. ಏನಾದರೂ ಮಾಡೋಣ. ಇಷ್ಟು ಹೊತ್ತಿಗಾಗಲೇ ಆ ಹುಡುಗಿ ತಂದೆ ಪೋಲೀಸರಿಗೆ ದೂರು ಕೊಟ್ಟಿರ್‍ತಾರೆ."

"ತಂದೆಗೆ ತಿಳೀದ ಹಾಗೇನೆ ಆಕೆ ಮನೆಗೆ ಹೋಗೋಕೆ ಆಗಲ್ವೆ ದೊಡ್ಡಮ್ಮ?"

ಆ ಪ್ರಶ್ನೆ ಸರಸಮ್ಮನಿಗೆ ಹಿಡಿಸಲಿಲ್ಲ.

" ಬೇಡ ತುಂಗ. ಅದು ಸರಿಯಲ್ಲ. ಹಾಗೆ ಮಾಡ್ಬಾರ್ದು. ತಂದೇನೆ ಮಗಳ್ನ ಕರಕೊಂಡು ಹೋಗ್ಲಿ. ಏನಂತೀಯಾ ?''

ತನ್ನ ಯೋಚನೆ ಸರಿಯಾದುದಲ್ಲವೆಂದು ತುಂಗಮ್ಮನಿಗೆ ಆಗಲೆ ಹೊಳೆದು ಹೋಗಿತ್ತು.

" ಹೌದು ದೊಡ್ಡಮ್ಮ. ನೀವು ಹೇಳೋದು ನಿಜ."

" ಪೋಲೀಸ್ ಇನ್ಸ್ಪೆಕ್ಟರಿಗೆ ಕಾಗದ ಬರೀತೀನಿ. ಅಭಯಧಾಮದ ಮುದ್ರೆ ಒತ್ತಿಕೊಡೋಣ. ಪೋಲೀಸಿನವನೇ ತಗೊಂಡು ಹೋಗ್ತಾನೆ."

ಸರಸಮ್ಮ ಮಾತು ಮುಗಿಸಿದ್ದರೋ ಇಲ್ಲವೋ ಅಷ್ಟರಲ್ಲೇ ಜಲಜ ಓಡಿಬಂದಳು.

"ದೊಡ್ಡಮ್ಮ!....ಜಗಳಾಡ್ತಿದಾರೆ! ಜನವರೀಲಿ ತಮಿಳು ಹುಡುಗೀರು ಇಬ್ಬರು ಬರ್ಲಿಲ್ವ? ಅವರಿಗೆ ಆ ದೊಡ್ಡವಳು ಗೊತ್ತಂತೆ ಅವಳ ಮೈಮೇಲೆ ಬಿದ್ದು ಇಬ್ಬರೂನೂ ಕಿತ್ತು ಬಡೀತಿದಾರೆ !"

ಸರಸಮ್ಮ, ತುಂಗಮ್ಮ ಜಲಜೆಯರೊಡನೆ ಹೊರಕ್ಕೋಡಿದರು.

ತಮ್ಮ ಜೀವನವನ್ನು ಮಣ್ಣುಗೂಡಿಸಿದವಳೆಂಬುದೇ ದೊಡ್ಡವಳ— ಜಾನಕಿಯ - ಮೇಲೆ ಆ ತಮಿಳು ಹುಡುಗಿಯರಿಗೆ ಇದ್ದ ಸಿಟ್ಟು. ಅಭಯ ಧಾಮದ ಹುಡುಗಿಯರೆಲ್ಲ ನಿಂತಲ್ಲೆ ನಿಂತು ಈ ನಾಟಕ ನೋಡುತಿದ್ದರು.

ಹೆಚ್ಚು ಕಷ್ಟವಿಲ್ಲದೆ ಸರಸಮ್ಮ, ಆ ಜಗಳ ನಿಲ್ಲಿಸಿದರು. ಹುಡುಗಿಯ ರನ್ನೆಲ್ಲ ಸಾಮೂಹಿಕವಾಗಿ ಬಯ್ದು, ಅವರೆಲ್ಲ ತಮ್ಮ ಕೆಲಸಗಳಿಗೆ ಮನಸ್ಸು ಕೊಡುವಂತೆ ಮಾಡಿದರು.

ಒಂಭತ್ತು ಘಂಟೆಗೆ ಆ ಪೋಲೀಸಿನವನು ಬಂದ ಆತ ಒರಟು ಮಾತುಗಳನ್ನು ಆಡಲಿಲ್ಲವಾದರೂ ಸರಸಮ್ಮನ ಬಗೆಗೆ ಆತನಿಗಿದ್ದ ದ್ವೇಷ ಮುಖಭಾವದಿಂದಲೆ ಸ್ಪಷ್ಟವಾಗುತಿತ್ತು.

ಆತ, ಸರಸಮ್ಮ ಕೊಟ್ಟ ಕಾಗದವನ್ನು ತೆಗೆದುಕೊಂಡ.

" ಇದು ನನ್ನಮೇಲೆ ಕಂಪ್ಲೇಂಟೊ ? "

" ನಿಮ್ಮ ಮೇಲೆ ಯಾಕಪ್ಪ ಕಂಪ್ಲೇಂಟು? ಈ ಹುಡುಗಿಯರ ವಿಷಯ ಬರೆದಿದೀನಿ."

" ಏನೂಂತ ?''

“ ಪ್ರತಿಸಾರಿಯೂ ಇಂಥ ಹುಡುಗೀರ ವಿಷಯ ಇನ್‌ಸ್ಪೆಕ್ಟರಿಗೆ ವರದಿ ಕೊಡ್ಬೇಕೊಂತ ಡಿ. ಎಸ್. ಪಿ. ಸಾಹೇಬರು ಹೇಳಿದ್ದಾರೆ.”

ಮತ್ತೆ ಡಿ. ಎಸ್. ಪಿ. ಸಾಹೇಬರು!.... ಪೋಲೀಸಿನವನು ಸುಮ್ಮನಾದ.

“ ಸ್ಟೇಷನಿಂದ ಬಂದು ಅಲ್ಲಿ ಏನಾಯ್ತೂಂತ ತಿಳಿಸ್ತೀರಾ ?”

ಆತ ಹೂಂ ಎನ್ನಲಿಲ್ಲ. ಲಾಳಹೊಡೆದಿದ್ದ ಬೂಟುಗಳಿಂದ ಅಸಹನೀಯವಾದ ಸಪ್ಪಳಮಾಡುತ್ತ ಹುಡುಗಿಯರೊಡನೆ ಹೊರಟುಹೋದ.

ಪೋಲೀಸಿನವನು ಬಂದು ಏನನ್ನೂ ಹೇಳಲಿಲ್ಲ.

ಸರಸಮ್ಮನೇ ಸ್ಟೇಶನಿಗೆ ಹೋಗಿ ವಿಚಾರಿಸಿಕೊಂಡು ಬಂದರು. ಕಾವೇರಿಯ ತಂದೆ, ಮಗಳನ್ನು ಕರೆದುಕೊಂಡು ಹೋಗಿದ್ದರು ಜಾನಕಿಯನ್ನೂ ಎಚ್ಚರಿಕೆಯ ಮಾತುಗಳನ್ನಾಡಿದಮೇಲೆ ಬಿಟ್ಟು ಬಿಡಲಾಗಿತ್ತು.

ತುಂಗಮ್ಮನಿಗೆ ಇದನ್ನು ಕೇಳಿ ಸಂತೋಷವಾಯಿತು.

ಜಲಜ ಬಂದು ಮಾತೆಂದಳು :

“ ಅವರು ಆ ಜಾನಕೀನ ಇಲ್ಲಿಗೆ ಕಳಿಸಿ ಕೊಡಲಿಲ್ಲವಲ್ಲ ! ನಮ್ಮ ಪುಣ್ಯ !”

## ೧೪

ಒಂದು ಸಂಜೆ ಸಮಿತಿಯ ಸಭೆಯಿಂದ ಹಿಂತಿರುಗಿದ ಸರಸಮ್ಮ ಎಂದಿಗಿಂತಲೂ ಹೆಚ್ಚು ಹಸನ್ಮುಖಿಯಾಗಿದ್ದರು. ಹೊರಟಿದ್ದಾಗಲೆ ಹೇಳಿದ್ದರಾಕೆ, ಆ ದಿನ ಸಮಿತಿಯ ಸಭೆಯಲ್ಲಿ ತುಂಗಮ್ಮನ ವಿಷಯ ಚರ್ಚೆಯಾಗುವುದೆಂದು. ಆ ಕಾರಣದಿಂದ, ಸರಸಮ್ಮ ಬರುವುದನ್ನೆ ಇದಿರು ನೋಡುತಿದ್ದಳು ತುಂಗಮ್ಮ. ಅವರು ಬಂದಾಗ, ಆ ಮುಖವನ್ನು ನೋಡುತ್ತಲೆ, ಸಮಿತಿಯ ಇತ್ಯರ್ಥ ಏನಿರಬಹುದೆಂದು ಊಹಿಸುವುದು ತುಂಗಮ್ಮನಿಗೆ ಕಷ್ಟವಾಗಲಿಲ್ಲ. ಆದರೂ ಪರೀಕ್ಷೆಯ ಫಲಿತಾಂಶ ತಿಳಿಯಲು ನಿಂತಿದ್ದ ಜಾಣೆಯಾದ ವಿದ್ಯಾರ್ಥಿನಿಯ ಹಾಗೆ ಆಕೆ, ತನ್ನ ದೊಡ್ಡಮ್ಮನನ್ನು ಇದಿರ್ಗೊಂಡಳು.

ಆದರೆ, ಅವರಿಬ್ಬರಲ್ಲಿ ಯಾರು ಮಾತನಾಡುವುದಕ್ಕೂ ಅವಕಾಶ ಕೊಡದೆ, ಜಲಜ ಕೇಳಿದಳು :

"ಏನು ತೀರ್ಮಾನವಾಯ್ತು ದೊಡ್ಡಮ್ಮ ?"

ಸರಸಮ್ಮ ಒಮ್ಮೆಲೆ ಮುಖ ಬಾಡಿಸಿ ವಿಷಾದದಿಂದ ತಲೆಯಾಡಿಸಿದರು.

"ತುಂಗ ಇನ್ನು ಇಲ್ಲಿ ಇರಕೂಡದಂತೆ."

ತುಂಗಮ್ಮನ ಎದೆ ಧಸಕ್ಕೆಂದಿತು. ಜಲಜ ಆಕ್ರೋಶಮಾಡಲು ಸಿದ್ಧಳಾಗಿ ಏರಿಸಿದ ಸ್ವರದಲ್ಲಿ ಅಂದಳು :

"ಸುಳ್ಳು ! ದೊಡ್ಡಮ್ಮ, ಸುಳ್ಳು ಹೇಳ್ತಿದೀರಿ ನೀವು !"

ಸರಸಮ್ಮ ನಕ್ಕರು.

"ಅಷ್ಟು ಗೊತ್ತಿದ್ದೋಳು ಮತ್ಯಾಕೆ ಕೇಳ್ದೆ—ಏನು ತೀರ್ಮಾನ ಅಂತ ?"

ದೊಡ್ಡಮ್ಮನ ನಗು ಸಮಾಧಾನಗೊಳಿಸಿದರೂ ತುಂಗಮ್ಮ ಕೇಳಿದಳು :

"ಅಲ್ಲಿ ಏನು ಹೇಳಿದ್ರು ದೊಡ್ಡಮ್ಮ?"

"ಒಪ್ಪಿಗೆ ಅಂದ್ರು."

"ಓ!"

ಓ—ಎಂದವರು ಇಬ್ಬರು; ತುಂಗಮ್ಮ ಮತ್ತು ಜಲಜ. ಆ ಗೆಳತಿಯರು ಸಂತೋಷದಿಂದ ಪರಸ್ಪರರನ್ನು ನೋಡಿದರು.

"ನೀನು ಮಾಡಬೇಕಾದ ಕೆಲಸ ಯಾವುದು ಗೊತ್ತೆ ತುಂಗ? ಏನೇನೂ ಓದು ಬರದೇ ಇರೋರಿಗೆ ಅಕ್ಷರಾಭ್ಯಾಸ ಮಾಡಿಸ್ಬೇಕು; ಆಫೀಸು ನೋಡ್ಕೋಬೇಕು; ಲೆಕ್ಕಪತ್ರ ಇಟ್ಕೋಬೇಕು. ಚುಟುಕಾಗಿ ಹೇಳೋದಾದರೆ ನೀನು ಅಧ್ಯಾಪಿಕೆ, ಗುಮಾಸ್ತೆ ಮತ್ತು ನನ್ನ ಸಹಾಯಿಕೆ! ಏನಂತೀಯಾ?"

ತನ್ನ ಕಿವಿಗಳನ್ನು ತುಂಗಮ್ಮ ನಂಬಲಾರದೆ ಹೋದಳು.

"ಇಷ್ಟೂ ನಿಮ್ಮ ದಯದಿಂದ ದೊಡ್ಡಮ್ಮ."

"ಹಾಗೆಲ್ಲ ಹೇಳ್ಬಾರ್ದು ತುಂಗ."

"ನಾನೂ ಒಂದು ಮಾತು ಆಡ್ಬಹುದೊ?"

—ಎಂದಳು ಜಲಜ ನಡುವೆ ಬಾಯಿ ಹಾಕಿ. ಆ ಸ್ವರ ಎಂದಿನಂತಿರಲಿಲ್ಲ. ಸರಸಮ್ಮನೆಂದರು:

"ಏನು, ಹೇಳು."

"ಇವತ್ತೇ ಆಖ್ಖೈರಿ. ತುಂಗಕ್ಕ ಇನ್ನು ನನ್ಜತೇಲಿ ಮಲಗ್ಬಾರ್ದು."

"ಯಾಕಂತೀಯಾ ಹಾಗೆ?"

—ಎಂದಳು ತುಂಗಮ್ಮ ಹಾಗನ್ನ ಬೇಡವೆಂದು ಅಂಗಲಾಚುವ ಧ್ವನಿಯಲ್ಲಿ.

"ಅಲ್ವೆ ಮತ್ತೆ? ತುಂಗಕ್ಕ ಇನ್ನು ಮೇಷ್ಟ್ರು. ನಮ್ಜತೇಲಿ ಇರೋಕಾಗುತ್ತಾ?"

ಆ ಧ್ವನಿಯ ನೋವಿಗೆ ಕಾರಣ ಹುಡುಕಿದರು ಸರಸಮ್ಮ. ಹಳಬಳಾದ ತನಗೆ ದೊರೆಯದ ಸ್ಥಾನಮಾನ ಹೊಸಬಳಾದ ತುಂಗಮ್ಮನಿಗೆ ದೊರೆಯಿತೆಂದು ಜಲಜ ಮತ್ಸರಪಡುತ್ತಿರಬಹುದೆ? ಅಂತಹ ಭಾವನೆ ಜಲಜೆಯ ಮನಸಿನಲ್ಲಿ ಸುಳಿದ್ದುದೇನೊ ನಿಜ. ಆದರೆ ಅದು, ಆ ಶಿಳ

ಯಾದ ಮನಸಿನಲ್ಲಿ ನೆಲೆಗೊಳ್ಳಲು ತಾಣವಿಲ್ಲದೆ ತೇಲಿ ಹೋಗಿತ್ತು. ಅಲ್ಲಿದ್ದು ದೊಂದೇ—ತಮ್ಮಿಬ್ಬರ ಗೆಳೆತನದ ನಡುವೆ ತುಂಗಮ್ಮನ ಈ ಹೊಸ ಹುದ್ದೆ ಅಡ್ಡಗೋಡೆಯಾಗುವುದಲ್ಲಾ ಎಂಬ ದುಃಖ. ಅದೇ ಆ ಹುಡುಗಿಯನ್ನು ಕೊರೆಯುತಿದ್ದ ವ್ಯಥೆ ಎಂಬುದನ್ನು ಸರಸಮ್ಮ ಸುಲಭವಾಗಿ ಗೊತ್ತು ಮಾಡಿದರು.

ಹಾಗಿದ್ದರೆ, ಜಲಜೆಯ ಮಾತಿನಲ್ಲಿ ಸತ್ಯಾಂಶವಿತ್ತು.

"ತುಂಗಾ, ಅದೂ ಯೋಚಿಸ್ಬೇಕಾದ್ದೇ ನೋಡು. ನಿಂಗೆ ಮಲ ಗೋಕೆ ಆಫೀಸು ಕೊಠಡಿ ಇದೆ. ಬಟ್ಟೆ ಬರೆ ಹಾಸಿಗೆ ಏನು ಬೇಕಾದ್ರೂ ನೀನು ಕೊಂಡ್ಕೋಬಹುದು."

"ಹೇಳ್ಲಿಲ್ವಾ ನಾನು ?"

—ಎಂದು ಅಣಕಿಸಿ, ಜಲಜ ಕೇಳಿದಳು:

"ಸಮಿತಿಯೋರು ಸಂಬಳ ಎಷ್ಟು ಕೊಡ್ತಾರಮ್ಮ ನಮ್ಮ ಮೇಡಂಗೆ ?"

ತುಂಗಮ್ಮನಿಗೂ ಆ ವಿಷಯವನ್ನು ತಿಳಿಯುವ ಆತುರ. ಜತೆಯಲ್ಲೆ, ಜಲಜ ತನ್ನನ್ನು ಮೇಡಂ ಎಂದು ಕರೆದಳೆಂದು ಲಜ್ಜೆ—ಕೋಪ.

"ಆರು ತಿಂಗಳವರೆಗೆ ಮೂವತ್ತೈದು ಕೊಡ್ತಾರೆ. ಆ ಮೇಲೆ ನಾಲ್ವತ್ತು. ಊಟ-ವಸತಿಗೇಂತ ತುಂಗ ಏನೂ ಕೊಡಬೇಕಾದ್ದಿಲ್ಲ."

ಅಷ್ಟನ್ನು ಆ ಹುಡುಗಿಯರು ನಿರೀಕ್ಷಿಸಿಯೇ ಇರಲಿಲ್ಲ.

"ಇನ್ನು ಈ ಬಡ ಜಲಜೇನ ತುಂಗಕ್ಕ ಜ್ಞಾಪಿಸ್ಕೋತಾಳೋ ಇಲ್ವೋ ?"

"ಸಾಕು, ಸಾಕೇ !"

"ಅಲ್ಲ ದೊಡ್ಡಮ್ಮ. ಇನ್ನು ಈ ತುಂಗಕ್ಕನ್ನ ನಾನು ಅವರು ಇವರೂಂತ ಕರೀಬೇಕು, ಅಲ್ವಾ ?"

"ನೋಡಿ ದೊಡ್ಡಮ್ಮ, ಎಷ್ಟೊಂದು ಪೀಡಿಸ್ತಾಳೆ ನನ್ನ."

ಸರಸಮ್ಮ ನಕ್ಕು, ಹುಡುಗಿಯರನ್ನು ಅವರಷ್ಟಕ್ಕೆ ಬಿಟ್ಟು, ಕೊಠಡಿ ಯೊಳಕ್ಕೆ ಹೋದರು. ಸೀರೆ ಬದಲಿಸಿ, ಅವರು ಸಾದಾ ಸೀರೆಯುಟ್ಟು ಕೊಂಡರು. ಮೂಲೆಯಲ್ಲಿ ತೂಗುತಿದ್ದ ಪುಟ್ಟ ಕನ್ನಡಿಯಲ್ಲಿ ಮುಖ ನೋಡಿದರು. ಅವರ ಪಾಲಿಗೆ ಆ ದಿನ ಮಹತ್ವಪೂರ್ಣವಾಗಿತ್ತು.

ಸಹಾಯಿಕೆಯೊಬ್ಬರು ಬೇಕೆಂದು ಬಹಳ ದಿನಗಳಿಂದ ಅವರು ಒತ್ತಾಯಿಸು ತಿದ್ದ ಕೇಳಿಕೆ ಅಂತೂ ಕೊನೆಗೊಮ್ಮೆ ಮಾನ್ಯವಾಯಿತು. ಅದೂ ಕೂಡಾ, ಎಂತಹ ಸಹಾಯಿಕೆ ದೊರೆತಿದ್ದಳು—ಎಂದೋ ಮಾಡಿದ್ದ ಪುಣ್ಯ ಕೆಲಸದ ಫಲವೇ ಎನ್ನುವ ಹಾಗೆ!

ತಮಗೆ ನೆರವು ದೊರೆಯಿತೆಂಬ ಸ್ವಾರ್ಥದ ಆ ಅಂಶಕ್ಕಿಂತಲೂ ಹೆಚ್ಚಾಗಿ, ತಾವು ನಂಬಿಕೆ ಇರಿಸಿದ್ದ ಪ್ರೀತಿಸಿದ್ದ ಹುಡುಗಿಯೊಬ್ಬಳ ಬದುಕು ಇನ್ನು ಸುಗಮವಾಗುವುದೆಂಬ ಅಂಶ ಅವರನ್ನು ಸಂತೋಷ ಗೊಳಿಸಿತ್ತು.

ಹೊರಗೆ ಜಲಜ ಸುಮ್ಮನಿರಲಿಲ್ಲ. ಕಟ್ಟಡದ ನಾಲ್ಕು ಮೂಲೆಗ ಳಿಗೂ ಆಕೆ ನೆಗೆದು ಹೋಗಿ ಆ ಸುದ್ದಿ ತಿಳಿಸಿದಳು. ಸಂತೋಷಪಟ್ಟ ಹುಡುಗಿಯರು ಕೆಲವರು; ಮುಖಸಿಂಡರಿಸಿಕೊಂಡವರು ಕೆಲವರು.... ಜಲಜ ಆಸರೆ ಕೊಡದೇ ಹೋದ ಮತ್ಸರ, ಬೇರೆ ಬೇರೆ ಹೃದಯಗಳಲ್ಲಿ ವಿಧವಿಧವಾಗಿ ಹೆಡೆಯಾಡಿಸಿತು.

"ಘಾಟಿ! ದೊಡ್ಡಮ್ಮನ್ನ ಬಲೆಗೆ ಹಾಕ್ಕೊಂಡ್ಬಿಟ್ಲು."

"ಚಾಲಾಕಿ. ಹೊರಗೇ ಇದ್ದು ಚೆನ್ನಾಗಿ ವ್ಯಾಪಾರ ನಡೆಸೋದು ಬಿಟ್ಬಿಟ್ಟು—"

"ಇನ್ನು ಇವಳ್ಕೈಲಿ ಪಾಠ ಬೇರೆ ಹೇಳಿಸ್ಕೋ ಬೇಕೊ?"

ಆ ವಾರ್ತೆಯಿಂದ ಆನಂದಿತರಾದವರಿಗೂ ಕಡಿಮೆ ಇರಲಿಲ್ಲ.

"ತುಂಗಮ್ಮ ಒಳ್ಳೆಯವಳಮ್ಮ-ನಿಜವಾಗ಼್ೂ."

"ಆ ರಾಜಮ್ಮನಂಥ ಮುಡ್ಡಮ್ಮಗಳ್ನ ಕರೆಸ್ಕೊಳ್ದೆ, ತುಂಗಮ್ಮನ್ನೇ ನೇಮಿಸ್ಕೊಂಡು ಒಳ್ಳೇ ಕೆಲಸ ಮಾಡಿದ್ರು."

ಈ ನೇಮಕ ತಮಾಷೆಯಾಗಿಯೂ ತೋರಿತು ಕೆಲವರಿಗೆ.

"ಅಂತೂ ಇನ್ನು ತುಂಗಮ್ಮನ್ನ ಮೇಡಂ ಅಂತ ಕೂಗ್ಬೇಕು."

"ವಯಸ್ನಲ್ಲಿ ನನಗಿಂತ್ಲೂ ಆಕೆ ಒಂದು ವರ್ಷ ಚಿಕ್ಕೋಳು ಕಣೇ!"

ಸಮಿತಿಯ ತೀರ್ಮಾನದ ವಿಷಯದಲ್ಲಿ ಅಭಯಧಾಮದ ಹುಡುಗಿಯ ರಲ್ಲೆಲ್ಲ ಏಕಾಭಿಪ್ರಾಯವಿಲ್ಲದೆ ಇದ್ದುದನ್ನು ತುಂಗಮ್ಮ ಗಮನಿಸದಿರಲಿಲ್ಲ. ಅದನ್ನು ಕಂಡು ಆಕೆಗೆ ಸ್ವಲ್ಪ ಕಸಿವಿಸಿಯಾಯಿತು.

ರಾತ್ರೆ ಎಲ್ಲರೂ ಊಟಕ್ಕೆ ಕುಳಿತಾಗ ಹುಡುಗಿಯರನ್ನೆಲ್ಲ ಉದ್ದೇಶಿಸಿ ಸರಸಮ್ಮನೇ ಮಾತನಾಡಬೇಕಾಯಿತು

"ಅದೇನೊ ವಿಷಯ ಇದೆಯಂತಲ್ಲ-ಸ್ವಲ್ಪ ಹೇಳೀಂತ, ಒಬ್ಬಿಬ್ರು ಹುಡುಗೀರು ಕೇಳಿದಾರೆ."

"ಹೇಳಿ ದೊಡ್ಡಮ್ಮ"

—ಎಂಬ ಉತ್ತರ ಬಂತು ಹಲವು ಕಂಠಗಳಿಂದ.

"ನಾಳೆಯಿಂದ ತುಂಗಮ್ಮ ಮೊದಲನೇ ತರಗತಿ ಹುಡುಗೀರಿಗೆ ಪಾಠ ಹೇಳ್ಕೊಡ್ಬೇಕೂಂತ ಸಮಿತಿಯೋರು ತೀರ್ಮಾನಿಸಿದ್ದಾರೆ."

"ಸಂತೋಷ!"

—ಎಂದಿತೊಂದು ವ್ಯಂಗ್ಯ ಮಿಶ್ರಿತ ಸ್ವರ. ಆದರೆ ಉಳಿದ ಹುಡುಗಿಯರಲ್ಲಿ ಹೆಚ್ಚಿನವರು ನಿಜವಾದ ಸಂತೋಷದಿಂದಲೆ ಚಪ್ಪಾಳೆ ತಟ್ಟಿದರು.

"ಅಷ್ಟೇ ಅಲ್ಲ. ಆಫೀಸು ಕೆಲಸದಲ್ಲಿ ತುಂಗಮ್ಮ ನನಗೆ ಸಹಾಯ ಮಾಡ್ಬೇಕೂಂತಲೂ ಹೇಳಿದ್ದಾರೆ."

ಅಪಸ್ವರವಿತ್ತಾದರೂ ಅದು ಕೇಳಿಸದ ಹಾಗೆ ಮತ್ತೊಮ್ಮೆ ಕೈ ಚಪ್ಪಾಳೆಯಾಯಿತು.

ಮಾತು ಬಾರದ ಕಲ್ಯಾಣಿಯೂ ಅರ್ಥಮಾಡಿಕೊಂಡು, ತುಂಗಮ್ಮನ ಹತ್ತಿರ ಬಂದು, 'ನನಗೆ ಮೊದಲೇ ಗೊತ್ತಿತ್ತು ಹೀಗೆ ಆಗುತ್ತೇಂತ' ಎನ್ನುವ ಹಾಗೆ ಸದ್ದು ಮಾಡಿದಳು.

ಕುರುಡಿ ಸುಂದ್ರಾ, ಕುಳಿತಲ್ಲಿಂದಲೆ ಹಿಗ್ಗಿನಿಂದ ಮುಖ ಅಗಲಿಸಿ ಕೊಂಡಳು. ಆಗ, ಸಿಡುಬಿನ ಕಲೆಗಳಿಂದ ಆಗಿದ್ದ ಗುಳಿಗಳಲ್ಲಿ ರಕ್ತ ತುಂಬಿ, ಮುಖ ಮತ್ತಷ್ಟು ವಿಕಾರವಾಯಿತು.

ಯಾರೋ ಕೇಳಿದರು :

"ತುಂಗಮ್ಮ ಸಕ್ಕರೆ ಹಂಚ್ಬೇಕು."

ತುಂಗಮ್ಮ ಕೂಸು ಹೆತ್ತಿದ್ದರೆ ಆಗಲೆ ಅವರು ಸಕ್ಕರೆ ಕೇಳಿಯೆ ಕೇಳು ತಿದ್ದರು. ಅದಕ್ಕೆ ಆಸ್ಪದ ದೊರೆತಿರಲಿಲ್ಲ. ಆ ಬಳಿಕ ಈಗಿನದೇ ತಕ್ಕ ಸಂದರ್ಭವಾಗಿತ್ತು.

ನಾಚಿಕೆಯಿಂದ ಮುದುಡಿ ಕುಳಿತ ತುಂಗಮ್ಮನ ಪರವಾಗಿ ಸರಸಮ್ಮನೇ ಉತ್ತರಕೊಟ್ಟರು.

"ಅದಕ್ಕೇನಂತೆ? ಒಂದು ತಿಂಗಳಾಗ್ಲಿ. ಸಂಬಳ ಬಂದ ದಿನ ಹಬ್ಬದೂಟವೇ ಮಾಡಿಸ್ತಾಳೆ."

ಆ ಕ್ಷಣ, ನಗೆದಿಂಗಳ ಬೆಳಕಿನಲ್ಲಿ ವಾತಾವರಣವೆಲ್ಲ ಶುಭ್ರವಾಯಿತು.

ಊಟವಾದ ಮೇಲೆ ದೊಡ್ಡಮ್ಮ, ತುಂಗಮ್ಮನನ್ನು ತಮ್ಮ ಕೊಠಡಿಗೆ ಕರೆದರು.

"ಬಾ ತುಂಗ"

—ಎಂದು, ತಮ್ಮ ಮಂಚದತ್ತ ಬೊಟ್ಟು ಮಾಡಿದರು. ತುಂಗಮ್ಮ ಕುಳಿತುಕೊಂಡಳು.

"ಇನ್ನು ನಾನು ಗೌರವ ತೋರಿಸಿ ಬಹುವಚನದಲ್ಲೇ ಮಾತನಾಡ್ಬೇಕು ಕಣೇ ನಿನ್ನ."

"ದಯವಿಟ್ಟು ಅದೊಂದು ಕೆಲಸ ಮಾಡ್ಬೇಡಿ ದೊಡ್ಡಮ್ಮ. ಈವರೆಗೆ ಹ್ಯಾಗೆ ಪ್ರೀತಿಯಿಂದ ಕರೀತಿದ್ರೊ ಹಾಗೇ ಕರೀರಿ ಮುಂದೇನೂ. ನಂಗೆ ಗೌರವ ಬೇಡ, ಪ್ರೀತಿ ಸಾಕು."

ಎಂದಾದರೊಮ್ಮೆ, ಅಭಯಧಾಮದಲ್ಲಿ ಅಪ್ರಿಯವಾದುದು ಏನಾದರೂ ನಡೆದಾಗ, ಸರಸಮ್ಮನಿಗೆ ಮನೋವ್ಯಥೆಯಿಂದ ಬದುಕೇ ಬೇಸರವೆನಿಸುತಿತ್ತು. ಈ ಪ್ರಪಂಚದಲ್ಲಿ ತಾನು ಒಬ್ಬಂಟಿಗಳು ಎಂಬ ಭಾವನೆ ಬರುತಿತ್ತು. ಇನ್ನು ಎಂದಿಗೂ ಹಾಗಾಗಲಾರದು ಎಂದುಕೊಂಡರು ಸರಸಮ್ಮ. ತುಂಗಮ್ಮನಂತಹ ತಿಳಿವಳಿಕೆಯ ಜೀವ ತಮ್ಮ ಬಳಿಯಲ್ಲಿದ್ದಷ್ಟು ಕಾಲವೂ ತಾವು ಬಲಶಾಲಿಯಾಗಿಯೆ ಇರುವೆನೆಂದು ಅವರಿಗೆ ಅನಿಸಿತು. ಬಳಲಿದ್ದ ಅವರ ಬಾಹುಗಳಲ್ಲಿ ಹೊಸ ಚೇತನದ ಸಂಚಾರವಾಯಿತು. ಮತ್ತೆ ತಾನು ಯುವತಿಯಾದ ಹಾಗೆ ಅವರಿಗೆ ಭಾಸವಾಯಿತು.

"ನನಗೆ ಇವತ್ತು ತುಂಬಾ ಸಂತೋಷವಾಗಿದೆ ತುಂಗ."

ತುಂಗಮ್ಮನಿಗೂ ಸಂತೋಷವಾಗಿತ್ತು—ಮಾತು ಕೂಡ ಆಡಲಾಗದಷ್ಟು ಸಂತೋಷವಾಗಿತ್ತು.

"ಎಷ್ಟೋ ವೇಳೆ ನನಗೆ ನಿರಾಸೆಯಾಗ್ತಿತ್ತು ತುಂಗ. ಈ ಅಭಯ

ಧಾಮದಿಂದ ಏನೂ ಪ್ರಯೋಜನವಾಗೊಲ್ಲ ಅನಿಸ್ತಿತ್ತು. ಆದರೆ ಆಗಾಗ್ಗೆ ಒಳ್ಳೇ ಹುಡುಗೀರ್ನ ನಾನು ನೋಡೋದ್ರಿಂದಾನೇ ಇನ್ನೂ ಇಲ್ಲೇ ಇದೀನಿ...."

"ಹೌದು ದೊಡ್ಡಮ್ಮ. ನಂಗೂ ಈಗ ಅರ್ಥವಾಗ್ತಿದೆ. ಜಲಜ-ಲಲಿತೆಯರಂಥ ಒಳ್ಳೇ ಹುಡುಗೀರು ಇಲ್ದೇ ಇದ್ರೆ, ಇವರ್ನೆಲ್ಲ ಸುಧಾರಿಸ್ಕೊಂಡು ಹೋಗೋದು ಬಲುಕಷ್ಟ."

ಉತ್ತರವಾಗಿ ಅನುಭವದ ಆಳದಿಂದ ಕೆಲವು ಮಾತುಗಳು ಬಂದುವು.

"ಜಲಜಾ, ಲಲಿತಾ, ನಾನು, ನೀನು-ಪರಿಪೂರ್ಣರು ಯಾರೂ ಇಲ್ಲ ತುಂಗ. ಸಣ್ಣದಾಗಲಿ ದೊಡ್ಡದಾಗಲಿ ತಪ್ಪು ಮಾಡ್ದೇ ಇರೋರು ಇಲ್ಲವೇ ಇಲ್ಲ. ತಪ್ಪು ಮಾಡೋದು ಮನುಷ್ಯನ ಸ್ವಭಾವ. ತಪ್ಪು ಮಾಡಿದ್ಮೇಲೆ ಅದನ್ನು ತಿದ್ದಿಕೋಬೇಕಾದ್ದು ಮನುಷ್ಯನ ಕರ್ತವ್ಯ. ಕೆಟ್ಟವರೂಂತ ನಾವು ಭಾವಿಸೋವರಲ್ಲೂ ಒಳ್ಳೆತನ ಇರ್‍ತದೆ. ಒಳ್ಳೆಯವರೂಂತ ನಾವು ತಿಳಕೊಂಡವರಲ್ಲೂ ಕೆಟ್ಟತನ ಇರ್‍ತದೆ. ಇಲ್ಲ ಅಂತೀಯಾ?"

ನಿಧಾನವಾಗಿ ಬರುತಿದ್ದ ಮಾತುಗಳನ್ನು ಕೇಳುವುದರಲ್ಲಿ ತಲ್ಲೀನಳಾಗಿದ್ದ ತುಂಗಮ್ಮ ಎಚ್ಚರಗೊಂಡಳು. ಏನು ಉತ್ತರ ಹೇಳಬೇಕೆಂದು ಆಕೆಗೆ ಹೊಳೆಯಲಿಲ್ಲ.

"ಹೂಂ" ಎಂದಳಾಕೆ.

ಭಿನ್ನಾಭಿಪ್ರಾಯದ ಉತ್ತರವನ್ನು ತುಂಗಮ್ಮನಿಂದ ನಿರೀಕ್ಷಿಸದೇ ಇದ್ದ ಸರಸಮ್ಮ, ಬೇರೆ ಮಾತಿನ ಹಾದಿ ನೋಡದೆ, ಮುಂದುವರಿಸಿದರು:

"ನಿನಗೆ ಈಗಾಗಲೇ ಗೊತ್ತಾಗಿರ್ಬೇಕು. ಅಭಯಧಾಮವನ್ನ ಈ ಸ್ಥಿತಿಗೆ ತರೋದು ಸುಲಭವಾಗಿರ್ಲಿಲ್ಲ. ಹಿಂದೆ ಹ್ಯಾಗಿತ್ತೂಂತ!...."

............

ಹಾಗೆ ಸರಸಮ್ಮ ತಮ್ಮ ಕೆಲವೊಂದು ಅನುಭವಗಳನ್ನು ಕುರಿತು ಹೇಳಿದರು.

ಆಕೆ ಸಹಾಯಿಕೆಯಾಗಿ ಅಭಯಧಾಮಕ್ಕೆ ಬಂದಾಗ ಆಗಿನ ಮೇಟ್ರನ್‌ಗೆ ವಯಸ್ಸಾಗಿತ್ತು. ಆಗ ಬರುತಿದ್ದ ಹುಡುಗಿಯರ ಮೈ ಮೇಲಿರು

ತಿದ್ದ ಆಭರಣಗಳೆಂದರೆ, ರೋಗ, ಕೆಟ್ಟಚಾಳಿ ಮತ್ತು ಅವಿದ್ಯೆ. ಆ ಮೇಟ್ರನ್ ಅವರಿಗೆ ಹೊಡೆದು ಬುದ್ಧಿ ಕಲಿಸುತ್ತಿದ್ದರು. ತಮ್ಮ ಕೈ ಸೋತಾಗ, ಪೋಲೀಸರನ್ನು ಕರೆಸಿ ಹೊಡೆಸುತ್ತಿದ್ದರು.

ಆಗ ಸಹಾಯಿಕೆಯಾಗಿ ಬಂದ ಒಬ್ಬರಂತೂ ಒಂದು ವಾರವೂ ಇರಲಿಲ್ಲ. ಒಬ್ಬ ಹುಡುಗಿ ಅಧ್ಯಾಪಿಕೆಯ ಮುದ್ದಾಗಿದ್ದ ಕೈಯನ್ನು ಕಚ್ಚಿ, ಬಾಯಿ ತುಂಬ ಮಾಂಸ ಕಿತ್ತುಬಿಟ್ಟಳು. ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಮಾಡಿಸಿಕೊಂಡ ಅವರು ಮತ್ತೆ ಅಭಯಧಾಮದತ್ತ ಮುಖ ತೋರಿಸಲಿಲ್ಲ.

ಆ ಮೇಲೆ ಸರಸಮ್ಮ ಸಹಾಯಿಕೆಯಾಗಿ ಅಭಯಧಾಮ ಸೇರಿದರು. ಸಮಾಜ ಸೇವಿಕೆಯಾಗಬೇಕೆಂಬ ಅವರ ಪ್ರಬಲಾಕಾಂಕ್ಷೆ ಒಂದು ತಿಂಗಳಲ್ಲೆ ಕರಗಿ ಹೋಯಿತು. ಆ ಜೀವನ ಅವರಿಗೆ ಬೇಸರವಾಯಿತು.

ಹೀಗೆ ಅರೆಮನಸ್ಸಿನಿಂದ ಅವರು ದಿನಕಳೆಯುತ್ತಿದ್ದಾಗಲೇ, ಮೇಟ್ರನ್ ಪದವಿಯನ್ನೇ ಆಕೆ ನಿರ್ವಹಿಸಬೇಕಾದ ಪ್ರಮೇಯ ಒದಗಿ ಬಂತು. ಅಲ್ಲಿದ್ದ ಒಬ್ಬಿಬ್ಬರು ಹುಡುಗಿಯರನ್ನೆ ಅವಲಂಬಿಸಿಕೊಂಡು, ಗಟ್ಟಿ ಮನಸ್ಸು ಮಾಡಿ, ಸರಸಮ್ಮ ಉಳಿದರು.

ವರುಷ ವರುಷಗಳು ಸಂದುವು ಆ ಮೇಲೆ. ಸಂಸ್ಥೆ ಬೆಳೆಯಿತು. ಹೊಸ ಕಟ್ಟಡ ಬಂತು. ವಿಧವಿಧದ ಮಾನವ ಜೀವಿಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಪರೀಕ್ಷಿಸಿ ಸರಸಮ್ಮ ಮನಃಶಾಸ್ತ್ರ ಪಾರಂಗತೆಯಾದರು.

ಒಳಗೆ ಸಣ್ಣ ಪುಟ್ಟ ಕಳ್ಳತನಗಳಾಗುತ್ತಿದ್ದುವು.

ಒಮ್ಮೆ ಸರಸಮ್ಮನ ಕೈ ಗಡಿಯಾರ ಕಳವಾಯಿತು!

ಏನು ಮಾಡಬೇಕೆಂದು ತೋಚದೆ ದಿಗ್ಭ್ರಮೆಗೊಂಡು ಸರಸಮ್ಮ ತಮ್ಮ ಕೊಠಡಿಯಲ್ಲೆ ಅಸಹಾಯರಾಗಿ ಶತಪಥ ತುಳಿದರು.

"ಇರೋದೊಂದೇ ಮಾರ್ಗ. ಪೋಲೀಸರ್ನ ಕರಕೊಂಡ್ಬಂದು ಚೆನ್ನಾಗಿ ಪ್ರತಿಯೊಬ್ಬರಿಗೂ ನಾಲ್ಕೇಟು ಬಿಗಿಸಿ"

—ಎಂದು ಮಗ್ಗ ಕಲಿಸಿಕೊಡಲು ಬರುತ್ತಿದ್ದ ನೇಕಾರ ಹೇಳಿದ.

ಸರಸಮ್ಮ ಆ ಕೆಲಸ ಮಾಡಲಿಲ್ಲ. ಆಗ ಅಭಯಧಾಮದಲ್ಲಿದ್ದವರು, ಆಕೆಯನ್ನೂ ಒಳಗೊಂಡು ಹದಿಮೂರೇ ಜನ. ಅವರಲ್ಲಿ, ಗಡಿಯಾರ ಯಾರು ಕದ್ದರು?

ಕೇಳಿ ನೋಡಿ ಬೇಸತ್ತ ಸರಸಮ್ಮ, ತಾವಿನ್ನು ಉಣ್ಣುವುದಿಲ್ಲವೆಂದು ಹಟ ಹಿಡಿದು ಉಪವಾಸಕುಳಿತರು. ಒಬ್ಬಳ ಹೊರತು ಉಳಿದವರು ಯಾರೂ ಸರಸಮ್ಮನ ಬೆದರಿಕೆಯನ್ನು ಗಮನಿಸಲೇ ಇಲ್ಲ. ತಮ್ಮಷ್ಟಕ್ಕೆ ನಗುತ್ತ ತಾವಿದ್ದು, ಊಟಮಾಡಿ, ನಿದ್ದೆ ಹೋದರು. ಆ ಒಬ್ಬಳು ಹುಡುಗಿ ಮಾತ್ರ ಬಂದು ಸರಸಮ್ಮನೆದುರು ಅಳುಮೋರೆ ಮಾಡಿ ಅಂದಳು :

"ನೀವು ಊಟಕ್ಕೇಳಿ ದೊಡ್ಡಮ್ಮ. ಅವರೆಲ್ಲಾ ಕೆಟ್ಟೋರು. ಕದ್ದ ಗಡಿಯಾರ ಸಿಕ್ಕಿಯೇ ಸಿಗತ್ತೆ. ನೀವು ಊಟಕ್ಕೇಳಿ."

ಸರಸಮ್ಮನ ಹೃದಯ ಬಿರಿದು ಕಣ್ಣುಗಳು ಕಂಬನಿದುಂಬಿದುವು.

ಬಲು ಪ್ರಯಾಸದಿಂದ ಆಕೆ ದುಃಖತಡೆದುಕೊಂಡು ಊಟಕ್ಕೆಂದು ಎದ್ದರು.

ಆದರೆ, ತಾವು ಉಣ್ಣುವುದಿಲ್ಲವೆಂದು ಸಂಜೆಯೇ ಆಕೆ ಹೇಳಿದ್ದ ರಲ್ಲವೆ? ಆ ಕಾರಣದಿಂದ ಆಕೆಗಾಗಿ ಹುಡುಗಿಯರು ಏನನ್ನೂ ಉಳಿಸಿ ರಲಿಲ್ಲ!

ಸರಸಮ್ಮ ತಮ್ಮ ಕೊಠಡಿಗೆ ಬಂದು, ಧಡಾರನೆ ಬಾಗಿಲು ಹಾಕಿ, ಹಾಸಿಗೆಯ ಮೇಲುರುಳಿಕೊಂಡರು. ಬಿಸಿಯಾದ ಕಂಬನಿಯಿಂದ ತಲೆ ದಿಂಬು ತೋಯ್ದಿತು.

ಮರುದಿನ ಬೆಳಿಗ್ಗೆ, ಅಡುಗೆ ಸಾಮಾನು ಕೊಡದೆ ಆ ಹುಡುಗಿಯ ರೆಲ್ಲಾ ಉಪವಾಸವಿರುವಂತೆ ಮಾಡಬೇಕೆಂದು ಸರಸಮ್ಮನಿಗೆ ತೋಚಿತು. ಕ್ಷಣಕಾಲ ಹಾಗೆಯೇ ಯೋಚಿಸಿ, ಆಮೇಲೆ, "ಹಾಳಾಗಿ ಹೋಗಲಿ" ಎಂದು ಸುಮ್ಮನಾದರು.

ಆಗ ನಡೆದುದಿಷ್ಟು. ಒಬ್ಬ ಹುಡುಗಿಯನ್ನು ನೋಡಲು ಆಕೆಯ ತಾಯಿ ಪ್ರತಿವಾರವೂ ಬರುತಿದ್ದಳು. ಗಡಿಯಾರ ಕಳವಾದ ಸಂಜೆಯೂ ಬಂದಿದ್ದಳಾಕೆ. ಆಗ ತಾನು ಸಂಪಾದಿಸಿದ್ದನ್ನು ಮಗಳು ತಾಯಿಗೆ ಕೊಟ್ಟಿ ದ್ದಳು. ಆ ತಾಯಿಯೋ—ಕಳವಿನ ವಸ್ತುವನ್ನು ಮನೆಯಲ್ಲಿರಿಸಿಕೊಳ್ಳು ವಷ್ಟು ಮೂರ್ಖಳಾಗಿರಲಿಲ್ಲ.

ಹೀಗೆ, ನಡೆದುದೇನೆಂದು ತಿಳಿದರೂ ಸರಸಮ್ಮ ಏನೂ ಮಾಡಲಾರ ದಾದರು.

ಆಗ ಅವರೊಡನೆ ಸಹಾನುಭೂತಿ ತೋರಿಸಿದ್ದ ಹುಡುಗಿಗೆ ಮುಂದೆ ಮದುವೆಯಾಯಿತು....

ಇನ್ನೊಂದು ಕಥೆ, ಪೋಲೀಸರು ಸೂಳೆಗೇರಿಯಿಂದ ಹಿಡಿದು ತಂದಿದ್ದೊಂದು ಹುಡುಗಿಗೆ ಸಂಬಂಧಿಸಿದ್ದು.

ಅವರು ಒಪ್ಪಿಸಿ ಹೋದ ಹುಡುಗಿ ಚೆಲುವೆಯಾಗಿದ್ದಳು.

ಮರುದಿನವೆ ಮಧ್ಯವಯಸ್ಸಿನ ಹೆಂಗಸೊಬ್ಬಳು ಬಂದು, ಬಾಗಿಲು ಬಡೆದು, ಸರಸಮ್ಮನ ಕಾಲಿಗೆ ಬಿದ್ದು ಅತ್ತಳು:

"ಉಡ್ಗಿ ನನ್ನ ಒಬ್ಬೇ ಮಗಳು....ಒಳ್ಳೇವಳಮ್ಮಾ ಒಳ್ಳೇವ್ಳು....ಈ ವರ್ಸವೇ ಮದುವೆ ಮಾಡ್ಬೇಕೊಂತಿದ್ದೆ....ಯಾರೋ ಚಾಡಿ ಹೇಳ್ಕೊಟ್ಟವ್ರೆ....ಬುಟ್ಬುಡೀಮ್ಮಾ ಬುಟ್ಬುಡಿ.... !"

ಸರಸಮ್ಮ ಆ ಹುಡುಗಿಯನ್ನು ಕರೆದು ಕೇಳಿದರು:

"ಈಕೆ ನಿನ್ತಾಯಿನಾ ?"

ಹುಡುಗಿ ಅಲ್ಲವೆನ್ನಲಿಲ್ಲ.

"ಬಾ ಮೊಗಾ, ಒಂಟೋಗೋವಾ"

—ಎಂದು ಪ್ರೀತಿಯ ಧ್ವನಿಯಲ್ಲಿ ಹೆಂಗಸು ಪುಸಲಾಯಿಸಲೆತ್ನಿಸಿದಳು.

ಹುಡುಗಿ ಮಾತನಾಡಲಿಲ್ಲ.

ಇದೊಂದೂ ಅರ್ಥವಾಗದೆ ಸರಸಮ್ಮ ಉಪಾಯವಾಗಿ ಆಕೆಯನ್ನು ಹೊರಹಾಕಬೇಕಾಯಿತು:

"ನಾಳೆ ಪೋಲೀಸ್ರಿಂದ ಚೀಟಿ ತಗೊಂಡು ಬಾ ಅಮ್ಮ. ನಿನ್ನ ಮಗಳ್ನ ಬಿಟ್ಬಿಡ್ತೀನಿ."

ಆದರೆ ಆ ಹೆಂಗಸು ಹೋಗಿ, ಬಾಗಿಲು ಮುಚ್ಚಿಕೊಂಡಿತೋ ಇಲ್ಲವೋ, ಆ ಹುಡುಗಿ ದೊಡ್ಡಮ್ಮನ ಮೊಣಗಾಲನ್ನು, ಭಯದಿಂದ ಕಂಪಿಸುವ ಮಗುವಿನಂತೆ, ಬಿಗಿಹಿಡಿದು ಅತ್ತಳು.

"ನನ್ನ ಕಳಿಸ್ಬೇಡಿ ದೊಡ್ಡಮ್ಮ—ಕಳಿಸ್ಬೇಡಿ.... !"

ವಿಚಾರಿಸಿದಾಗ ವಿಷಯ ತಿಳಿಯಿತು. ಆಕೆಯನ್ನು ಕೆಟ್ಟ ಹಾದಿಗೆ ಹಚ್ಚಿದ್ದವಳು ತಾಯಿಯೇ. ಈಗ ತನ್ನ ಸಂಪಾದನೆಯ ಮಾರ್ಗ ಕೈ ತಪ್ಪಿ ಹೋಗುತ್ತದೆಂದು ಅವಳಿಗೆ ಸಂಕಟವಾಗಿತ್ತು. ಮಗಳನ್ನು ಮತ್ತೆ ದೊರಕಿಸಿ

ಕೊಂಡು ವ್ಯಾಪಾರವನ್ನು ಎಂದಿನಂತೆ ನಡೆಸಲು ಯತ್ನಿಸುತಿದ್ದಳು ಆ ಮಹಾತಾಯಿ.

ಸರಸಮ್ಮನ ಕಣ್ಣು ಕಿಡಿ ಕಾರಿತು.

"ಹೆದರಬೇಡ! ನಾನಿದೀನಿ!"

—ಎಂದು ಅವರು ಧೈರ್ಯ ಹೇಳಿದರು.

ಮೂರನೆ ದಿನವೂ ಬಂದಳು ಆ ಹೆಂಗಸು—ಚೀಟಿ ಇಲ್ಲದೆಯೇ. ಸರಸಮ್ಮ, ಆಕೆಯನ್ನು ಒಳ ಬರಲು ಬಿಡದೆ, ಬಾಗಿಲಲ್ಲೆ ನಿಂತರು.

"ಇಂಗ್ಯಾಕೆ ಮಾಡ್ತೀರಮ್ಮಣ್ಣಿ? ನಿಮ್ಗೂ ಮಕ್ಕಳಿಲ್ಲವ್ರಾ?"

—ಎಂದು ಕಪಟದ ಕಣ್ಣೀರು ಸುರಿಸಿವಳು ಆ ಹೆಂಗಸು.

"ನಂಗೆ ಮಕ್ಕಳಿಲ್ಲ. ನಡಿ. ಹೋಗು. ಇನ್ನು ಬರ್ಬೇಡ!"

"ಎತ್ತ ತಾಯಿ ಒಟ್ಟೆ ಉರಿಸ್ಬ್ಯಾಡ್ರವ್ವಾ!"

"ಹೋಗ್ತೀಯೋ, ಅಲ್ಲಿ ಪೋಲೀಸ್ರಿಗೆ ಹೇಳಿ ಕಳಿಸ್ಲೊ? ಸಾಕು ನಿನ್ನ ನಾಟ್ಕ!"

ಪೋಲೀಸರ ಮಾತು ಬಂದ ಮೇಲೆ ಆ ಹೆಂಗಸಿನ ಚರ್ಯೆ ಬದಲಾಯಿತು. ಕೆಟ್ಟ ಮಾತುಗಳಲ್ಲಿ ತನ್ನ ಮಗಳನ್ನು ಆಕೆ ಶಪಿಸಿದಳು.

"ನನ್ನ ಮಗಳ್ನ ಮಡಿಗ್ಕೊಂಡು ಸೂಳೆಗಾರ್ಕೆ ಮಾಡಿ ಸಂಪಾದಿಸ್ಬೇಕೊಂತ ಮಾಡಿದೀಯಾ?"

—ಎಂದು ಸರಸಮ್ಮನಿಗೇ ಮಂಗಳಸ್ನಾನ ಮಾಡಿಸಿದಳು!

....ಬೇರೆ ಒಂದೆರಡು ಸಾರಿ ಹುಡುಗಿಯರೇ ಓಡಿ ಹೋಗಲು ಯತ್ನಿಸಿದುದಿತ್ತು. ಅವರ ಪ್ರಿಯತಮರು ರಾತ್ರೆ ಹೊತ್ತು ಹೊರಗೆ ನಿಂತುಕೊಂಡು ವಿಚಿತ್ರವಾಗಿ ಸಿಳ್ಳು ಹಾಕುತಿದ್ದರು....ಅಂತಹ ಸಂದರ್ಭಗಳಲ್ಲಿ ತಾವು ಎಚ್ಚರಗೊಂಡಾಗಲೆಲ್ಲ ಸರಸಮ್ಮ ಕಣ್ಣಲ್ಲಿ ಎಣ್ಣೆ ಇಟ್ಟು ಹುಡುಗಿಯರನ್ನು ಕಾಯುತಿದ್ದರು; ಆರಿಸಿದ್ದ ವಿದ್ಯುದ್ದೀಪಗಳನ್ನೆಲ್ಲ ಉರಿಸಿ ಇಡುತಿದ್ದರು.

....ಅದಾದ ಮೇಲೆ, ಹೊರಗಿನಿಂದ ಕೆಟ್ಟ ತಿಂಡಿಯನ್ನು ತಂದುಕೊಟ್ಟು ಹುಡುಗಿಯೊಬ್ಬಳು ಕಾಹಿಲೆ ಬೀಳುವಂತೆ ಮಾಡಿ, ಆಸ್ಪತ್ರೆಯಿಂದ ಆಕೆಯನ್ನು ಓಡಿಸಿಕೊಂಡು ಹೋಗಲು ನಡೆದ ಯತ್ನ.

............

ತುಂಗಮ್ಮ, ನಿಜವಾಗಿಯೂ ಅತ್ಯಂತ ಸ್ವಾರಸ್ಯಕರವಾದ ಕತೆ ಕೇಳುವವಳಂತೆ, ಸರಸಮ್ಮ ಹೇಳಿದುದಕ್ಕೆಲ್ಲ ಕಿವಿಗೊಟ್ಟಳು. ಜಲಜ, ತನಗೆ ಗೊತ್ತಿದ್ದ ಕೆಲವು ಘಟನೆಗಳನ್ನು ಹಿಂದೆ ಹೇಳಿದ್ದಳು ನಿಜ. ಆದರೆ ಸರಸಮ್ಮನ ಬಾಯಿಂದಲೇ ಎಲ್ಲವನ್ನೂ ಕೇಳುವುದು ಆಕೆಯ ಪಾಲಿನ ಪರಮ ಭಾಗ್ಯವಾಗಿತ್ತು.

ಸರಸಮ್ಮ ಸುಮ್ಮನಾದುದನ್ನು ಕಂಡು, ಕತೆಗಳು ಮುಗಿದುವೇನೋ ಎನಿಸಿತು ತುಂಗಮ್ಮನಿಗೆ.

ಹಾಗಾಗಬಾರದೆಂದು ಆಕೆಯೊಂದು ಪ್ರಶ್ನೆ ಕೇಳಿದಳು:

"ಒಮ್ಮೆ ಹುಡುಗೀರೆಲ್ಲ ಓಡಿಹೋಗೋಕೆ ಪ್ರಯತ್ನ ಪಟ್ಟಿದ್ರಂತೆ ಹೌದೆ?"

"ಹೂಂ ಕಣೆ. ಜಲಜ ಹೇಳಿದ್ಳೆ?"

"ಹೂಂ ದೊಡ್ಡಮ್ಮ. ಆಕೆ ಬರೋಕ್ಮುಂಚೆಯೊ, ಬಂದ ಶುರುವಿನಲ್ಲೋ ಏನೊ—"

"ಹೌದು, ಹೌದು...."

ಸರಸಮ್ಮ ಆ ಘಟನೆಯನ್ನು ಸ್ಮರಿಸಿಕೊಂಡು ನಕ್ಕರು. ಅದನ್ನು ಹೇಳುವ ಇಚ್ಛೆಯಾಯಿತು ಅವರಿಗೆ.

"ಒಂದು ದಿವಸ—"

ಒಂದು ದಿವಸ ಸರಸಮ್ಮ ಆಡಳಿತ ಸಮಿತಿಯ ಸಭೆಗೆ ಹೋಗಿದ್ದರು. ಆಗ ಹಾಗೆ ಹೋದಾಗ ಹೊರಗಿನಿಂದ ಬೀಗ ತಗಲಿಸಬೇಕಾಗುತಿತ್ತು. ಹಿಂತಿರುಗುವಾಗ ಕತ್ತಲಾಗುತಿತ್ತು.

ಅದೆಲ್ಲವನ್ನೂ ಚೆನ್ನಾಗಿ ತಿಳಿದಿದ್ದ ಕೆಲವು ಹುಡುಗಿಯರು ಬಲು ಗುಪ್ತವಾಗಿ ಒಳಸಂಚು ನಡೆಸಿದರು. ಹಿಂತಿರುಗಿದ ಸರಸಮ್ಮ ಬಾಗಿಲು ತೆರೆದೊಡನೆ ಅವರ ಕಣ್ಣಿಗೆ ಮೆಣಸಿನ ಕಾಯಿಪುಡಿ ಎರಚಬೇಕು; ಅವರು ಬೊಬ್ಬಿಡದಂತೆ ಬಾಯಿಗೆ ಬಟ್ಟೆಯ ಚಿಂದಿ ತುರುಕಬೇಕು; ಕೊಠಡಿಗೆ ತಳ್ಳಿ ಬಾಗಿಲೆಳೆದುಕೊಂಡು ತಾವೆಲ್ಲ ಹೊರ ಬೀಳಬೇಕು!

ಬಹಳದಿನಗಳಿಂದ ಕೆಲವರ ಮನಸಿನೊಳಗೇ ಇದ್ದುದು ಆ ದಿನ ಕೃತಿಗಿಳಿಯಿತು. ಅಡುಗೆ ಮನೆಯ ಖಾರದ ಪುಡಿ, ಡಬ್ಬದಿಂದ ತೆಂಗಿನ ಚಿಪ್ಪಿಗೆ ಸ್ಥಳಾಂತರ ಹೊಂದಿತು. ಒಳಸಂಚಿನ ನಾಯಕತ್ವ ವಹಿಸಿದ್ದ ನಾಲ್ವರು ಹುಡುಗಿಯರೂ ವಿಷಯವನ್ನೆಲ್ಲ ರಹಸ್ಯವಾಗಿಯೆ ಇರಿಸಿದರು.

ಅಭಯಧಾಮಕ್ಕೆ ಹೊಸಬರಾಗಿದ್ದ ಜಲಜ—ಲಲಿತೆಯರಿಗೆ ಅದು ತಿಳಿಯಲಿಲ್ಲ.

ಆದರೆ ಒಬ್ಬಳಿಗೆ ಸಂದೇಹ ಬಂತು. ಆಕೆ, ಮೂಗಿ-ಕಲ್ಯಾಣಿ.

ಬಾಗಿಲಬಳಿ ಹೂವಿನ ಗಿಡದಕೆಳಗೆ ಇರಿಸಿದ್ದ ಖಾರದಪುಡಿಯನ್ನು ಅವಳು ನೋಡಿ ಬಂದಳು. ಬಂದವಳೇ, ಕಾರಸ್ಥಾನಕ್ಕೆ ಸೇರಿದ್ದ ಒಬ್ಬಳು ಹುಡುಗಿಯನ್ನೇ ಸನ್ನೆಯ ಮೂಲಕ 'ಅದು ಯಾಕೆ?' ಎಂದು ಕೇಳಿದಳು. ಉತ್ತರಬರಲಿಲ್ಲ. ಬದಲು 'ಬಾಯ್ಮುಚ್ಚು! ಇಲ್ದೇ ಹೋದರೆ ಚಚ್ಚಿಹಾಕ್ತೀವಿ!' ಎಂಬ ಗದರಿಕೆ ಕಲ್ಯಾಣಿಯ ಭಾಷೆಯಲ್ಲೇ ಬಂತು.

ಮಂಕುಕವಿದ ಹಾಗಾಯಿತು ಕಲ್ಯಾಣಿಗೆ. ಬಾಯಿಯಂತೂ ಮುಚ್ಚಿಯೇ ಇತ್ತಲ್ಲವೆ? ಆದರೂ, ಮನಸ್ಸು ಕೆಲಸ ಮಾಡಿತು. ಕೂಡಿಸಿ ಕಳೆದು ಭಾಗಿಸಿ ಗುಣಿಸಿತು. ಖಾರದ ಪುಡಿ ಯಾಕಿರಬಹುದು, ಯಾಕೆ? ಯಾಕೆ ಎಂಬುದು ಮೊದಲು ಮಸಕಾಗಿ ಬಳಿಕ ಸ್ಪಷ್ಟವಾಗಿ ಹೊಳೆದಾಗ, ಕಲ್ಯಾಣಿಯ ಮೈ ಬೆವತು ಹೋಯಿತು. ಶರೀರ ಕಂಪಿಸಿತು. ಯಾರಿಗೂ ಏನನ್ನೂ ಹೇಳಲಾರದೆ ಭಯದಿಂದ ತತ್ತರಿಸುತ್ತ ಆಕೆ, ದೊಡ್ಡಮ್ಮನ ಆಫೀಸು ಕೊಠಡಿಯಲ್ಲೆ ಗೋಡೆಗೊರಗಿ ಮೂಲೆಯಲ್ಲಿ ಕುಳಿತಳು.

ಸರಸಮ್ಮ ಬರುವ ಹೊತ್ತಾದಂತೆ ಬಂಡಾಯಗಾರರೂ ಮುಳ್ಳಿನ ಮೇಲೆ ನಿಂತವರ ಹಾಗೆ ವರ್ತಿಸಿದರು. ಕಲ್ಯಾಣಿ ಸುಮ್ಮನಿದ್ದುದನ್ನು ಕಂಡಂತೂ ಅವರ ಮನಸ್ಸು ನಿಶ್ಚಿಂತವಾಯಿತು

ದೊಡ್ಡಮ್ಮ ಬೀದಿಯಿಂದ ಅಂಗಳಕ್ಕಿಳಿದಾಗ ಮಬ್ಬುಗತ್ತಲು ಕವಿಯತೊಡಗಿತ್ತು. ಒಳಗೆ ದೀಪ ಹಾಕಿರಲಿಲ್ಲ ಇನ್ನೂ. ನಾಲ್ವರು ಹುಡುಗಿಯರಷ್ಟೆ, ಒಬ್ಬೊಬ್ಬರೂ ಒಂದೊಂದು ಹಿಡಿ ಖಾರದ ಪುಡಿಯೊಡನೆ ಬಾಗಿಲ ಬಳಿ ನಿಂತಿದ್ದರು.

ಸರಸಮ್ಮ ಹೊರಗಿನಿಂದ ಬಾಗಿಲಿನತ್ತ ಬರತೊಡಗಿದರು.

ಇನ್ನೇನು—ಕಾರಸ್ಥಾನ ಯಶಸ್ವಿಯಾಗಬೇಕು. ಅಷ್ಟರಲ್ಲಿ ಮೂಕಿ ಚಿಟ್ಟನೆ ಚೀರಿದಳು. ವಿಚಿತ್ರವಾಗಿ ವಿಕಾರವಾಗಿ ಕೂಗಿಕೊಂಡಳು. ಹುಡುಗಿಯರೆಲ್ಲ ಕೊಠಡಿಯ ಬಳಿಗೆ ಬಾಗಿಲ ಬಳಿಗೆ ಧಾವಿಸಿ ಬರುವುದಕ್ಕೂ ಗಾಬರಿಗೊಂಡು ಸರಸಮ್ಮ ಒಳ ಬರುವುದಕ್ಕೂ ಸರಿಹೋಯಿತು.

ಆ ನಾಲ್ವರು ಹುಡುಗಿಯರು ನುಸುಳಿಕೊಂಡು ಬಚ್ಚಲುಮನೆಗೆ ಓಡಿದುದನ್ನು ಯಾರೂ ಗಮನಿಸಲಿಲ್ಲ.

ಕಲ್ಯಾಣಿ ದೊಡ್ಡಮ್ಮನನ್ನು ಅಪ್ಪಿಕೊಂಡು ಮಡಿಲಲ್ಲಿ ಮುಖವಿಟ್ಟು ನರಳಿದಳು. ಮಾತು ಬಾರದ ಮೂಕ ಪಶುವಿನ ರೋದನ....

ಇದೇನು ಕಾಹಿಲೆಯೋ-ಎಂದು ಹೆದರಿದರು ಸರಸಮ್ಮ.

ಕಲ್ಯಾಣಿಯನ್ನು ಸಂತೈಸಲು ಅವರಿಗೆ ಬಹಳ ಹೊತ್ತು ಹಿಡಿಯಿತು. ಶಾಂತಳಾದ ಮೇಲೂ ಆಕೆ ಏನನ್ನೂ ಹೇಳಲಿಲ್ಲ; ಯಾರನ್ನೂ ಬೊಟ್ಟು ಮಾಡಿ ತೋರಿಸಲಿಲ್ಲ.

ಆ ಮೇಲೆ ಯಾರೋ ಒಬ್ಬರು ಉದ್ಯಾನದ ಮೂಲೆಯಲ್ಲಿದ್ದ ತೆಂಗಿನ ಚಿಪ್ಪನ್ನೂ ಅದರೊಳಗೆ ಮತ್ತೂ ಉಳಿದಿದ್ದ ಖಾರದ ಪುಡಿಯನ್ನೂ ಕಂಡರು. ಸುದ್ದಿ ಹಬ್ಬಿತು. ಎಲ್ಲರಿಗೂ ಅರ್ಥವಾಯಿತು.

ಅಪರಾಧಿಗಳು ಯಾರೆಂದು ಕಂಡುಹಿಡಿಯುವುದು ಕಷ್ಟವಾಗದೆ ಇದ್ದರೂ ಆಗ ಯಾರೂ ಮಾತನಾಡಲಿಲ್ಲ.

ಆ ರಾತ್ರೆ ಮಲಗಿದಾಗ ಸರಸಮ್ಮನ ಮೈ ಅವರಿಗೆ ಅರಿಯದಂತೆಯೇ ಬೆವತುಕೊಂಡಿತ್ತು.

ಈಗ ಈ ಕತೆ ಕೇಳಿ ಬೆವತುದು ತುಂಗಮ್ಮನ ಮೈ. ಎಂತಹ ಗಂಡಾಂತರದಿಂದ ಪಾರಾಗಿದ್ದರು ದೊಡ್ಡಮ್ಮ! ಅದು ಅಷ್ಟಾಗಿ ಹಳೆಯ ಕಥೆಯೂ ಅಲ್ಲ. ಇತ್ತೀಚೆಗೆ—ನಾಲ್ಕು ವರ್ಷಗಳ ಹಿಂದೆ—ನಡೆದುದು.

"ಆ ಹುಡುಗಿಯರಲ್ಲಿ ಇಬ್ಬರು ನರ್ಸ್ ಶಿಕ್ಷಣಕ್ಕೆ ಹೋದ್ರು. ಉಳಿದ ವರೂ ಒಳ್ಳೆಯವರಾದ್ರು. ಬಹಳ ದಿನಗಳಾದ್ಮೇಲೆ ಅವರೇ ಬಂದು ಅತ್ತು ತಪ್ಪೊಪ್ಪಿಕೊಂಡ್ರು. ಅದಕ್ಕೆ ಕಾರಣ—ಉಳಿದ ಹುಡುಗೀರು ಅವರಿಗೆ ಕೊಟ್ಟ ಕೀಟಲೆ."

ಕೆಟ್ಟವರು ಒಳ್ಳೆಯವರಾಗಿದ್ದರು....

ಹಾಗಾಗುವುದು ಸಾಧ್ಯವಿತ್ತು....

ಹಾಗಾಯಿತೆಂದು ತಿಳಿದು ಸಂತೋಷಪಡುತ್ತ ತುಂಗಮ್ಮ ಮುಗುಳು ನಕ್ಕಳು.

"ಆ ಹುಡುಗೀರಲ್ಲಿ ಒಬ್ಬಳ ಪರಿಚಯವಂತೂ ನಿಂಗೆ ಚೆನ್ನಾಗೇ ಇದೆ."

ತುಂಗಮ್ಮನ ಹುಬ್ಬುಗಳು ಆಶ್ಚರ್ಯದಿಂದ ಮೇಲಕ್ಕೆ ಹೋದುವು.

"ಯಾರು ದೊಡ್ಡಮ್ಮ ?"

"ನೀನೇ ಹೇಳು ನೋಡೋಣ."

ತುಂಗಮ್ಮ ಯೋಚಿಸಿದಳು ; ಯಾವ ಹೆಸರೂ ಹೊಳೆಯಲಿಲ್ಲ.

"ಯಾರೋ !"

"ಸಾವಿತ್ರಿ ಕಣೇ."

"ಓ ! ನಿಜವಾಗ಼್್ಲೂ ?"

"ಹೂಂ."

ತಮ್ಮ ದೊಡ್ಡಮ್ಮನನ್ನು ಅಂಥೆಯಾಗಿ ಮಾಡಿ ಒಂದು ಕಾಲದಲ್ಲಿ ಓಡಿಹೋಗಬಯಸಿದ ಹುಡುಗಿ ಸಾವಿತ್ರಿ, ಈ ದಿನ ಅದೇ ದೊಡ್ಡಮ್ಮನ ಮೆಚ್ಚುಗೆಗೆ ಪಾತ್ರಳಾದವರಲ್ಲಿ ಒಬ್ಬಳು....

ಮಾತು ನಿಂತು ಕೊಠಡಿಯಲ್ಲಿ ಮೌನ ನೆಲೆಸಿತು.

ಈಗ ತನ್ನ ಪ್ರವೇಶವಾಗಲೆಂದು, ಬೇಸಗೆಯ ಕಾರಿರುಳನ್ನು ಭೇದಿಸಿ ಕೊಂಡು ತಣ್ಣನೆಯ ಗಾಳಿಯೊಂದು ಸದ್ದಿಲ್ಲದೆ ಸುಳಿದು ಹೋಯಿತು.

ಮೈ ಕೈ ಮುರಿದು ಬಾಯಿ ಆಕಳಿಸಿದರು ಸರಸಮ್ಮ.

ಮೆಲ್ಲನೆ ಹುಟ್ಟಿ, ನೂರು ಜೀವಗಳನ್ನು ಒಳಗೊಂಡು ರೂಪು ತಳೆದು, ವಿಸ್ತಾರವಾಗಿ ಬೆಳೆದಿದ್ದ ಅಭಯಧಾಮದ ಇತಿಹಾಸ....

ಅದರ ಗುಂಗಿನಲ್ಲೇ ಇನ್ನೂ ಇದ್ದಳು ತುಂಗಮ್ಮ.

"ಹೊತ್ತಾಯ್ತು. ಮಲಗೋಣ ಇನ್ನು. ಮಾತನಾಡಿ ಮುಗಿಯೋ ಕತೆಯೇ ಇದಲ್ಲ."

ಹೌದೆಂದು ತಲೆಯಾಡಿಸಿ ತುಂಗಮ್ಮ ಎದ್ದಳು.

ಎದ್ದು ನಿಂತವಳು ಕಿಟಕಿಯಿಂದ ಹೊರನೋಡಿದಳು. ದೂರದ

ಮನೆಯೊಂದರಲ್ಲಿ ಒಂದೇ ಒಂದಾಗಿ ಉರಿಯುತ್ತಿದ್ದ ದೀಪ ಆರಿತು. ಮನೆಯೊಡತಿಯೋ ಒಡೆಯನೋ ಅದನ್ನು ಆರಿಸಿರಬೇಕು....ಕತ್ತಲು....

ಕೊಠಡಿಯೊಳಗೆ ಉರಿಯುತ್ತಿದ್ದ ವಿದ್ಯುದ್ದೀಪದ ಬೆಳಕಿನಲ್ಲಿ ತುಂಗಮ್ಮ ಛಾವಣಿಯತ್ತ ದೃಷ್ಟಿ ಹರಿಸಿದಳು. ಆ ಮರದ ತೋಪು, ಮೊಳೆ....

ನಗು ಬಂತು ಆಕೆಗೆ.

"ಅದೇನೆ ?"

ತುಂಗಮ್ಮ, 'ಏನೂ ಇಲ್ಲ' ಎನ್ನಲಿಲ್ಲ. ಅವಳೆಂದಳು :

"ನಾನು ಇಲ್ಲಿಗೆ ಬಂದಾಗ, ಇಲ್ಲೊಂದು ಹೆಣ್ಣು ಗುಬ್ಬಚ್ಚಿ ಇರ್‍ತಿತ್ತು ದೊಡ್ಡಮ್ಮ. ಓ ಅಲ್ಲಿ ಕೂತು ನಿದ್ದೆ ಹೋಗ್ತಿತ್ತು—ಆ ಮೊಳೇ ಮೇಲೆ."

"ಪರವಾಗಿಲ್ಲ. ಅದನ್ನೂ ನೋಡ್ಬಿಟ್ಟಿದೀಯಾ !''

"ಈಗ ಅಲ್ಲಿ ಗುಬ್ಬಚ್ಚಿಯಿಲ್ಲ."

"ಹೌದು, ತನ್ನದೇ ಗೂಡು ಸಿದ್ಧವಾಯ್ತು, ಹೊರಟ್ಹೋಯ್ತು."

ಎಲ್ಲರೂ ಅಷ್ಟೆ—ಎಂದೂ ಹೇಳಬೇಕೆಂದಿದ್ದರು ಸರಸಮ್ಮ. ಆದರೆ ನಾಲಿಗೆ ಬಿಗಿ ಹಿಡಿದರು. ಅವರು—ಸರಸಮ್ಮ ಮತ್ತು ತುಂಗಮ್ಮ—ಹಾಗಿರಲಿಲ್ಲ ಅಲ್ಲವೆ ? ಅವರಿಗೆ ಅಭಯಧಾಮವೇ ಗೂಡು ಆಗಿತ್ತಲ್ಲವೆ ?

....ತುಂಗಮ್ಮ ಕೊಠಡಿಯಿಂದ ಹೊರಬಿದ್ದು ಬಚ್ಚಲು ಮನೆಗೆ ಹೋಗಿ ಬಂದಳು. ತಾನು ಪುನರ್ಜನ್ಮ ಪಡೆದಿದ್ದ ಕೊಠಡಿಯ ಮುಂದೆ ಜಲಜ ಮಲಗಿದ್ದಳು. ಅವಳ ಪಕ್ಕದಲ್ಲೆ ತನ್ನ ಚಾಪೆಯೂ ಸಿದ್ಧವಾಗಿತ್ತು, ಎಂದಿನಂತೆ. ತನಗಾಗಿ ಜಲಜ ಹಾಸಿದ್ದಳು.

ನಿದ್ದೆ ಬಂದಿದ್ದ ಜಲಜೆಯನ್ನು ಎಬ್ಬಿಸಬಾರದೆಂದು ತುಂಗಮ್ಮ ಚಾಪೆಯ ಮೇಲೆ ಅಡ್ಡಾದಳು.

"ಇಷ್ಟು ಹೊತ್ತಾಯ್ತೆ ಟೀಚ ?"

ಜಲಜೆಯ ಸ್ವರ. ನಿದ್ದೆ ಹೋಗಿರಲಿಲ್ಲ ಕಳ್ಳಿ ! ಆಡಿಮದೂ ಎಂಥ ಮಾತು !

"ಏನಂದೆ ?''

"ಮೇಟ್ರನ್ ಜತೇಲಿ ಮಾತುಕತೆ ಇಷ್ಟು ಹೊತ್ತಾಯ್ತೆ ಟೀಚ—ಅಂತ ಕೇಳ್ದೆ."

"ಜಲಜ! ನಿಂಗೆ ಹೊಡೀತೀನಿ! ಹಾಗನ್ಬೇಡ ಇನ್ನೊಮ್ಮೆ!"

ಪ್ರೀತಿಯ ಸುಳ್ಳು ಗದರಿಕೆಯ ಆ ಮೆಲುಧ್ವನಿ ವಾತಾವರಣದ ಮೌನದೊಡನೆ ಕಚಕುಳಿ ಇಟ್ಟಿತು.

"ಸಾವಿರ ಸಾರೆ ಅನ್ತೀನಿ. ಟೀಚ! ಟೀಚ! ಟೀಚ!"

ತುಂಗಮ್ಮ ಸರಕ್ಕನೆ ಎದ್ದು ಕುಳಿತು, ಜಲಜೆಯ ಕೆನ್ನೆಯನ್ನು ತಿವಿದಳು; ಕಿವಿಯನ್ನು ಹಿಂಡಿದಳು.

"ಆಯ್! ಅಕ್ಕಾ! ಬಿಡೇ! ಬಿಡೇ!"

"ಹಾಗೆ ಹಾದಿಗ್ಬಾ—"

೧೫

ಬೆಳಿಗ್ಗೆ ಎದ್ದಾಗ ತುಂಗಮ್ಮನಿಗೆ ಉಪಾಧ್ಯಾಯವೃತ್ತಿಯಲ್ಲಿದ್ದ ತನ್ನ ತಂದೆಯ ನೆನಪಾಯಿತು. ಹಿಂದೆ ತನಗೂ ಇತ್ತೀಚೆಗೆ ತನ್ನ ತಮ್ಮನಿಗೂ ಮನೆಯಲ್ಲಿ ಅವರು ಪಾಠ ಹೇಳಿಕೊಡುತಿದ್ದ ಚಿತ್ರಗಳು ಕಣ್ಣಿಗೆ ಕಟ್ಟಿದುವು. ಹಾಗೆಯೇ ಮೆಚ್ಚುಗೆಯ ತನ್ನ ಅಧ್ಯಾಪಕರೊಬ್ಬರು ತರಗತಿಯಲ್ಲಿ ಪಾಠ ಹೇಳುತಿದ್ದ ಕ್ರಮ....

ಬೆಳಕು ಮೆಲ್ಲ ಮೆಲ್ಲನೆ ಹರಿಯುತ್ತಲಿತ್ತು.

ತುಂಗಮ್ಮ ಚಾಪೆಯ ಮೇಲೆಯೆ ಕುಳಿತು, ತಾನು ತರಗತಿಯಲ್ಲಿ, ಹುಡುಗಿಯರಿಗೆ ಪಾಠ ಹೇಳಿಕೊಡಬೇಕಾದ ಪರಿಸ್ಥಿತಿಯನ್ನು ಕುರಿತು ಚಿಂತಿಸಿದಳು.

ಒಮ್ಮೆಲೆ, ಈ ಉದ್ಯೋಗ ತನಗೆ ದೊರೆಯದಿದ್ದರೇ ಮೇಲಾಗುತಿತ್ತು ಎಂದು ಆಕೆಗೆ ಅನಿಸಿತು.

ಅಪಾಯವನ್ನು ಅನಿವಾರ್ಯವೆಂದು ನಿರೀಕ್ಷಿಸುವವರ ಹಾಗೆ ತುಂಗಮ್ಮ ಮುಖಬಾಡಿಸಿಕೊಂಡು ಪ್ರಾತರ್ವಿಧಿಗಳತ್ತ ಗಮನಕೊಟ್ಟಳು.

ಆದರೆ ಅವಳು ಅನುಭವಿಸುತಿದ್ದ ಸಂಕಟ ಸರಸಮ್ಮನ ಸೂಕ್ಷ್ಮ ದೃಷ್ಟಿಗೆ ಬೀಳದಿರಲಿಲ್ಲ. ತಮ್ಮ ಕೊಠಡಿಗೆ ತುಂಗಮ್ಮನನ್ನು ಅವರು ಕರೆದರು.

" ಪಾಠ ಹೇಳ್ಕೊಡೋದು ನಿನ್ಕೈಲಿ ಆಗುತ್ತೋ ಇಲ್ವೋಂತ ಭಯವೆ ತುಂಗ ?"

ಮನಸ್ಸಿನ ಒಳಹೊಕ್ಕು ತಿಳಿಯುವ ಸಾಮರ್ಥ್ಯವಿತ್ತು ದೊಡ್ಡಮ್ಮನಿಗೆ. ಅವರಿಂದ ಏನನ್ನೂ ಬಚ್ಚಿಡುವ ಹಾಗಿರಲಿಲ್ಲ. ಅವರು ಸರಿಯಾಗಿಯೇ ಊಹಿಸಿದ್ದರು. ಆದರೆ ಅದು ನಿಜವೆಂದು ಒಪ್ಪಿಕೊಳ್ಳಲು ತುಂಗಮ್ಮ ನಾಚಿದಳು.

"ಮೊದಲು ಇಲ್ಲಿಗೆ ಬಂದ ದಿವಸ ನಂಗೂ ಹಾಗೇ ಆಗಿತ್ತು ಕಣೇ. ಹಾಗೆ ಆಗೋದು ಸ್ವಾಭಾವಿಕ."

"ಏನೋ ದೊಡ್ಡಮ್ಮ. ಹುಡುಗೀರು ಗಲಾಟೆ ಮಾಡಿದ್ರೆ—?"

"ಹುಚ್ಚಿ, ಅವರೇನೂ ಮಾಡೋಲ್ಲ. ಯಾವ ಯೋಚ್ನೇನೂ ಮಾಡದೆ ಸುಮ್ನಿರು. ಚೆನ್ನಾಗಿಯೇ ಪಾಠ ಹೇಳ್ತೀಯಾ ನೀನು - ನಂಗೊತ್ತು."

"ಅದೇನು ಹೇಳ್ತೀನೊ!"

"ಯಾಕೆ ತುಂಗ? ಉಪಾಧ್ಯಾಯರ ಮಗಳಲ್ವೇನೆ ನೀನು?"

ಮತ್ತೆ ತಂದೆಯ ನೆನಪು. ಅವರ ಮೂವತ್ತು ವರ್ಷಗಳ ಅಧ್ಯಾಪಕ ಜೀವನದಲ್ಲಿ ನೂರುಗಟ್ಟಲೆಯಾಗಿ ಅದೆಷ್ಟೊಂದು ಹುಡುಗರು ಓನಾಮ ಕಲಿತಿರಲಿಲ್ಲ; ಎಷ್ಟೊಂದು ಜನ ವಿದ್ಯಾವಂತರಾಗಿರಲಿಲ್ಲ,-- ಪದವೀಧರರಾಗಿರಲಿಲ್ಲ! ತಾನಾದರೋ ಏನೂ ತಿಳಿಯದ ಹುಡುಗರಿಗೆ ಅಕ್ಷರಜ್ಞಾನ ಮಾಡಿಸಿದರಾಯಿತು. ಅಷ್ಟಕ್ಕೇ ಹೀಗೆ ಅಳುಕಿದರೆ!

ಸರಸಮ್ಮನ ಮಾತಿನಿಂದ ಧೈರ್ಯಗೊಂಡ ತುಂಗಮ್ಮ ಹಸನ್ಮುಖಿಯಾದಳು.

....ಆದಿನ ಅಭಯಧಾಮಕ್ಕೆ ಬಂದಾಗ ಅಧ್ಯಾಪಿಕೆ ರಾಜಮ್ಮನವರಿಗೆ ಸಮಿತಿಯ ತೀರ್ಮಾನದ ವಿಷಯ ತಿಳಿಯಿತು. ತಮ್ಮ ಕೆಲಸ ಕಡಿಮೆಯಾಗುತ್ತದೆಂದು ಅವರಿಗೆ ಸಂತೋಷವಾಗಬೇಕಾಗಿತ್ತು. ಆದರೆ ಹಾಗಾಗಲಿಲ್ಲ.

"ಶುಭಸಮಾಚಾರ!"

—ಎಂದು ಅವರು ಹೇಳಿದರೂ ಮುಖ ಗಂಟಿಕ್ಕದಿರಲಿಲ್ಲ.

ಅದನ್ನು ಲಲಿತೆಗೆ ತೋರಿಸುತ್ತ ಜಲಜ ಅಂದಳು:

"ಹುಂ! ನೋಡಿದ್ಯಾ? ಹ್ಯಾಗೆ ಮಾಡ್ತಿದಾಳೆ ಆಟೀಚ! ನಮ್ಮ ತುಂಗಕ್ಕ ಇನ್ನೂ ಒಂದಿಷ್ಟು ಇಂಗ್ಲಿಷು ಕಲೀಲಿ - ಒಂದೆರಡು ವರ್ಷ ಹೋಗ್ಲಿ. ಆಮೇಲೆ ಏನಾದರೂ ಮಾಡಿ ಆ ಮುಡ್ಡಮ್ಮನ್ನ ಓಡಿಸ್ಬೇಕು ಲಲಿತಾ.

ಲಲಿತೆಗೆ ಜಲಜೆಯ ವಿಚಾರ ಪೂರ್ಣ ಒಪ್ಪಿಗೆಯಾಗಿತ್ತು.

ಅಂತೂ ರಾಜಮ್ಮನ ಸಹಾಯದಿಂದ ಸರಸಮ್ಮ ಹುಡುಗಿಯರನ್ನು ಎರಡು ತರಗತಿಗಳಾಗಿ ವಿಂಗಡಿಸಿದರು. ಸಂಖ್ಯೆ ಸಮ - ಸಮವೆನಿಸಿದರೂ ರಾಜಮ್ಮನ ತರಗತಿ ವಿಸ್ತಾರವಾದ ಹಜಾರದಲ್ಲೇ ನಡೆಯಿತು. ತುಂಗಮ್ಮ

ಮತ್ತು ಇತರ ಹುಡುಗಿಯರು ನೇಯ್ಗೆಯ ಮಗ್ಗವಿದ್ದ ಮೂಲೆಯಲ್ಲಿ ಜಾಗ ಹಿಡಿದರು.

ಜಲಜೆ - ಲಲಿತೆಯರಾದರೂ ತನ್ನ ಬಳಿಯಲ್ಲಿ ಇರುತಿದ್ದರೆ - ಎಂದು ತುಂಗಮ್ಮ ಹಲುಬಿದಳು. ಆದರೆ ಅವರಿಬ್ಬರೂ ಆಗಲೆ ವಿದ್ಯಾವಂತೆಯರೆನ್ನಿಸಿ ಕೊಂಡು ಕತೆ ಪುಸ್ತಗಳನ್ನು ಓದತೊಡಗಿದ್ದವರು. ಅವರು ತುಂಗಮ್ಮನ ತರಗತಿಗೆ ಬರುವ ಮಾತೇ ಇರಲಿಲ್ಲ.

ರಾಜಮ್ಮ ಮಾತ್ರ ಅಧಿಕಾರದ ಧ್ವನಿಯಲ್ಲಿ ಅಂದರು :

"ಏನಾದರೂ ತಿಳೀದೆ ಹೋದ್ರೆ ನನ್ನ ಕೇಳಿ."

ಆ ಬಹುವಚನದ ಸಂಬೋಧನೆಯಲ್ಲಿ ವ್ಯಂಗ್ಯ ಬೆರೆತಿತ್ತು. ಆದರೆ ತುಂಗಮ್ಮ ಆ ಅವಮಾನವನ್ನು ಗಮನಿಸಲಿಲ್ಲ.

ತುಂಗಮ್ಮ ತನ್ನ ವಿದ್ಯಾರ್ಥಿನಿಯರಿಗೆ ಎದುರಾಗಿ ಕುಳಿತಾಗ ಹುಡುಗಿ ಯರೆಲ್ಲ ಮುಸು ಮುಸು ನಕ್ಕರು.

ಸರಸಮ್ಮ, ತುಂಗಮ್ಮನ ನೆರವಿಗೆ ಬಂದರು.

"ಎಲ್ಲರೂ ಏಳಿ !"

ತುಂಗಮ್ಮನನ್ನು ಒಳಗೊಂಡು ಎಲ್ಲ ಹುಡುಗಿಯರೂ ಎದ್ದು ನಿಂತರು. ಒಬ್ಬರ ಕೈಯಲ್ಲಾದರೂ ಸ್ಲೇಟುಕಡ್ಡಿ ಇರಲಿಲ್ಲ.

"ಯಾಕೆ ಬರಿಕೈಲಿದೀರಾ ?"

ಹುಡುಗಿಯರು ತೆಪ್ಪಗಿದ್ದರು. ಆ ಮೌನಕ್ಕೆ ಅಪವಾದವಾಗಿ ಯಾರೋ ಕಿಸಕ್ಕನೆ ನಕ್ಕರು. ಒಬ್ಬಳು ಉತ್ತರಕೊಡುವ ಸಾಹಸಮಾಡಿದಳು :

"ತುಂಗವ್ನೋರ ಕ್ಲಾಸಿಗೆ ಸ್ಲೇಟುಕಡ್ಡಿ ಬೇಕಾಗುತ್ತೋ ಇಲ್ವೋಂತ ತಳ್ಲಿಲ್ಲ ದೊಡ್ಡಮ್ಮ."

ಗದರಿಸಬೇಕೊ ನಕ್ಕು ಸುಮ್ಮನಾಗಬೇಕೊ ಎಂದು ಒಂದುಕ್ಷಣ ತಿಳಿಯದೆ ಸರಸಮ್ಮ ಮೌನವಾಗಿದ್ದರು. ಆ ಕ್ಷಣ ಮುಗಿದೊಡನೆ ಅವರು ನಕ್ಕು ನುಡಿದರು :

"ಖಿಲಾಡಿಗಳು! ಹೋಗಿ! ಸ್ಲೇಟು-ಬಳಪ ತಗೊಂಡ್ಬನ್ನಿ ಎಲ್ರೂ !"

ಧಡಧಡನೆ ಹುಡುಗಿಯರು, ಚಾಪೆಗಳನ್ನು ಬಿಚ್ಚಿ ಇಟ್ಟಿದ್ದ ಜಾಗಕ್ಕೆ ಹೋಗಿ ಸ್ಲೇಟುಗಳನ್ನೆತ್ತಿಕೊಂಡರು.

ಆ ಬಳಿಕ ತರಗತಿಯ ಆರಂಭ.

ಗೋಡೆಗೆ ಒರಗಿಸಿದ್ದ ಮರದ ಕರಿಹಲಗೆಯಮೇಲೆ ಸುಣ್ಣದ ಕಡ್ಡಿಯಲ್ಲಿ ಸರಸಮ್ಮನ ನಿರ್ದೇಶದಂತೆ ತುಂಗಮ್ಮ ಬರೆದಳು:

'ಓಂ ಶ್ರೀ ಗಣಪತಾಯೆ ನಮಃ'

ಆ ಬಳಿಕ ಅಕ್ಷರಮಾಲೆ ಒಂದೊಂದಾಗಿ.

ಹುಡುಗಿಯರೂ ಹಿಂದೆ ಎಷ್ಟೊ ಸಾರೆ ಬರೆದಿದ್ದುದನ್ನೇ ಸ್ಲೇಟಿನಮೇಲೆ ಒಂದೊಂದಾಗಿ ಬರೆದು ಕೊಂಡರು – ತಪ್ಪಾಗಿಯೂ ಸರಿಯಾಗಿಯೂ. ಆ ಬಳಿಕ ತಿದ್ದುವ ಕೆಲಸ....

ನೋಡುತ್ತಲೇ ನಿಂತಿದ್ದರು ಸರಸಮ್ಮ. ತುಂಗಮ್ಮನ ದಕ್ಷತೆಯ ವಿಷಯದಲ್ಲಿ ಅವರಿಗೆ ಯಾವ ಸಂದೇಹವೂ ಇರಲಿಲ್ಲ.

ಅಭಯಧಾಮದಿಂದ ಏನುಪ್ರಯೋಜನವಾಗಿದೆ? ಯಾರಾದರೂ ಕೇಳಲಿ ಇನ್ನು ಆ ಪ್ರಶ್ನೆಯನ್ನು! ಸರಸಮ್ಮ ಆಗ ಎದೆಯುಬ್ಬಿಸಿ ತುಂಗಮ್ಮನತ್ತ ಬೊಟ್ಟುಮಾಡಿ ಹೇಳುವರು:

"ನೋಡಿದಿರಾ? ಈ ಕೆ – ಇವರು – ತುಂಗಮ್ಮ ಅಂತ. ನನ್ನ ಸಹಾಯಿಕೆ. ಒಂದು ಕಾಲದಲ್ಲಿ ಅಭಯ ಯಾಚಿಸಿ ಇಲ್ಲಿಗೆ ಬಂದಿದ್ದರು!"

ಹಾಗೆ ಯೋಚಿಸುತ್ತಲಿದ್ದ ಸರಸಮ್ಮ ತರಗತಿಯತ್ತ ಗಮನ ಕೊಡುವುದನ್ನೇ ಮರೆತರು. ನಿಂತಲ್ಲಿಂದ ಚಲಿಸಿ ಆಕೆ ತಮ್ಮ ಕೊಠಡಿಯತ್ತ ಬಂದರು....

....ಅಭಯಧಾಮದ ಆಡಳಿತ ಸಮಿತಿಗೆ ಹೊಸಕಾರ್ಯದರ್ಶಿನಿಯ ಆಯ್ಕೆಯಾದ ಮೇಲೆ, ಸರಸಮ್ಮನ ಹಳೆಯ ಆಸೆಗಳು ಮತ್ತೊಮ್ಮೆ ಚೇತರಿಸಿಕೊಂಡಿದ್ದುವು. ಹಣವನ್ನಾದರೊ ಸಮಾಜದ ಹಲವಾರು ದಾನಶೀಲರಿಂದ ಕೇಳಿ ಬೇಡಿಕಾಡಿ ಪಡೆಯುವುದು ಸಾಧ್ಯವಿತ್ತು. ಆದರೆ ಜನಸಂಪತ್ತು, ಸಂಬುಗೆಯ ಪ್ರಾಮಾಣಿಕರಾದ ಉತ್ಸಾಹಿ ಕಾರ್ಯಕರ್ತರ ಸಂಪತ್ತು, ಅವರಿಗಿರಲಿಲ್ಲ. ಆದುದರಿಂದಲೆ, ಚೇತರಿಸಿಕೊಂಡಿದ್ದ ಆಸೆಗಳನ್ನೂ ಅದುಮಿ ಹಿಡಿಯದೆ ಅನ್ಯಗತಿ ಇರಲಿಲ್ಲ.

ಈಗ ಮತ್ತೆ ಆಸೆಗಳು ತಲೆ ಎತ್ತಿದುವು.

ಅಭಯಧಾಮದ ಚಟುವಟಿಕೆಗಳನ್ನು ವಿಸ್ತರಿಸಬೇಕು. ಬಟ್ಟೆಗೆ ಬಣ್ಣ

ಹಾಕುವ, ಸೀರೆಗಳಮೇಲೆ ಚಿತ್ತಾರ ಒತ್ತುವ, ಉದ್ಯೋಗ ಆರಂಭಿಸಬೇಕು. ಕೆಲವು ಹುಡುಗಿಯರಿಗಾದರೂ ನಿರ್ದಿಷ್ಟವಾದ ಹೆಚ್ಚಿನ ವಿದ್ಯಾಭ್ಯಾಸ ದೊರೆಯುವಂತೆ ಮಾಡಬೇಕು. ಆದಷ್ಟು ಬೇಗನೆ ತಮ್ಮ ಅಭಯಧಾಮ ದಿಂದ ಒಬ್ಬಳು ಹುಡುಗಿಯಾದರೂ ಎಸ್. ಎಸ್. ಎಲ್. ಸಿ. ಪರೀಕ್ಷೆ ಕಟ್ಟ ಬೇಕು. ತಮ್ಮ ನಿರ್ದೇಶನದ ಕೆಳಗೆ, ಅಭಯಧಾಮದ ಹುಡುಗಿಯೊಬ್ಬಳು ವಿಶ್ವವಿದ್ಯಾನಿಲಯದ ಪದವೀಧರಳೂ ಆಗುವಂತಾದರೆ!

ಅಷ್ಟು, ಮುಂದಿನ ಕನಸಾದರೆ, ಇಂದೇ ನೆನಸಾಗಬೇಕಾದ ಬೇರೊಂದು ವಿಷಯವಿತ್ತು. ಅಭಯಧಾಮದ ಆಶ್ರಯದಲ್ಲಿ ಹೆರಿಗೆಯಾದಾಗಲೆಲ್ಲ, ಮಕ್ಕಳನ್ನು ಯಾವಾಗಲೂ ಅನಾಥಾಲಯಕ್ಕೇ ಕಳುಹುವುದು ನಡೆದು ಬಂದಿದ್ದ ಪದ್ಧತಿ. ಹಾಗೆ ಮಕ್ಕಳನ್ನು ಕೊಟ್ಟಾಗಲೆಲ್ಲ ಸರಸಮ್ಮನಿಗೆ ತಡೆಯ ಲಾಗದ ಸಂಕಟವಾಗುತಿತ್ತು. ಅದರ ಬದಲು, ಅಭಯಧಾಮಕ್ಕೇ ಸಂಬಂಧಿ ಸಿದ ಬಾಲ ಆಶ್ರಮವೊಂದಿದ್ದರೆ? ಅಷ್ಟಲ್ಲದೆ, ಬೀದಿಯಲ್ಲಿ 'ಜೇವಾರ್ಸಿ' ಗಳಾಗಿ ಅಲೆಯುವ ಎಳೆಯ ಹುಡುಗರನ್ನು ಸುಧಾರಿಸುವುದಕ್ಕೂ ಅದು ಸಹಾಯಕವಾಗುವುದು. ಅಭಯಧಾಮದ ಸುತ್ತಲೂ ಇದ್ದ ಖಾಲಿ ಜಾಗದಲ್ಲಿ ಇನ್ನೊಂದು ಪುಟ್ಟ ಕಟ್ಟಡವನ್ನೂ ಕಟ್ಟಿಸುವುದು ಆಗದ ಮಾತೇನೂ ಅಲ್ಲ....

ಅದಕ್ಕಿಂತಲೂ ಪ್ರಕೃತಕ್ಕೆ ಮುಖ್ಯವೆಂದರೆ, ಕಟ್ಟಡದ ಸುತ್ತಲೂ ನಡೆಸಬೇಕಾದ ತರಕಾರಿ ಕೃಷಿ. ಈಗಿರುವ ಕಿರುಗೋಡೆಯ ಮೇಲೆ ಎತ್ತರದ ಮುಳ್ಳುಬೇಲಿಯನ್ನು ಏರಿಸಿದರೆ, ಅಂತಹ ಬೆಳೆ ಸಾಧ್ಯ. ಅದರಿಂದ, ಅಭಯಧಾಮದ ಈಗಿನ ಖರ್ಚು ಉಳಿಯುವುದಷ್ಟೇ ಅಲ್ಲ, ತರಕಾರಿಯ ಮಾರಾಟದಿಂದ ಸಂಪಾದನೆಯೂ ಆಗುವುದು....

—ಅದನ್ನೆಲ್ಲ ಸರಸಮ್ಮ ಮನಸಿನಲ್ಲಿ ಮೆಲುಕು ಹಾಕುತಿದ್ದಾಗಲೆ, ಪಕ್ಕದ ಕಿಟಕಿಯ ಎಡೆಯಿಂದ ಸ್ವರ ಕೇಳಿಸಿತು:

"ಪೋಸ್ಟ್!"

ಅದರ ಜತೆಯಲ್ಲಿ ತೆಳ್ಳಗಿನ ಲಕೋಟೆ ಕೊಠಡಿಯೊಳಕ್ಕೆ ಬಿದ್ದ ಸದ್ದು.

ಬಂದುದೊಂದೇ ಲಕೋಟೆ. ಸರಸಮ್ಮನೆದ್ದು ಅದನ್ನೆತ್ತಿಕೊಂಡರು. ತಪ್ಪು ತಪ್ಪು ಇಂಗ್ಲಿಷಿನಲ್ಲಿ ಅವರ ಹೆಸರನ್ನೇ ಮೇಲೆ ಬರೆದಿದ್ದರು. ಅಂಚೆ ಚೀಟಿಯ ಮೇಲೆ ಸಿಟಿ ಪೋಸ್ಟ್ ಆಫೀಸಿನ ಮುದ್ರೆಇತ್ತು.

'ಇಲ್ಲಿಂದಲೇ ಯಾರೋ ಬರೆದಿದಾರೆ'

—ಎಂದುಕೊಂಡರು ಸರಸಮ್ಮ. ಪ್ರತಿಸಾರೆ ಪ್ರತಿಯೊಂದು ಕಾಗದ ಒಡೆದಾಗಲೂ ಕುತೂಹಲದಿಂದಲೇ ಇರುವುದು ಅವರ ಸ್ವಭಾವ. ಈಸಲವೂ ಅಷ್ಟೇ ಆತುರದಿಂದ ಲಕೋಟೆಯನ್ನು ಅವರು ಒಡೆದರು.

ಬರೆದವನ ಸಹಿಯನ್ನು ನೋಡಿ, ಮೊದಲ ವಾಕ್ಯವನ್ನೋದಿ, ಸರಸಮ್ಮ ಮುಗುಳುನಕ್ಕರು.

ಅಂತಹ ಒಳ್ಳೆಯದಿನದಲ್ಲಿ ಸ್ವಾರಸ್ಯಪೂರ್ಣವಾದ ಸಮಾಚಾರ ವನ್ನಲ್ಲದೆ ಬೇರೇನನ್ನಾದರೂ ಅವರು ನಿರೀಕ್ಷಿಸುವುದು ಸಾಧ್ಯವಿತ್ತೆ?

ಆತ ಬರೆದಿದ್ದ:

"ತಾವುಗಳು ಹೋದ ವರ್ಷ ಡಿಶೇಂಬರ್‌ನಲ್ಲಿ ತಿಳಿಸಿದ ಪ್ರಕಾರ ಈಗ ಪುನಃ ಬರೀತಾ ಇದ್ದೇನೆ. ನನ್ನ ಬಯಕೆಯನ್ನು ಪೂರೈಸುವುದು ತಮ್ಮ ಗಳನ್ನೇ ಹೊಂದಿಕೊಂಡಿದೆ. ಬೇರೆ ಯಾರೂ ಇಲ್ಲದೆ ತಮ್ಮನ್ನು ಶರಣು ಹೊಕ್ಕಿದ್ದೇನೆ. ನಮ್ಮ ಸಾಹೇಬರು ಕೂಡಾ ಅದೇಸರಿ ಅಂತಾ ಹೇಳಿದ್ದಾರೆ. ಆದ್ದರಿಂದ ತಾವುಗಳು ದೊಡ್ಡ ಮನಸ್ಸುಮಾಡಿ ಈಸಲಿ ನಿರಾಶೆಪಡಿಸಬಾರದು. ನಾಡಿದ್ದು ಘಳಿಗೆ ಸರಿಯಾಗಿದೆ ಅಂತಾ ಜೋಯಿಸರು ಅಭಿಪ್ರಾಯಪಟ್ಟಿ ದ್ದಾರೆ. ಆಗ ಹೊರಟು ತಮ್ಮಗಳ ಭೇಟಿಗೆ ಬರುತ್ತೇನೆ. ಹೆಚ್ಚು ಬರೆಯಲು ಶಕ್ತನಲ್ಲ,

ಇಂತಿ ಸೇವಕ

ಮಹಾಬಲ."

ಸಹಿಯನ್ನಷ್ಟೆ ಇಂಗ್ಲಿಷಿನಲ್ಲಿ ಹಾಕಿದ್ದ ಈ ಮಹಾಬಲ ವಿಚಿತ್ರ ಮನುಷ್ಯನಾಗಿದ್ದ. ಆತ ಆದಾಯ ತೆರಿಗೆಯ ಕಚೇರಿಯಲ್ಲಿ ಜವಾನ. ಕೈ ಹಿಡಿದ ಹೆಂಡತಿ ಒಂದು ವರ್ಷದ ಹಿಂದೆ ತವರುಮನೆಗೆ ಓಡಿ ಹೋದವಳು ತಿರುಗಿ ಬರಲಿಲ್ಲ. ಅವಳನ್ನು ತಾಯಿತಂದೆಯರು ಕಳುಹಿಸಲೂ ಇಲ್ಲ. ಕರೆಯಲು ಹೋದ ಮಹಾಬಲನನ್ನು ಅವನ ಅತ್ತೆ, "ನಮ್ಮ ಮಗಳಂಥಾ ರತ್ನಾನ ಕಟ್ಕೊಣೋಕೂ ಭಾಗ್ಯ ಬೇಕು ಕಣಪ್ಪೋ," ಎಂದು ಬಯ್ದು ಅವನನ್ನು ಓಡಿಸಿಬಿಟ್ಟಿದ್ದಳು.

ದೊಡ್ಡಸಾಹೇಬರ ಕಚೇರಿಯಲ್ಲಿ ಜವಾನನಾಗಿರುವವನಿಗೆ ಅಂತಹ ಅವಮಾನವೆಂದರೆ!

ಸಾಹೇಬರ ಮುಂದೆಯೂ ರಾಣಿಸಾಹೇಬರ ಮುಂದೆಯೂ ಮಹಾಬಲ ತನ್ನ ಗೋಳು ತೋಡಿಕೊಂಡು ಗೋಗರೆದ.

"ಎಂಗಾದ್ರೂ ಮಾಡಿ ಒಂದು ಎಣ್ಣು ಕೊಡ್ಸಿ"

—ಎಂದು ರಾಣಿ ಸಾಹೇಬರ ಮುಂದೆ ಪ್ರತ್ಯೇಕವಾಗಿ ವಿನಂತಿಮಾಡಿದ. ಆ ಸಾಯಂಕಾಲ ರಾಣಿ ಸಾಹೇಬರು 'ಸಮಾಜ'ದಲ್ಲಿ ನೆರೆದಿದ್ದ ಸ್ನೇಹಿತೆಯರ ಮುಂದೆ ತಮ್ಮ ಜವಾನನ ಕತೆ ಹೇಳಿದರು. ಎಲ್ಲರೂ ಬಿದ್ದು ಬಿದ್ದು ನಕ್ಕಿದ್ದೂ ನಕ್ಕಿದ್ದೇ.

ಆದರೂ ಒಬ್ಬ ಚದುರೆಗೆ ಒಂದು ಯೋಚನೆ ಹೊಳೆದು, "ಐ ಸೇ" ಎಂದರು.

ಹುಬ್ಬುಗಳೇ ಪ್ರಶ್ನಾರ್ಥಕ ಚಿಹ್ನೆಗಳಾಗಿ ಉತ್ತರದ ಹಾದಿ ನೋಡಿದರು ಸುತ್ತುಮುತ್ತಲಿದ್ದವರು.

"ಈ ಜವಾನನಿಗೆ ನಾವು ಸಹಾಯ ಮಾಡ್ಲೇಬೇಕು. ಇದು ನಮ್ಮ ಅಭಿಮಾನದ ಪ್ರಶ್ನೆ. ಏನಂತೀರ?"

"ಯಾರ ಮಗಳ್ನ ನೋಡಿ ಇಟ್ಟಿದ್ದೀರಿ?"

"ನಮ್ಮ ಕಮಲನ್ನಿಗೆ ಹೇಳೋಣ. ಸಾರ್ವಜನಿಕಸೇವೆ ಅಂತ ಸಮಾಜಕ್ಕೆ ಬರೋದನ್ನೂ ಬಿಟ್ಬಿಟ್ಟಿದಾರಲ್ಲ. ಅವರ ಅಭಯಧಾಮದಿಂದ ಒಂದು ಹುಡುಗೀನಾದರೂ ಕೊಡಿಸ್ಲಿ. ಏನಂತೀರ?"

ಆ ಯೋಚನೆ ಸರಿಯಾಗಿಯೇ ತೋರಿತು ಎಲ್ಲರಿಗೂ.

"ಆ ಅಭಯಧಾಮದಲ್ಲಿ ಹಾಗಾಗುವುದೂ ಉಂಟಂತೆ. ಈಗಾಗ್ಲೇ ಎಷ್ಟೋ ಮದುವೆಗಳೂ ಆಗಿವೆಯಂತಲ್ಲ."

"ಹೌದು. ಹೌದು."

ಆದರೆ ಒಬ್ಬರಿಗೆ ಮಾತ್ರ ಒಂದೇ ಸಂದೇಹವಿತ್ತು.

"ಈ ಹುಡುಗೀರೆಲ್ಲ ಪರಿಶುದ್ಧವಾಗಿರ್ತಾರಾ? ಇಸ್ಸಿ!"

ಶುದ್ಧಾಶುದ್ಧತೆಯ ಪ್ರಶ್ನೆ ಬಂದಾಗ ಯಾವಾಗಲೂ ರೇಗಾಡುತ್ತಿದ್ದವರೊಬ್ಬರು ಸ್ವರವೇರಿಸಿ ಕೇಳಿದರು:

" ಅದೇನ್ರಿ ಅದು ? ಗಂಡಸರೆಲ್ಲ ಪರಿಶುದ್ಧವಾಗಿರ್ತಾರೊ ?''

" ಹಾಗಲ್ಲ. ಕೆಟ್ಟರೋಗ ಏನಾದ್ರೂ—"

" ಪಾಪ! ಗಂಡಸ್ರಿಗೂ ಈ ರೋಗಕ್ಕೂ ಏನು ಸಂಬಂಧ ಇಲ್ಲ ಅಲ್ವೆ?"

ಅವರು 'ರೋಗ' ಎನ್ನುವುದಕ್ಕೂ ಆ ಬಡಾವಣೆಯ ಲೇಡಿ ಡಾಕ್ಟರು - ಸಮಾಜದ ಸದಸ್ಯೆ - ಒಳಬರುವುದಕ್ಕೂ ಸರಿಹೋಯಿತು.

" ಆ ವಿಷಯ ಡಾಕ್ಟರನ್ನ ಕೇಳಿ "

—ಎಂದರು ಯಾರೋ ಒಬ್ಬರು.

ರೋಗದ ಹೆಸರು ತಿಳಿದು ಡಾಕ್ಟರಮ್ಮನಿಗೆ ತಮಾಷೆ ಎನ್ನಿಸಿತು.

" ನಾವಿರೋದು ಯಾತಕಪ್ಪ ಮತ್ತೆ? ಏನೂ ಹೆದರ್ಕೋಬೇಡಿ. ಎಂಥ ರೋಗ ಇದ್ದರೂ ಗುಣಪಡಿಸ್ತೀವಿ."

ಅಷ್ಟು ಹೇಳಿ ಆ ಡಾಕ್ಟರು ಸುಮ್ಮನಿರಲಿಲ್ಲ. ತುಂಟನಗೆ ನಕ್ಕು, ಕುಳಿತಿದ್ದವರನ್ನೆಲ್ಲ ನಿಧಾನವಾಗಿ ನೋಡುತ್ತ ಅಂದರು :

" ಈಗ ಹೇಳಿ ಯಾವಕಾಹಿಲೆ ? ಯಾರಿಗೆ ಏನಾಗಿದೆ ?"

ಆ ಮಹಿಳಾ ಮಣಿಗಳ ಮುಖಗಳು ಕೆಂಪಗಾದುವು. ಅವರಲ್ಲೊಬ್ಬರು ನಸುನಕ್ಕು ಅಂದರು :

" ಡಾಕ್ಟರ್ ! Dont be silly !"

" ಅದೇನೊ ಅಭಯಧಾಮದಲ್ಲಿ ಒಳ್ಳೆ ಹುಡುಗೀರು ಸಿಗ್ತಾರಂತಲ್ಲೊ ಮಹಾಬಲ, ಮದುವೆ ಮಾಡ್ಕೊಂಬಿಡು. ಖರ್ಚೂ ಹೆಚ್ಚಾಗಲ್ಲ."

—ಎಂದು ಸಾಹೇಬರ ಹೆಂಡತಿ ಆ ರಾತ್ರೆ ತಮ್ಮ ಜವಾನನಿಗೆ ಹೇಳಿದರು.

ಮಹಾಬಲ ಅಭಯಧಾಮವನ್ನು ಪತ್ತೆಹಚ್ಚಿ ಅದರ ಸುತ್ತ ಮುತ್ತ ಸುಳಿದುದೂ ಆಯಿತು. ಆದರೆ ಮುಂದುವರಿಯುವ ಕ್ರಮ ಅವನಿಗೆ ಗೊತ್ತಾಗಲಿಲ್ಲ. ಮತ್ತೆ ಬಂದು 'ಅಮ್ಮಾವರನ್ನೇ' ಪೀಡಿಸಿದ.

ಅವರು ಅಭಯಧಾಮದ ಕಾರ್ಯದರ್ಶಿನಿ ಕಮಲಮ್ಮನಿಗೆ ಕಾಗದ ಬರೆದು ಕೊಟ್ಟರು. ಅದಾದಮೇಲೆ ಒಂದು ತಿಂಗಳ ಅನಂತರ, ಡಿಸೆಂಬರ್‌ನಲ್ಲಿ ಜವಾನ ಮಹಾಬಲ 'ನವಜವಾನ'ನಾಗಿ ಅಭಯಧಾಮಕ್ಕೆ ಭೇಟಿಕೊಟ್ಟ.

"ಈ ಸಲ ಸುಮ್ಮನೆ ನೋಡಿಕೊಂಡು ಹೋಗಿ, ಹುಡುಗಿಯರೂ ನಿಮ್ಮನ್ನ ನೋಡಲಿ."

"ಎಂದಿದ್ದರು ಸರಸಮ್ಮ.

ತನ್ನ ಅಭಿಮಾನಕ್ಕೆ ಧಕ್ಕೆ ತಗಲಿದಂತಾಗಿ ಆತ ಕೇಳಿದ್ದ :

"ಹುಡುಗೀರು ನನ್ನ ನೋಡೋದಂದ್ರೇನಮ್ಮ? ನಾನು ನೋಡಿ ಮೆಚ್ಕೊಂಡ್ರೆ ಸಾಲ್ದಾ ?"

ಸರಸಮ್ಮನಿಗೆ ನಗು ಬಂದಿತ್ತು. ಅಂತೂ ಉಪಾಯವಾಗಿ ಆದಿನ ಅವನನ್ನು ಬೀಳ್ಕೊಟ್ಟಿದ್ದರು.

ಮತ್ತೆ ಈಗ ಈ ಕಾಗದ.

ಒಮ್ಮೆ ಅಂಟಿಕೊಂಡಮೇಲೆ ಅವನು ಬಿಟ್ಟು ಬಿಡುವ ಲಕ್ಷಣ ತೋರಲಿಲ್ಲ. ಆದಿನ ಆತ ಬಂದು ಹೋದ ಬಳಿಕ ಆ ಭೇಟಿಯ ಉದ್ದೇಶ ತಿಳಿದಾಗ, ಸಾಮಾನ್ಯವಾಗಿ ಎಲ್ಲ ಹುಡುಗಿಯರೂ ಅವನನ್ನು ಕುರಿತು ಗೇಲಿ ಮಾಡಿ ಹೊಟ್ಟೆ ಹುಣ್ಣಾಗುವಂತೆ ನಕ್ಕಿದ್ದರು. ಆದರೆ ಒಬ್ಬಳು-ಕನಕಲಕ್ಷ್ಮಮ್ಮ-ಇತರರಷ್ಟು ನಗದೆ ಮೌನವಾಗಿಯೇ ಇದ್ದಳೆನ್ನಬೇಕು. ಅದನ್ನು ಗಮನಿಸಿದ ಹುಡುಗಿಯರು, ಕನಕಲಕ್ಷ್ಮಮ್ಮನನ್ನು ನಗೆಚಾಟಿಯಿಂದ ಹೊಡೆದು ಬಡೆದು, ಆಕೆಯನ್ನೆ ಜವಾನ ಮಹಾಬಲನ ಹೆಂಡತಿಯಾಗಿ ಘೋಷಿಸಿದ್ದರು.

ತನಗೆ ಅವಮಾನವಾಯಿತೆಂದು ಎಲ್ಲರೆದುರು ಆಗ ಕನಕಲಕ್ಷ್ಮಮ್ಮ ಅತ್ತಿದ್ದಳು.

ಆದರೆ ಅವಳದೃಷ್ಟಿಗೆ ಮಹಾಬಲ ಚೆನ್ನಾಗಿಯೇ ಕಂಡಿದ್ದ. ಆತ ತನ್ನ ಗಂಡನೆಂದು ಹುಡುಗಿಯರು ಗೇಲಿ ಮಾಡಿದುದು ಹಿತಕರವಾಗಿಯೂ ಅವಳಿಗೆ ತೋರಿತ್ತು.

ಸರಸಮ್ಮನ ಸೂಕ್ಷ್ಮದೃಷ್ಟಿಗೆ ಆ ಹುಡುಗಿಯ ಪರಿಸ್ಥಿತಿ ಗೋಚರವಾಗದೆ ಹೋಗಿರಲಿಲ್ಲ.

ತಮ್ಮನ್ನೆ ನಂಬಿದ್ದ ಮಹಾಬಲನ ಕೈ ಬಿಡಲು ಸರಸಮ್ಮನಿಗೆ ಇಷ್ಟವಾಗಲಿಲ್ಲ! ಮದುವೆ ಕೂಡಿಸಿಕೊಡುವುದೆಂದರೆ ಯಾರಿಗೆ ತಾನೆ ಸಂತೋಷವಾಗದೆ ಇದ್ದೀತು? ಅದರಲ್ಲೂ ಅಭಯಧಾಮದ ಒಬ್ಬಳು ಹುಡುಗಿಗೇ

ವರ ದೊರಕಿಸುವುದೆಂದರೆ, ಅವರಿಗೆ ಹೆಚ್ಚು ಸಂತೋಷವಾಗಲೇ ಬೇಕಲ್ಲವೆ?

ಆ ಸಂಜೆ ಸರಸಮ್ಮ ಕನಕಲಕ್ಷ್ಮಮ್ಮನನ್ನು ಪ್ರತ್ಯೇಕವಾಗಿ ಕರೆದು ಮಾತನಾಡಿದರು:

"ಆದಿನ ಬಂದಿದ್ರಲ್ಲೆ, ಮಹಾಬಲ ಅಂತ, ನೆನಪಿದ್ಯಾ?"

ಆಕೆಗೆ ನೆನಪಿತ್ತು. ಆದರೆ ಹಾಗೆಂದು ಒಪ್ಪಿಕೊಳ್ಳಲು ಅವಳಿಗೆ ನಾಚಿಕೆಯಾಯಿತು.

"ಯಾರು, ಯಾವಾಗ, ದೊಡ್ಡಮ್ಮ?"

"ಓ—ಮರೆತೇ ಹೋಯ್ತೇನೆ? ಅಷ್ಟುಬೇಗ? ಹುಂ!........ ಹೋದ ಡಿಸೆಂಬರ್‌ನಲ್ಲಿ ಬಂದಿರ್ಲಿಲ್ವೆ ಒಬ್ರು—ಇನ್‌ಕಂಟ್ಯಾಕ್ಸ್ ಕಚೇರಿಯವರು?"

ಕನಕಲಕ್ಷ್ಮಮ್ಮನ ಮುಖ ಲಜ್ಜೆಯಿಂದ ಕೆಂಪಗಾಯಿತು.

"ಹೂಂ."

"ನಾಡಿದ್ದು ತಿರ್‍ಗಾ ಬರ್ತಾರಂತೆ."

ಅದಕ್ಕೆ?-ಎಂದು ಪ್ರಶ್ನಿಸುವ ಅರ್ಥದಲ್ಲಿ ಕನಕಲಕ್ಷ್ಮಮ್ಮ ಸರಸಮ್ಮನ ಮುಖ ನೋಡಿದಳು.

"ಏನು ಉತ್ತರ ಕೊಡೋಣ?"

ತನ್ನನ್ನು ಯಾಕೆ ಕೇಳತಿದ್ದಾರೆಂದು ಕನಕಲಕ್ಷ್ಮಮ್ಮನಿಗೆ ಆಶ್ಚರ್ಯವಾದರೂ ತನ್ನನ್ನು ಒಬ್ಬಳನ್ನೇ ಕೇಳುತ್ತಿರುವರಲ್ಲಾ ಎಂಬ ಸಮಾಧಾನವೂ ಆಯಿತು.

ಸರಸಮ್ಮ ಮೃದುವಾಗಿ ಆಕೆಯ ಭುಜಮುಟ್ಟಿ ಒರಗು ಬೆಂಚಿನಮೇಲೆ ಕುಳ್ಳಿರಿಸಿದರು.

ಆದಾಯ ತೆರಿಗೆ ಕಚೇರಿಯವರು ಎಂದಿದ್ದರು ಸರಸಮ್ಮ- ಜವಾನ, ಎಂದಿರಲಿಲ್ಲ. ಆದರೂ ಮಹಾಬಲನ ನಿಜವಾದ ಉದ್ಯೋಗವೇನೆಂಬುದು ಕನಕಲಕ್ಷ್ಮಮ್ಮನಿಗೆ ತಿಳಿದಿತ್ತು.

ಜಾತಿಯ ತೊಂದರೆ ಇರಲಿಲ್ಲ. ಒಂದೇ ಜಾತಿಯವರಾಗಿದ್ದರು ಅವರಿಬ್ಬರೂ. ಯಾವುದರಲ್ಲಿ ಏನುಕಡಿಮೆ ಮಹಾಬಲನಿಗೆ? ತಕ್ಕಷ್ಟು

ವಿದ್ಯಾವಂತ. ಸಂಪಾದನೆಯೂ ತಕ್ಕನುಟ್ಟಿಗಿದೆ. ಏನೋ ವಿರಸವಾಗಿ ಮೊದಲ ಹೆಂಡತಿ ಹೊರಟುಹೋದಳು. ಅವಳಿಗೆ ಭಾಗ್ಯವಿರಲಿಲ್ಲ. ಈಗ....

—ಹೀಗೆ ಬಲು ನಿಧಾನವಾಗಿ ಸರಸಮ್ಮ ವಿವರಿಸಿದರು.

ಎರಡು ವರ್ಷಗಳಿಗೆ ಹಿಂದೆ ಕಾಹಿಲೆಯ ಜೀವಿಯಾಗಿಯೆ ಕನಕ ಲಕ್ಷ್ಮಮ್ಮ ಅಭಯಧಾಮಕ್ಕೆ ಬಂದಿದ್ದಳು. ಅರಸೀಕೆರೆಯವಳು. ಛಿದ್ರವಾದೊಂದು ರೈತ ಕುಟುಂಬಕ್ಕೆ ಸೇರಿದಾಕೆ. ಬಾಲ್ಯದಲ್ಲೆ ಆಕೆಗೆ ಮದುವೆಯಾಗಿತ್ತು. ಯಾವುದೋ ಸಣ್ಣ ಜಗಳ ದೊಡ್ಡದಾಗಿ ಮಾವನ ಮನೆಯವರ ಮನಸ್ಸು ಕಹಿಯಾಯಿತು. ಸೊಸೆಯನ್ನು ಅವರು ಕರೆಸಿಕೊಳ್ಳಲೇ ಇಲ್ಲ. ಹಾಗೆ ಹಿರಿಯರಿಗಾಗಿ ತನ್ನನ್ನು ಬಿಟ್ಟ ಆ ಗಂಡನಿಗೆ ಬೇರೊಂದು ಮದುವೆಯೂ ಆಗಿಹೋಯಿತು. ಕನಕಲಕ್ಷ್ಮಮ್ಮ ತನ್ನ ಮನೆ ಬಿಟ್ಟು ಹೋದಳು. ಬೆಂಗಳೂರು ನಗರದಲ್ಲಿ ಕೂಲಿನಾಲಿ ಮಾಡಿ ಜೀವನ....ಅಲ್ಲಿ ಆಕೆ ತುಳಿಯಬೇಕಾಗಿ ಬಂದ ದಾರಿ....ಬೇರೆ ಜನ ಅದನ್ನು 'ಅಡ್ಡದಾರಿ' ಎಂದು ಕರೆದಿದ್ದರು.

....ಸಂಕಟಪಡುತಿದ್ದ ಆಕೆಗೆ ಯಾರೋ ಅಭಯಧಾಮದತ್ತ ಬೊಟ್ಟು ಮಾಡಿದ್ದರು. ತನ್ನ ಪರಿಚಿತರು ಯಾರೂ ಇಂಥದೇ ಎಂದು ಹೇಳಲಾಗದ ಹುಣ್ಣುಗಳೊಡನೆ ಆಕೆ ಅಲ್ಲಿಗೆ ಬಂದಿದ್ದಳು.

ಸರಸಮ್ಮ ಪೂರ್ಣ ಲಕ್ಷ್ಯದಿಂದ ಚಿಕಿತ್ಸೆಯ ಏರ್ಪಾಟು ಮಾಡಿದರು. ಆರೆಂಟು ತಿಂಗಳಲ್ಲೆ ಕನಕಲಕ್ಷ್ಮಮ್ಮ ಪೂರ್ತಿ ಗುಣಹೊಂದಿದಳು....

....ಈಗ ಆಕೆಯ ಮುಂದಿದ್ದುದು - ಬಾಳ್ವೆಯ ಮಹಾದುರ್ಗದೊಂದು ತೆರೆದಿದ್ದ ಬಾಗಿಲು. ಒಳಹೋಗಲೆ? ಬೇಡವೆ? ಎಂದು ಶಂಕಿಸುತಿದ್ದಳಾಕೆ.

ಸರಿಯಾದ ನಿರ್ಧಾರಕ್ಕೆ ಬರಲು ನೆರವಾಗುವಂತೆ ಮಾತನಾಡಿದರು ಸರಸಮ್ಮ:

"ನೋಡು ಮಗೂ. ಇದೀಗ ಪರಿಸ್ಥಿತಿ. ನನ್ನ ಕೇಳಿದರೆ ನೀನು ಒಪ್ಪಿಕೊಳ್ಳೋದು ವಾಸಿ. ಎಷ್ಟು ದಿನ ಅಂತ ಹೀಗೇ ಇರ್ತೀಯಾ? ಯೋಚಿಸ್ನೋಡು."

ಮಾತನಾಡದೆಯೆ ಕುಳಿತಿದ್ದ ಕನಕಲಕ್ಷ್ಮಮ್ಮ ಕೊನೆಗೆ ಅಂದಳು:

"ನೀವು ಹೇಳಿದ ಹಾಗೆ ಮಾಡ್ತೀನಿ ದೊಡ್ಡಮ್ಮ."

"ಅಯ್ಯೊ ಹುಚ್ಚಿ! ಮದುವೆಮಾಡ್ಕೊಳ್ಳೋದು ನೀನು ಕಣೇ—ನಾನಲ್ಲ."

"..............."

"ಹೋಗಲಿ. ಈ ಸಂಬಂಧ ನಿನಗೆ ಒಪ್ಪಿಗೆಯೋ - ಅಷ್ಟು ಹೇಳು."

"ಹೂಂ...."

ಹಾಗೆ ಹೇಳಿ, ಹೊತ್ತಿದ್ದ ದೊಡ್ಡ ಭಾರವನ್ನು ಕೆಳಕ್ಕೆ ಇಳಿಸಿದ ಹಾಗಾಯಿತು ಕನಕಲಕ್ಷ್ಮಮ್ಮನಿಗೆ.

ತಾವು ಸಂಪಾದಿಸಿದ ಯಶಸ್ಸಿನಿಂದ ಸರಸಮ್ಮನ ಹೃದಯ ಹಗುರವಾಯಿತು.

ತುಂಗಮ್ಮನನ್ನು ಅವರು ಕರೆದು, ತಮಗೆ ಬಂದ ಕಾಗದದ ವಿಷಯವನ್ನೂ ಕನಕಲಕ್ಷ್ಮಮ್ಮ ವಿವಾಹಕ್ಕೆ ಒಪ್ಪಿರುವುದನ್ನೂ ತಿಳಿಸಿದರು.

"ಈ ವಿಷಯ ಎಲ್ಲರಿಗೂ ಹೇಳೋಣ್ವೆ ದೊಡ್ಡಮ್ಮ?"

"ಈಗ್ಲೆ ಬೇಡ ತುಂಗ. ಸುಮ್ಸುಮ್ನೆ ಗೋಳು ಹೊಯ್ಕೋತಾರೆ ಆ ಹುಡುಗೀನ."

ಆದರೆ ಸರಸಮ್ಮನ ಅಂತಹ ಮುಂಜಾಗರೂಕತೆಯಿಂದ ಯಾವ ಪ್ರಯೋಜನವೂ ಆಗಲಿಲ್ಲ. ದೊಡ್ಡಮ್ಮ ಏಕಾಂತದಲ್ಲಿ ಕನಕಲಕ್ಷ್ಮಮ್ಮನೊಡನೆ ಮಾತುಕತೆ ನಡೆಸಿದಾಗಲೇ ಊಹಾಪೋಹಗಳು ಆರಂಭವಾಗಿದ್ದುವು. ಕನಕಲಕ್ಷ್ಮಮ್ಮ ಹೊರಬಂದಮೇಲೆ ಅಡುಗೆಮನೆಗೆ ಅವಳನ್ನು ಪುಸಲಾಯಿಸಿ ಒಯ್ದು ಹಲವು ಹುಡುಗಿಯರು ಆಕೆಯನ್ನು ಮುತ್ತಿಕೊಂಡರು.

"ಏನು? ಅದೇನು? ಹೇಳೆ - ಹೇಳು!"

—ಎಂದು ಒಂದೇ ಸಮನೆ ಪೀಡಿಸಿ ಆಕೆ ಅಳುವಂತೆ ಮಾಡಿದರು.

ಒಬ್ಬಳೆಂದಳು:

"ಗೊತ್ತಾಯ್ತುಬಿಡು. ಮದುವೆ! ಅದಕ್ಕೇ ಇಷ್ಟೊಂದು ಜಂಭ!"

"ಮಹಾಬಲಪ್ಪ ಬತ್ರನ್ನೆ - ಹುಯ್!—"

—ಎಂದಳು ಇನ್ನೊಬ್ಬ ಹುಡುಗಿ.

ಆದರೆ ಹಾಗೆ ಅಳುತಿದ್ದಾಗಲೂ ಕನಕಲಕ್ಷಮ್ಮನ ಹೃದಯ ತುಂಬಿ ಬಂದಿತ್ತು. 'ಇನ್ನೆಷ್ಟು ದಿವಸ ಹೇಗೆ ಮಾಡೀರಾ ?' ಎಂಬ ಕೊಂಕು ಆಪ್ತಾನ ಮನಸ್ಸಿನಲ್ಲಿ ಮೂಡಿತು. 'ಆ ಮಹಾರಾಯ ಬಂದವನು ಎಲ್ಲಿಯಾದರೂ ಒಪ್ಪಿಕೊಳ್ಳದೇ ಹೋದರೆ–' ಎಂಬ ಭೀತಿಯೂ ಆಕೆಯನ್ನು ಕಾಡಿ ಎದೆ ಡವಡವನೆ ಹೊಡೆದುಕೊಂಡಿತು.

....ಮಾರನೆದಿನ ಭಾನುವಾರ. ತರಗತಿಗಳಿರಲಿಲ್ಲ. ಊಟವಾದಮೇಲೆ ಬಿಸಿಲಲ್ಲೆ ಸರಸಮ್ಮ ಕಾರ್ಯದರ್ಶಿನಿಯ ಮನೆಗೆ ಹೋದರು. ಅವರ ಸಹಾಯಿಕೆ ತುಂಗಮ್ಮ, ಬೀಗದಕ್ಕೆ ಗೊಂಚಲನ್ನು ಮಡಿಲಲ್ಲಿಟ್ಟು ಅಭಯ ಧಾಮದ ರಕ್ಷಣೆಯ ಭಾರ ಹೊತ್ತಳು.

ಸರಸಮ್ಮ ಹಿಂತಿರುಗಿ ಬಂದಾಗ ಚೆನ್ನಾಗಿ ಕತ್ತಲಾಗಿತ್ತು. ಬರುತ್ತ ಹಾದಿಯಲ್ಲಿ, ಅಭಯಧಾಮದಲ್ಲಿ ಏನಾಗಿದೆಯೋ ಎಂಬ ಭಯ ಅವರನ್ನು ಕಾಡಿಸದೆ ಇರಲಿಲ್ಲ.

ಆದರೆ ಎಲ್ಲವೂ ಎಂದಿನಂತೆಯೇ ಇದ್ದುವು ಆ ಅಭಯಧಾಮದಲ್ಲಿ. ಅವರು ಒಳಕ್ಕೆ ಕಾಲಿಟ್ಟಾಗ ಭಜನೆ ನಡೆಯುತಿತ್ತು.

'ಹೋದ ಕೆಲಸವಾಯಿತೆ ?' ಎಂದು ಕೇಳಬೇಕೆಂದು ತುಂಗಮ್ಮ ಯೋಚಿಸುತಿದ್ದಾಗಲೇ, ಕುಳ್ಳಿ ದಮಯಂತಿ ಏದುತ್ತ ಓಡಿ ಬಂದಳು.

"ದೊಡ್ಡಮ್ಮ! ಕನಕ ಕೇಳ್ತಿದಾಳೆ, ದಿನ ನಿಶ್ಚಯವಾಯ್ತೆ ಅಂತ."

ಅದೆಲ್ಲ ದಮಯಂತಿಯದೇ ಸೃಷ್ಟನೆ ಎಂಬುದು ಸ್ಪಷ್ಟವಾಗಿತ್ತು. ನಗುವನ್ನು ತಡೆದಿಟ್ಟು ಕೋಪವನ್ನು ನಟಿಸುತ್ತಾ ಸರಸಮ್ಮ ಅಂದರು:

"ತಾಳು! ನಿಶ್ಚಯಿಸ್ತೀನಿ ನಿಮಗೆ! ಭಜನೆ ಆಗ್ತಿದ್ದಾಗ ಎದ್ದು ಓಡಿ ಬಂದ್ಯಾ ? ಹೋಗು ವಾಪ್ಸು!"

ದಮಯಂತಿ ಜೋಲುಮುಖ ಹಾಕಿಕೊಂಡು ಮತ್ತೆ ಹಜಾರದತ್ತ ನಡೆಯ ಹೊರಟಳು. ಆದರೆ ಅಷ್ಟರಲ್ಲೆ ಮಂಗಳ ಹಾಡು ಆರಂಭವಾಯ್ತು.

"ನೋಡಿದಿರಾ ದೊಡ್ಡಮ್ಮ, ಭಜನೆ ಆಗೋಯ್ತು."

—ಎಂದಳು ದಮಯಂತಿ. ತಾನುಸೋಲಲಿಲ್ಲ ಎಂಬಧ್ವನಿಯಿತ್ತು ಆ ಮಾತಿನಲ್ಲಿ.

"ಹೂಂ. ಅದಕ್ಕೆ ?"

"ಈಗ ಹೇಳ್ತೀರಾ ನನ್ನ ಪ್ರಶ್ನೆಗೆ ಉತ್ತರ?"

"ಹೋಗ್ತೀಯೋ, ಇಲ್ಲ ಹಿಂಡ್ಬೇಕೋ ಕಿವಿ?"

ದಮಯಂತಿ ನಗುತ್ತ ಓಡಿ ಹೋದಳು.

"ಸೆಕ್ರೆಟರಿಯವರ್ನ ಒಪ್ಪಿಸಿ ಬಂದಿದೀನಮ್ಮ. ನಾಳೆ ಬರ್ತಾನೆ ಆತ-ಆ ಮಹಾಬಲ....ಅಂತೂ ಈ ಮದುವೆ ಸೀಸನ್ನಿನಲ್ಲಿ ನಮ್ಮದೂ ಒಂದು ಮದುವೆ ಆಗುತ್ತೆ!"

—ಎಂದು ಸರಸಮ್ಮ ತುಂಗಮ್ಮನೊಡನೆ ಅಂದರು.

....ಅದಾದ ಮರುದಿನ ಆತ ಬಂದ. ಆದಿನ ರಜಾಪಡೆದೇ ಮಹಾಬಲ ಹೊರಟಿದ್ದ ಹೆಣ್ಣು ನೋಡಲು, ತಲೆಯಮೇಲೆ ವಕ್ರವಕ್ರವಾಗಿ ಕ್ರಾಪು ಬಿಡಿಸಿತ್ತು. ಮಾಸಿದ ಖಾಕಿ ಪ್ಯಾಂಟು, ಬಿಳಿಯಷರಟು, ಯಾವುದೋ ಕಾಲದ ಯಾರೋ ಸಾಹೇಬರ ಉಣ್ಣೆಯ ಕೋಟೊಂದು, ಕಾಲಿಗೆ ಮೋಟಾರು ಟಯರಿನ ಚಪ್ಪಲಿ. ತನ್ನ ಬೆಪ್ಪುತನವನ್ನು ಮರೆಮಾಚಿ ಸೊಗಸುಗಾರನಾಗಿಯೆ ಕಾಣಿಸಿ ಕೊಳ್ಳಲು ಆತ ಮನಃ ಪೂರ್ವಕವಾಗಿ ಪ್ರಯತ್ನಿಸಿದ್ದ!

ಆತ ಬಂದೊಡನೆ ಅಲ್ಲಿ ನಗೆಯ ಕೋಲಾಹಲವೇ ಆಗ ಬೇಕಿತ್ತು. ಆದರೆ ಗಲಾಟೆ ಮಾಡಕೂಡದು! ಎಂದು ಮೊದಲೇ ಎಚ್ಚರಿಸಿದ್ದರು ಸರಸಮ್ಮ. ಮೌನವಾಗಿದ್ದರೂ ಹಲವು ಹುಡುಗಿಯರು ಒಬ್ಬೊಬ್ಬರಾಗಿ ಆಫೀಸು ಕೊಠಡಿಯ ಮುಂದೆ ಹಾದು ಹೋಗುತಿದ್ದರು. ಹಾಗೆ ಕಳ್ಳ ನೋಟದಿಂದ ಮಹಾಬಲನನ್ನು ನೋಡಿ ಬಂದು ಅಡುಗೆ ಮನೆಯಲ್ಲಿ ಅಡಗಿ ನಿಂತಿದ್ದ ಕನಕಲಕ್ಷ್ಮಮ್ಮನಿಗೆ ಬಣ್ಣಿಸುತಿದ್ದರು.

ಯಾವಳಾದರು ಹುಡುಗಿ ಬಾಗಿಲಿನತ್ತ ಸುಳಿದರೆ ಸಾಕು, ಇರುವೆ ಕಡಿದ ಹಾಗಾಗುತಿತ್ತು ಮಹಾಬಲನಿಗೆ.

ಸರಸಮ್ಮನೊಡನೆ ಆತ ಕೇಳಿದ:

"ನನ್ನ ಕಾಗ್ದ ತಮಗೆ ತಲಪಿರ್ಬೇಕು."

"ಹೌದು. ಮೊನ್ನೇನೆ ಬಂತು."

"ತಾವು-ಏನಾದ್ರೂ—...."

ಮಾತನಾಡುವ ಸ್ಥಿತಿಯಲ್ಲೂ ಇರಲಿಲ್ಲ ಆ ಮನುಷ್ಯ.

" ಏನಾದ್ರೂ ಮಾಡೋಣ. ಆದರೆ ಯಾವಾಗ ಮದ್ವೆ ಮಾಡ್ಕೋ ಬೇಕೊಂತಿದೀರಿ ನೀವು ?"

" ಈಗ್ಲೇ - ಈ ಸೀಸನ್‌ನಲ್ಲೇ !"

" ಓ !"

" ಮದ್ವೆ ಸೀಜನ್ ಷುರುವಾದಾಗ್ನಿಂದ ನಂಗೆ ಇದೇ ಯೋಚ್ನೆ ಆತ್ಕೊಂಬಿಟ್ಟಿತ್ತು. ನಮ್ಮ ಓಣೀಲಿ ಒಂದು ಮದ್ವೆ ಆಗೋಯ್ತು !"

" ಸರಿ, ಸರಿ...."

ಅಷ್ಟು ಮಾತನಾಡಿ ಮತ್ತೆ ಮೌನ ತಳೆದ ಭೂಪತಿ.

ಸರಸಮ್ಮನ ನಿರ್ದೇಶದಂತೆ ಕನಕಲಕ್ಷ್ಮಮ್ಮ, ಅಭಯಧಾಮಕ್ಕೆ ಬಂದ ಅತಿಥಿಗಾಗಿ ಒಂದು ಲೋಟ ಕಾಫಿ ಎತ್ತಿಕೊಂಡು ಬಂದಳು. ತಲೆ ಸ್ವಲ್ಪ ಬಾಗಿತ್ತು. ಆದರೂ ಮಹಾಬಲನಮೇಲೆಯೇ ನೆಟ್ಟಿತ್ತು ದೃಷ್ಟಿ.

ಕಪ್ಪಗಿತ್ತು ಕಾಫಿ. ಆದರೆ ಕನಕಲಕ್ಷ್ಮಮ್ಮ ಅದಕ್ಕಿಂತ ಬಿಳಿಯಾಗಿದ್ದಳು.

ಕಾಫಿಯ ಲೋಟವನ್ನು ಕನಕಲಕ್ಷ್ಮಮ್ಮ ದೊಡ್ಡಮ್ಮನ ಮೇಜಿನ ಮೇಲಿಟ್ಟಳು.

" ಕಾಫಿ ತಗೊಳ್ಳಿ "

—ಎಂದರು ಸರಸಮ್ಮ. ಹಾಗೆಯೇ ಕನಕನತ್ತತಿರುಗಿ ಅಂದರು.

" ಹೋಗ್ಬೇಡ. ಇಲ್ಲೇ ಇರು ಕನಕಲಕ್ಷ್ಮಮ್ಮ...."

ಕನಕಲಕ್ಷ್ಮಮ್ಮ ಎಂದ ಹೆಸರನ್ನು ಮನಸ್ಸಿನಲ್ಲಿ ತೊದಲುತ್ತ ಮಹಾಬಲ ಕಾಫಿಯ ಲೋಟವನ್ನೆತ್ತಿಕೊಂಡು, ಆ ಕರಿಯ ದ್ರಾವಕವನ್ನು ಗುಟುಕು ಗುಟುಕಾಗಿ ಸದ್ದುಮಾಡುತ್ತ ಹೀರಿದ.

" ಹ್ಯಾಗಿದೆ ?"

—ಎಂದರು ದೊಡ್ಡಮ್ಮ. ಹುಡುಗಿಯ ವಿಷಯ ಕೇಳಿದರೋ ಏನೆಂಬುದು ತಿಳಿಯದೆ ಮಹಾಬಲ ತಬ್ಬಿಬ್ಬಾದ.

" ಕಾಫಿ ಹ್ಯಾಗಿದೇರಿ ?"

" ಚೆನ್ನಾಗಿದೆ."

" ಹುಡುಗಿ ಹ್ಯಾಗಿದಾಳೆ ?"

" ಹುಂ ?"

" ಇವಳೇ - ಕನಕಲಕ್ಷ್ಮಮ್ಮ - ಸರಿಯಾಗಿ ನೋಡಿ.... ನೀನೂ ನೋಡು ಮಗೂ."

ಕನಕಲಕ್ಷ್ಮಮ್ಮ ಮಹಾಬಲ ಇಬ್ಬರ ಮುಖಗಳೂ ಲಜ್ಜೆಯಿಂದ ಕೆಂಪಗಾದುವು.

ಸರಸಮ್ಮ, ಕನಕನ ವಿಷಯವಾಗಿ ಚುಟುಕು ಪರಿಚಯಮಾಡಿ ಕೊಟ್ಟರು. ಅವರು ಸುಳ್ಳೇನನ್ನೂ ಹೇಳಲಿಲ್ಲ. ಆದರೆ ಮಾತು ಆಗಿನ ಪರಿಸ್ಥಿತಿಯಲ್ಲಿ ಆಭಾಸವಾಗಿ ತೋರದಂತೆ ಎಚ್ಚರ ವಹಿಸಿದ್ದರು.

ಮಹಾಬಲ ಕದ್ದು ಕದ್ದು ಕನಕಲಕ್ಷ್ಮಮ್ಮನನ್ನು ನೋಡಿದ. ಅಲ್ಲಿ ನಿಂತಿದ್ದ ಜೀವ ತನ್ನ ಪಾಲಿನದಾಗುವುದೆಂದು ಆತ ವೈಮರೆತ.

ಒಬ್ಬಳು ಹುಡುಗಿ ಅಭಯಧಾಮಕ್ಕೆ ಬಂದಾಗ, ಹಸುರು ಕೆಂಪು ಚಿತ್ತಾರಗಳನ್ನು ಬರೆದಿದ್ದ ವಾಯಿಲ್ ಸೀರೆಯನ್ನುಟ್ಟಿದ್ದಳು. ಅದನ್ನು ಈದಿನ 'ವಧು'ವಿಗೆ ಉಡಿಸಲಾಗಿತ್ತು. ಓರಣವಾಗಿ ತಲೆಬಾಚಿ ಹೆರಳು ಹಾಕಿದ್ದರು. ಹೆರಳಿನ ಮುಡಿಯಮೇಲೆ ಅದೇ ಉದ್ಯಾನದ ಹೂಗಳ ಕಿರೀಟವಿತ್ತು. ಮುಖಕ್ಕೆ ಪೌಡರನ್ನು ಒಂದಿಷ್ಟು ಹೆಚ್ಚಾಗಿಯೇ ಬಳಿದಿದ್ದರು.

ಮುಖ್ಯವಾಗಿ, ಯೌವನದ ಅಂಗ ಸೌಷ್ಠವ ಶೃಂಗಾರದ ನೆರವಿಗೆ ನಿಂತು, ಮಹಾಬಲನ ಮೇಲೆ ಮೋಹದ ಬಲೆ ಬೀಸಿತು.

" ಇವಳು ನಿಮಗೆ ಒಪ್ಪಿಗೆಯೇನಪ್ಪ ?"

" ನೀವು ಹೇಗಂತೀರೋ ಹಾಗೆ."

" ಅದೆಂಥಾಮಾತು ! ಸ್ಪಷ್ಟವಾಗಿ ಹೇಳಿ. ಇಷ್ಟು ಕೂಡಾ ಉತ್ತರ ಕೊಡೋಕೆ ಆಗ್ದೆ ಇರೋರು ಯಾಕ್ಬರ್ತೀರ ಇಲ್ಲಿ ?"

ತನ್ನನ್ನೆಲ್ಲಿ ಹೊರಟು ಹೋಗಲು ಹೇಳುವರೋ ಎಂದು ಮಹಾಬಲನಿಗೆ ಅಳುಕಿತು.

" ಒಪ್ಪಿಗೆ"

—ಎಂದು ಆತ ಅವಸರದಲ್ಲೇ ಹೇಳಿದ.

" ಸರಿ ಹಾಗಾದರೆ. ಮದುವೆದಿನ ಗೊತ್ಮಾಡಿ."

" ಆಗ಼್್ಲೇ ಮಾಡಿದೀನಿ ! ಮೇಲಿನ ಗುರುವಾರ ಒಳ್ಳೇಲಗ್ನ ಇದೆ."

" ಮದುವೆ ಏರ್ಪಾಟು ಎಲ್ಲಿ ಮಾಡ್ಬೇಕೊಂತಿದೀರಾ ?"

"ಬಳ್ಳಾಪುರದ ಹತ್ತಿರ ಘಾಟಿ ಸುಬ್ರಹ್ಮಣ್ಯ ಇದೇ ನೋಡಿ, ಅಲ್ಲಿ."

"ಮದುವೆಖರ್ಚು ನೀವು ನೋಡ್ಕೋಬೇಕು."

"ಅಂಥ ಖರ್ಚೇನೂ ಇಲ್ಲಾ ಅಂದ್ರು ಅಮ್ಮಾವ್ರು!"

"ಖರ್ಚು ಅಂದರೆ ಚಿಲ್ಲರೆ ಖರ್ಚು. ವಧೂ ಜತೇಲಿ ನಾನೂ ಇನ್ನೊಬ್ಬರೂ ಬರ್ತೀವಿ ನಮಗೆ ರೈಲು-ಬಸ್ಸು ಚಾರ್ಜು ಕೊಡ್ಬೇಕೋ ಬೇಡ್ವೋ?"

"ಅದನ್ನ ಕೊಡದೆ ಉಂಟೆ?"

"ನಮ್ಮದು ಬಡವರ ಮನೆ. ನಿಮಗೆ ಗೊತ್ತೇ ಇದೆ. ಆದರೂ ವಧೂನ ಹೀಗೆಯೇ ಕಳಿಸೋದ್ಕಾಗುತ್ತಾ?"

"ಇಲ್ಲ."

ಸರಸಮ್ಮನಿಗೆ ರೇಗಿತು.

"ಇಲ್ಲ-ಸರಿ! ಆದರೆ ಅದಕ್ಕೆ ಏನಾಡ್ಬೇಕೊಂತ ಹೇಳಿ."

"ನೀವೇ ಹೇಳಿ."

"ಸರ್ಹೋಯ್ತು! ಕೇಳಿ ಹಾಗಾದರೆ. ವಧೂಗೆ ಒಳ್ಳೆ ಸೀರೆ ರವಕೆ ಕಣ ಒಂದಿಷ್ಟು ವಸ್ತು ಒಡವೆ ಕೊಂಡ್ಕೊಡಿ."

"ಆಗಲಿ ಮಾಡ್ತೀನಿ."

ಮಹಾಬಲನಿಗೆ ಒಮ್ಮೆಲೆ, ತನ್ನನ್ನು ಬಿಟ್ಟು ತವರುಮನೆಗೆ ಓಡಿಹೋದ ಹೆಂಡತಿಯ ನೆನಪಾಗಿ ಮೈಯುರಿದು ಹೋಯಿತು! ಹಿಂದೆ ಆಕೆಯೇ ತಂದದ್ದು, ತಾನು ಆಮೇಲೆ ಮಾಡಿಸಿದ್ದು, ಎಲ್ಲವನ್ನೂ ಹೊತ್ತುಕೊಂಡೇ ಅವಳು ಓಡಿಹೋಗಿದ್ದಳು.

ಆ ವಿಷಯವನ್ನು ಇಲ್ಲಿ ಹೇಳಬೇಕೆನಿಸಿತು ಮಹಾಬಲನಿಗೆ. ಆದರೆ, ಸರಸಮ್ಮ ಏನೆನ್ನುವರೋ ಎಂಬ ಅಂಜಿಕೆಯಿಂದ ಅವನು ಸುಮ್ಮನಾದ

"ಇನ್ನೂ ಒಂದು ವಿಷಯ ಇದೆ."

"ಹುಂ?"

"ಇಷ್ಟು ಕಾಲ ಅಭಯಧಾಮ ಕನಕನಿಗೆ ತಾಯ್ಮನೆಯಾಗಿತ್ತು. ಇನ್ನುಮೇಲೆ ಎಲ್ಲಾ ಜವಾಬ್ದಾರೀನೂ ನಿಮ್ದೇ."

"ಹೌದು."

"ಅಭಯಧಾಮಾನ ನೀವು ಮರೀ ಕೂಡ್ದು."

"ಖಂಡಿತಾ ಮರೆಯೋಲ್ಲ."

"ಅದಕ್ಕೋಸ್ಕರ ಮದುವೆ ಸಮಯದಲ್ಲಿ ವಧೂವರರು ಅಭಯ ಧಾಮಕ್ಕೆ ಒಂದಿಷ್ಟು ಒಳ್ಳೆಯ ಕಾಣಿಕೆ ಕೊಡ್ಬೇಕು."

ಆ ಹೆಚ್ಚಿನ ಖರ್ಚಿನ ಅವಶ್ಯತೆಯನ್ನು ಕಂಡು ಮಹಾಬಲನ ತಲೆ ಗಿರ್ರೆಂದಿತು. ಆದರೂ ತನ್ನ ಕೈ ಹಿಡಿಯಲೆಂದು ಬಂದು ನಿಂತವಳ ಮುಂದೆ, ತಾನು ಬಡವನೆಂದು ತೋರಿಸಿಕೊಳ್ಳಲು ಆತ ಸಿದ್ಧನಿರಲಿಲ್ಲ.

"ಆಗಲಿ"

—ಎಂದ ಮಹಾಬಲ. ಆದರೆ ಸ್ವರ ಅಷ್ಟರಲ್ಲೆ ಕುಂಟಿತ್ತು.

"ಇಷ್ಟೆ. ನೀವು ಹೋಗಬಹುದಿನ್ನು."

—ಎಂದರು ಸರಸಮ್ಮ.

ಮಹಾಬಲ ಎದ್ದುನಿಂತ.

"ವರನಿಗೆ ನಮಸ್ಕಾರ ಮಾಡು ಮಗೂ."

—ಎಂದು ಸರಸಮ್ಮ ಕನಕಲಕ್ಷ್ಮನಿಗೆ ಹೇಳಿದರು. ಕನಕಲಕ್ಷ್ಮಿ ಮುಂದೆಬಂದು, ಬಾಗಿ, ಮಹಾಬಲನ ಪಾದಗಳಿಗೆ ವಂದಿಸಿದಳು.

"ಛೆ! ಛೆ!"

—ಎಂದ ಮಹಾಬಲ. ಆ ಎರಡು ಭುಜಗಳನ್ನೂ ತನ್ನ ಕೈಗಳಿಂದ ಒತ್ತಿ ಆಕೆಯನ್ನೆತ್ತಿ ನಿಲ್ಲಿಸಬೇಕೆಂದು ಆತನಿಗೆ ಆಸೆಯಾಯಿತು. ಆದರೆ, ಅಲ್ಲೆ ನಿಂತಿದ್ದ ಸರಸಮ್ಮನೆದುರು ಹಾಗೆ ಮಾಡಲು ಧೈರ್ಯಬರಲಿಲ್ಲ.

ಹಾಗೆ, ಕೆಲವೇ ದಿನಗಳಮೇಲೆ ಗುರುವಾರ ದಿನ ಶುಭ ಮುಹೂರ್ತ ದಲ್ಲಿ, ಕನಕಲಕ್ಷ್ಮಮ್ಮ-ಮಹಾಬಲರ ಪಾಣಿಗ್ರಹಣ ಘಾಟಿ ಸುಬ್ರಹ್ಮಣ್ಯ ದೇವರ ಸನ್ನಿಧಿಯಲ್ಲಿ ನೆರವೇರಿತು.

ಅದೇ ಸಂಜೆ ಹಿಂತಿರುಗಿದ ನೂತನ ದಂಪತಿಗಳನ್ನೂ ಅಭಯಧಾಮ ದಲ್ಲಿ ಸತ್ಕರಿಸಿದರು. ಸಮಿತಿಯಕಾರ್ಯದರ್ಶಿನಿ ತಮ್ಮ ಪರವಾಗಿ ಹದಿನೈದು ರೂಪಾಯಿ ಬೆಲೆಬಾಳುವ ಒಂದು ಸೀರೆಯನ್ನು ಓದಿಸಿದರು ಸರಸಮ್ಮ ಎರಡು ರವಕೆ ಕಣಗಳ ಉಡುಗೊರೆ ಕೊಟ್ಟರು.

ಅಭಯಧಾಮದ ಹುಡುಗಿಯರೆಲ್ಲ, ತುಂಗಮ್ಮ - ಜಲಜ - ಲಲಿತೆಯರ ನೇತೃತ್ವದಲ್ಲಿ ಕನಕಲಕ್ಷಮ್ಮನನ್ನು ಬೀಳ್ಕೊಟ್ಟರು.

ಮದುವೆಯಾದ ಹುಡುಗಿ ಗಂಡನ ಮನೆ ಸೇರಿದಳು.

ಮದುವೆಗೆ ಸರಸಮ್ಮನ ಜತೆಯಲ್ಲಿ ಹೋಗಿದ್ದವಳು ಜಲಜ. ಆಕೆಯ ಸ್ವಾರಸ್ಯಪೂರ್ಣವರದಿಯನ್ನು ಕೇಳಿ ಹುಡುಗಿಯರು ಬಿದ್ದು ಬಿದ್ದು ನಕ್ಕರು.

ಸಂತೋಷ ಚಿತ್ತಳಾಗಿದ್ದ ತುಂಗಮ್ಮನಿಗೆ ಆರಾತ್ರೆ ಬಹಳ ಹೊತ್ತು ನಿದ್ದೆ ಬರಲಿಲ್ಲ. ಆಯಾಸದಿಂದ ಬಳಲಿದ್ದ ಸರಸಮ್ಮ ಮತ್ತು ಜಲಜ ಬಲು ಬೇಗನೆ ನಿದ್ದೆ ಹೋದರು.

ಜಗಲಿದೀಪದ ಬೆಳಕಿನ ಕೆಳಗೆ ಕುಳಿತು ತುಂಗಮ್ಮ ತನ್ನ ತಂದೆಗೊಂದು ಕಾಗದ ಬರೆದಳು.

ಆ ಒಂದು ವಾರವೆಲ್ಲ, ತಾನು ಉಪಾಧ್ಯಾಯಿನಿಯಾದ ಬಳಿಕ, ಆಕೆ ಬರೆದೇ ಇರಲಿಲ್ಲ.

ಸಣ್ಣ ಪುಟ್ಟ ಘಟನೆಗಳೆಲ್ಲ ದೊಡ್ಡ ಆಕೃತಿ ತಳೆದುವು ಈಗ. ವಾಕ್ಯಗಳು ಬೆಳೆದು ಪುಟಸಂಖ್ಯೆ ಹೆಚ್ಚಾಯಿತು.

ಒಂದೆಡೆ ಆಕೆ ಬರೆದಳು :

" ಇವತ್ತು ಕನಕಲಕ್ಷಮ್ಮ ಅಂತ ನಮ್ಮ ಒಬ್ಬಳು ಹುಡುಗಿಗೆ ಮದುವೆಯಾಯ್ತು. ನಿರ್ಗತಿಕಳಾಗಿದ್ದ ಒಬ್ಬಳು ಹುಡುಗಿ ಈದಿನ ಗಂಡನ ಮನೆ ಸೇರಿದಳು.... ಮುದಿನ ತಿಂಗಳು ಸಂಬಳ ಬಂದಮೇಲೆ ಅವಳಿಗೊಂದು ಉಡುಗೊರೆ ಕಳುಹಿಸಕೊಡಬೇಕೆಂದಿದ್ದೇನೆ. ಕೊಡಲೆ ಅಣ್ಣ ? "

೧೬

ತಂದೆಯ ಉತ್ತರ ತುಂಗಮ್ಮನ ಕೈಸೇರಲು ಸ್ವಲ್ಪ ತಡವಾಯಿತು. ಅದಕ್ಕೆ ಕಾರಣ, ತಂದೆ ತುಮಕೂರು ಬಿಡುವ ಗಡಿಬಿಡಿಯಲ್ಲಿದ್ದುದು. ಆದರೆ, ಬೆಳಗಾಂವಿ ಸೇರಿದಮೇಲೆ ಅವರು ಬರೆಯಲು ತಡಮಾಡಲಿಲ್ಲ.

ಈಗ ತುಂಗಮ್ಮನ ಪ್ರಕರಣ, ಅವರೊಬ್ಬರೇ ಹೃದಯದೊಳಗೆ ಬಚ್ಚಿಟ್ಟದ್ದ ರಹಸ್ಯವಾಗಿರಲಿಲ್ಲ. ದೊಡ್ಡ ಮಗಳಿಗೆ ಅದನ್ನು ಹೇಳಿಯಾಗಿತ್ತು. ಅಳಿಯನಿಗೂ ಕೂಡಾ. ಪುಟ್ಟ ತಮ್ಮನೂ ಅಷ್ಟಿಷ್ಟು ಊಹಿಸಿಕೊಂಡಿದ್ದ. ಅವನಿಗೂ ತಿಳಿದಿತ್ತು - ಆಗಬಾರದ್ದು ಏನೋ ಆಗಿದೆ ಎಂದು ಅಳಿಯ ದೇವರಿಗೆ ತುಸು ಅಸಮಾಧಾನವೆನಿಸಿತು. ಆದರೆ ಯಾರೂ ತುಂಗಮ್ಮನನ್ನು ಜರೆಯಲಿಲ್ಲ, ನಿಂದಿಸಲಿಲ್ಲ. ಬೇರೆ ಎಲ್ಲ ಭಾವನೆಗಳನ್ನೂ ವಾತ್ಸಲ್ಯ-ಮರುಕ ಗೆದ್ದಿದ್ದುವು. ಅಷ್ಟು ಸುಲಭವಾಗಿಯೆ ಅದು ಸಾಧ್ಯವಾಗಲು ಕಾರಣ, ತುಂಗಮ್ಮನ ಆಗಿನ ಇರುವಿಕೆ, ಆಕೆ ಆರಂಭಿಸಿದ್ದ ಬದುಕಿನ ಹೊಸ ಅಧ್ಯಾಯ.

ಹತ್ತಿರದಲ್ಲೆ ಕುಳಿತು ಮೈದಡವಿ ಮಾತನಾಡುವಂತೆ ಅವರು ಅದೆಲ್ಲ ವನ್ನೂ ಬರೆದಿದ್ದರು :

"....ನನಗೆ ಗೊತ್ತಿದೆ ಮಗೂ. ಬೇರೆ ಯಾರಾದರೂ ಆಗಿದ್ದರೆ ಏನೇನೋ ಆಗುತಿತ್ತು....ಆದದ್ದು ಆಗಿ ಹೋಯಿತು. ಇನ್ನು ಆ ವಿಷಯ ಚಿಂತಿಸ ಬಾರದು....ತುಮಕೂರಿನ ನೀರಿನ ಋಣವೂ ಮುಗಿದ ಹಾಗಾಯಿತು. ಪುಟ್ಟೂನ ಇಲ್ಲೇ ಹೈಸ್ಕೂಲಿಗೆ ಸೇರಿಸ್ತೀನಿ. ನಿನ್ನ ಈಗಿನ ವಿಷಯ ತಿಳಿದು ಎಷ್ಟೋ ಸಮಾಧಾನವೆನಿಸಿತು. ಶ್ರೀಮತಿ ಸರಸಮ್ಮನವರನ್ನು ನಾನು ಎಷ್ಟು ಕೊಂಡಾಡಿದರೂ ಸಾಲದು. ಅವರು ನಮ್ಮ ಪಾಲಿನ ದೇವರಾಗಿ ಬಂದರು. ಅವರು ದೊಡ್ಡಮ್ಮ ಎಂತಲೇ ತಿಳಿದುಕೊಂಡು, ಅವರಿಗೆ ವಿಧೇಯಳಾಗಿ ವರ್ತಿಸಿ ಪ್ರೀತಿ ಸಂಪಾದಿಸಿಕೋ."

ತುಂಗಮ್ಮ ಅದೆಷ್ಟೋ ಬಾರಿ ಆ ಕಾಗದವನ್ನೋದಿದಳು.

ತನ್ನ ದೊಡ್ಡಮ್ಮನ ಬಳಿಗೆ ಒಯ್ದು ತುಂಗಮ್ಮ ಅದನ್ನು ತೋರಿಸಿದಳು:

"ನಮ್ಮಣ್ಣ ಕಾಗದ ಬರೆದಿದಾರೆ. ಓದಿನೋಡಿ ದೊಡ್ಡಮ್ಮ."

ಮುಖಬಾಗಿಸಿ, ಕನ್ನಡಕ ಮತ್ತು ಹುಬ್ಬುಗಳೆಡೆಯಿಂದ ತುಂಗಮ್ಮ ನನ್ನು ನೋಡಿ, ಮತ್ತೆ ತಲೆಯೆತ್ತಿ ಕತ್ತನ್ನು ಹಿಂದಕ್ಕೆ ಸರಿಸಿ ಸರಸಮ್ಮ ನೆಂದರು:

"ನಿನಗೆ ಬಂದಿರೋ ಕಾಗದ ನಾನ್ಯಾಕೆ ಓದ್ಲಿ?"

ದೊಡ್ಡಮ್ಮನ ನಗೆಯಮಾತಿಗೆ ನಗುತ್ತಲೆ ತುಂಗಮ್ಮ ಉತ್ತರ ವಿತ್ತಳು:

"ಓ! ಇದೊಂದು ಹೊಸದು. ಇಷ್ಟು ದಿವಸ ಓದ್ತಿರ್ಲಿಲ್ವೇನೊ?"

"ಆ ದಿವಸ ಬೇರೆ. ಈಗಿನದು ಬೇರೆ."

"ಹೂಂ. ಗೊತ್ತು. ಓದ್ನೋಡಿ. ದಮ್ಮಯ್ಯ."

ತುಂಗಮ್ಮನನ್ನು ತಮ್ಮ ಹಾಸಿಗೆಯ ಮೇಲೆ ಕೂರಿಸಿ ಹೇಳಿ, ಸರಸಮ್ಮ ಆ ಕಾಗದವನ್ನೋದಿದರು....ಅವರ ತಂದೆಯಿಂದ ಎಂದೂ ಅಂತಹಕಾಗದ ಅವರಿಗೆ ಬಂದಿರಲಿಲ್ಲ. ಬಾಲ್ಯದಲ್ಲಿ ಅವರಿಗೆ ಯಾರೂ ಅಷ್ಟು ಪ್ರೀತಿಯಿಂದ ಬರೆದಿರಲಿಲ್ಲ....ನಿವೃತ್ತ ಉಪಾಧ್ಯಾಯರ ಕೈಬರಹ. ಅಕ್ಷರಗಳು ಏಕ ಪ್ರಕಾರವಾಗಿದ್ದುವು. ಅವು ಮುದ್ದಾಗಿರಲಿಲ್ಲ. ಆದರೆ ಬರೆದಿದ್ದ ವಿಷಯ ಮುದ್ದು ಮುದ್ದಾಗಿತ್ತು....ಒಂದು ಕಾಗದದಲ್ಲೆ ಅಷ್ಟೊಂದು ಒಲುಮೆ ನಲುಮೆಗಳನ್ನು ತುಂಬುವುದು ಸಾಧ್ಯ ಅಲ್ಲವೆ?

ಓದುತಿದ್ದ ಸರಸಮ್ಮನ ಹೃದಯದಲ್ಲಿ ಮೃದುಭಾವನೆಗಳ ಘರ್ಷಣೆ ನಡೆದುದರ ಫಲವಾಗಿ ಕಣ್ಣುಗಳು ಮಂಜಾದುವು. ಕನ್ನಡಕದ ಗಾಜಿಗೆ ಯಾರೋ ನೀರಿನ ಹನಿ ಸಿಂಪಡಿಸಿದಂತಾಯಿತು.

ಓದಿ ಮುಗಿದಾಗ ಅವರು ಮಾತನಾಡಲಿಲ್ಲ. ಮಾತೃವಾತ್ಸಲ್ಯದಿಂದ ತುಂಗಮ್ಮನನ್ನು ನೋಡಿ ನಕ್ಕರು.

ತುಂಗಮ್ಮನೂ, 'ಕಾಗದ ಹೇಗಿದೆ?' ಎಂದು ಕೇಳಲಿಲ್ಲ. ತನ್ನ ಅಮೂಲ್ಯ ಆಸ್ತಿ ಎಂಬಂತೆ ಅದನ್ನು ಮಡಚಿ, ಬೆರಳುಗಳ ಎಡೆಯಲ್ಲಿ ಮೃದು ವಾಗಿ ಹಿಡಿದು, ಕುಳಿತಲ್ಲಿಂದ ಎದ್ದಳು.

ಆ ಮಧ್ಯಾಹ್ನ ಸರಸಮ್ಮನಿಗೆ ಕಾರ್ಯದರ್ಶಿನಿಯಿಂದ ಅವಸರದ ಕರೆಬಂತು.

"ಆದಷ್ಟು ಜಲ್ದಿ ಬರ್ಬೇಕಂತೆ"

—ಎಂದ, ಕರೆಯಲು ಬಂದಿದ್ದ ದೂತ.

ಏನೋ ವಿಶೇಷವಿರಬೇಕು-ಎಂದುಕೊಂಡರು ಸರಸಮ್ಮ. ತುಂಗಮ್ಮನಿಗೂ ಹಾಗೆಯೇ ಹೇಳಿದರು.

ಬೇಗ ಬೇಗನೆ ಊಟ ಮುಗಿಸಿಕೊಂಡು, ಅಭಯಧಾಮದ ಉಸ್ತುವಾರಿಯನ್ನು ತುಂಗಮ್ಮನಿಗೆ ಒಪ್ಪಿಸಿ, ಸರಸಮ್ಮ ಹೊರಹೋದರು.

ಅವರು ಹಿಂತಿರುಗಿ ಬಂದಾಗ ಆಗಿನ್ನೂ ನಾಲ್ಕುಘಂಟೆ. ಅಭಯಧಾಮದಲ್ಲಿ ಸಂಗೀತದ ಪಾಠ ನಡೆಯುತಿತ್ತು. ಬಾಗಿಲು ತೆರೆದು ಮುಚ್ಚಿದಬಳಿಕ ದೊಡ್ಡಮ್ಮನೊಡನೆ ತುಂಗಮ್ಮನೂ ಆಫೀಸು ಕೊಠಡಿಗೆ ಬಂದಳು:

"ಒಂದು ವಿಷಯ ಹೇಳ್ತೀನಿ. ಗೋಪ್ಯವಾಗಿಡ್ಬೇಕು ತುಂಗ."

"ಹೂಂ."

"ಜಲಜ ಲಲಿತೆ ಯಾರಿಗೂ ಹೇಳ್ಕೂಡದು."

ಕಾತರತುಂಬಿದ್ದ ಧ್ವನಿ.........ಆತ್ಮೀಯ ಗೆಳತಿಯರಿಂದಲೂ ಮರೆ ಮಾಡುವ ಕೆಲಸ. ಅದು ತನ್ನಿಂದ ಸಾಧ್ಯವೆ? ಸಾಧ್ಯವೊ ಅಲ್ಲವೊ. ಆದರೆ ದೊಡ್ಡಮ್ಮ ಹೇಳುತಿದ್ದಾರೆ. ತಾನು ಹಾಗೆ ಮಾಡಬೇಕು....

"ಹೂಂ. ದೊಡ್ಡಮ್ಮ."

"ಒಬ್ಬಳು ಗರ್ಭಿಣಿ ಹುಡುಗೀನ ಇವತ್ತು ಇಲ್ಲಿಗೆ ತರ್ತಾರೆ ರಾತ್ರೆ ಹೊತ್ತು. ಆಕೆ ಯಾರು ಏನು ಅನ್ನೋದು ಒಬ್ಬರಿಗೂ ತಿಳೀಕೂಡದು. ಆಕೇನ ಮಾತಾಡ್ಸೋಕೆ ಹೋಗಿ ಯಾರೂ ತೊಂದರೆ ಕೊಡಕೂಡದು."

ತುಂಗಮ್ಮನ ಎದೆ ಕ್ಷಣಕಾಲ ಗುಡುಗುಟ್ಟಿತು.

"ಹೂಂ."

"ದೊಡ್ಡ ಮನೆತನದ ಹುಡುಗಿ. ಏನೋ ಆಗ್ಬಿಟ್ಟಿದೆ. ಇಷ್ಟರವರೆಗೆ ಎಲ್ಲೋ ಇಟ್ಟಿದ್ರಂತೆ. ಇವತ್ತು ಇಲ್ಲಿಗೆ ಕರಕೊಂಡು ಬರ್ತಾರೆ."

"ಯಾವೂರೋ?"

ಆ ಪ್ರಶ್ನೆಯನ್ನು ಕೇಳಬಾರದಾಗಿತ್ತೇನೋ ಅನಿಸಿತು ತುಂಗಮ್ಮನಿಗೆ. ಆದರೆ ವಾಸ್ತವವಾಗಿ ದೊಡ್ಡಮ್ಮನಿಗೇ ಅದು ತಿಳಿದಿರಲಿಲ್ಲ.

"ನಂಗೊತ್ತಿಲ್ಲ ಕಣೆ. ಅವರಾಗಿ ಹೇಳ್ಲಿಲ್ಲ. ನಾನು ಕೇಳ್ಲಿಲ್ಲ."

"ಕೊಠಡಿ ಖಾಲಿ ಮಾಡಿಸ್ಲಾ?"

"ಹೌದು; ಅಲ್ಲಿಂದ ಆ ತಂಬೂರಿ - ತಬಲ ಬೇರೇನೇನು ಸಾಮಾನು ಇದೆಯೊ ಅದನ್ನೆಲ್ಲಾ ಇಲ್ಲಿಗೆ ತಂದ್ಬಿಡಿ"

"ಆಗಲಿ ದೊಡ್ಡಮ್ಮ. ಹೆರಿಗೆ ಇಲ್ಲೇ ಆಗುತ್ತೊ?"

"ಹೌದುಮತ್ತೆ! ಆಸ್ಪತ್ರೆಗೆ ಕಳುಹಿಸೋಹಾಗೇ ಇಲ್ಲ ತುಂಗ."

"ಹಾಸಿಗೆ—"

"ಆಮೇಲೆ ನೋಡೋಣ. ಬಹಳ್ಳಮಾಡಿ ಅದನ್ನೆಲ್ಲಾ ತಂದೆ ತರ್ರಾರೆ."

ತುಂಗಮ್ಮನ ಕುತೂಹಲ ಹೆಚ್ಚಿತು. ತನ್ನ ಹಾಗೆಯೇ ದುರದೃಷ್ಟ ಶಾಲಿನಿಯಾದ - ಆದರೆ ಶ್ರೀಮಂತಳಾದ - ಹುಡುಗಿಯನ್ನು ನೋಡಲು ಅವಳು ತವಕ ಗೊಂಡಳು.

ಕೊಠಡಿ ಸಿದ್ಧವಾಗುತಿದ್ದುದನ್ನು ಕಂಡು ಜಲಜ ಕೇಳದಿರಲಿಲ್ಲ.

"ಏನಕ್ಕ? ಏನ್ಸಮಾಚಾರ?"

"ಇನ್ನೊಂದ್ಸಾರೆ ಪಾಯಸ, ಅಷ್ಟೆ."

"ಆದರೇನು ಇರೋಕೆ ಬರ್ರಾರೊ - ಅಥ್ವಾ—"

ಜಲಜೆಯಧ್ವನಿಯಲ್ಲಿ ಸೂಕ್ಷ್ಮವಾಗಿ ತಿಳಿದುಕೊಳ್ಳುವ ಸಾಮರ್ಥ್ಯ ವಿತ್ತು.

"ಅದೇನೊ ನಂಗೊತ್ತಿಲ್ಲಮ್ಮ."

ತುಂಗಮ್ಮನ ಆ ಉತ್ತರವನ್ನು ನಿಜವೆಂದು ಭಾವಿಸಲು ಜಲಜೆಯ ಮನಸ್ಸು ಒಪ್ಪಲಿಲ್ಲ. ಆದರೆ, ತುಂಗಮ್ಮ ತನ್ನಿಂದ ಏನನ್ನಾದರೂ ಮರೆ ಮಾಚುತ್ತಿರಬಹುದೆಂದು ಭಾವಿಸುವುದಕ್ಕಂತೂ ಅವಳು ಸಿದ್ಧಳಿರಲೇ ಇಲ್ಲ.

"ನಂಗೊತ್ತಕ್ಕಾ. ಹೇಳ್ತೀನಿ ಕೇಳು."

ತುಂಗಮ್ಮನಿಗೆ ಆಶ್ಚರ್ಯವಾಯ್ತು.

"ಏನು?"

"ಕೊಠಡಿ ಪೂರ್ತಿಯಾಗಿ ಖಾಲಿಯಾಗ್ತಿದೆ. ನನ್ನ ತುಂಗಕ್ಕನಿಗೂ ಇರದೇ ಇದ್ದ ಸಂಭ್ರಮ ಈಕೆಗೆ! ಶ್ರೀಮಂತಳೇ ಇರಬೇಕು ಹಾಗಾದರೆ. ಭಾರಿ ಶ್ರೀಮಂತಳಿದ್ದರೂ ಇರಬಹುದು. ಆಕೆ ಬರಲಿ. ನೋಡಿ ಹೇಳ್ತೀನಿ—ಎಷ್ಟು ದಿವಸ ಇಲ್ಲಿ ಇರ್ತಾಳೇಂತ. ಅವಳ ಶ್ರೀಮಂತಿಕೇನೂ ಎಷ್ಟಿದೆ ಅಂತ ಸ್ವಲ್ಪ ನೋಡೇ ಬಿಡ್ತೀನಿ."

"ಹಾಗೆಲ್ಲ ಅನ್ಬಾರ್ದು ಜಲಜ."

"ಹೋಗಕ್ಕ, ನಿನಗೊಂದೂ ಗೊತ್ತಾಗೋಲ್ಲ."

ಅಷ್ಟು ಹೇಳಿ ಮಾತು ನಿಲ್ಲಿಸಿ ಬಿಟ್ಟಳು ಜಲಜಾ.

ತುಂಗಮ್ಮ, ಮನಸಿನ ನೆಮ್ಮದಿ ಇಲ್ಲದೆ ಹೊತ್ತು ಕಳೆದಳು.

ಕತ್ತಲಾದಮೇಲೆ, ಬರಬೇಕಾಗಿದ್ದವರ ಆಗಮನವನ್ನೂ ಸರಸಮ್ಮನೂ ಇದಿರುನೋಡಿದರು.

ಎಂಟುಗಂಟೆಯ ಹೊತ್ತಿಗೆ ದೆವ್ವದಂತಹ ಸುಭದ್ರವಾದೊಂದು ಕಾರು ಅಭಯಧಾಮದೆದುರು ಬಂದು ನಿಂತಿತು. ಮೊದಲು ಕಾರ್ಯದರ್ಶಿನಿ ಇಳಿದರು.

"ಭದ್ರ! ಮೆತ್ತಗೆ ಇಳೀರಿ"

—ಎನ್ನುತ್ತ ಗರ್ಭಿಣಿಯಾಗಿದ್ದ ಹುಡುಗಿಯನ್ನು ಕೈಕೊಟ್ಟು ಅವರು ಕೆಳಕ್ಕೆ ಇಳಿಸಿದರು.

ಅವಳ ಹಿಂದೆ ವಯಸ್ಸಾದ ಒಬ್ಬರು ಸ್ತ್ರೀ. ಎದುರು ಸೀಟಿನಿಂದ, ಬಣ್ಣ ಬಣ್ಣದ ಚಿತ್ರಗಳಿದ್ದ ಬುಷ್‌ಕೋಟು ಧರಿಸಿದ್ದ ಎತ್ತರದ ನಿಲುವಿನ ಒಬ್ಬ ಯುವಕ ಇಳಿದ...ಅವರೆಲ್ಲರೂ ಅಭಯಧಾಮದ ಒಳಕ್ಕೆ ಬಂದರು. ಡ್ರೈವರ್, ಹೊಸಹಾಸಿಗೆಯನ್ನೂ ದೊಡ್ಡ ಸೂಟ್‌ಕೇಸನ್ನೂ ಹೊತ್ತುಕೊಂಡು ಬಂದ.

ಆ ಹೆಂಗಸು, ಹುಡುಗಿಯ ತಾಯಿಯೆಂಬುದು ಸ್ಪಷ್ಟವಾಗಿತ್ತು. ಆ ಯುವಕ ಆಕೆಯ ಅಣ್ಣನಾಗಿದ್ದ. ಮುಟ್ಟಿದರೆ ಎಲ್ಲಿ ಮುದುಡುವುದೊ ಎಂಬಂತೆ ಕೆಂಪು ಕೆಂಪಗಾಗಿದ್ದ ಮೈ. ಹೂವಿನ ಸುಪ್ಪತ್ತಿಗೆಯಲ್ಲೆ ಬೆಳೆದ ಸುಕೋಮಲ ದೇಹ....

ಅತ್ಯಂತ ಗುಪ್ತವಾದುದೇನನ್ನೋ ಅವಸರ ಅವಸರವಾಗಿ ಮಾಡುವವರಂತೆ ಅವರೆಲ್ಲ ವರ್ತಿಸಿದರು.

ಆ ಹುಡುಗಿಯನ್ನು ತಾಯಿ ಮತ್ತು ಅಣ್ಣನೊಡನೆ ಆ ಕೊಠಡಿಯಲ್ಲಿ ಬಿಟ್ಟು, ಕಾರ್ಯದರ್ಶಿನಿ ಆಫೀಸು ರೂಮಿಗೆ ಬಂದರು.

" ಹೆಸರು ಏನೂಂತ ಬರಕೊಳ್ಳೋಣ ?"

—ಎಂದು ಕೇಳಿದರು ಸರಸಮ್ಮ.

" ಏನಾದರೊಂದು ಬರಕೋಂಡ್ಬಿಡೀಪ್ಪಾ. ಇದೊಳ್ಳೇ ಗೋಳು! ಇದೊಳ್ಳೇ ಸಮಾಜಸೇವೆ! ಅಂತೂ ಬಾಡಿಗೆಮನೆ ಕೆಟ್ಹೋಯ್ತು ಈ ಅಭಯಧಾಮ."

ಎದುರಲ್ಲಿ ಅಷ್ಟೊಂದು ವಿನಯದಿಂದ ಅವರೊಡನೆ ವರ್ತಿಸುತಿದ್ದವರು, ಅವರಿಂದ ದೂರ ಉಳಿದಾಗ ಬೇಸರ ವ್ಯಕ್ತಪಡಿಸುತ್ತ ಮುಖ ಒರೆಸಿಕೊಂಡರು.

ಸರಸಮ್ಮನಿಗೂ ಅದು ತಿಳಿದಿತ್ತು. ಆದರೆ ಅದಕ್ಕೆಲ್ಲ ಒಪ್ಪದೆ ಬೇರೆ ಹಾದಿ ಇರಲಿಲ್ಲ. ಸಮಾಜದಲ್ಲಿನ ಪ್ರತಿಷ್ಠಿತರ ಹಣಸಹಾಯದ ಆಧಾರದ ಮೇಲೆಯೇ ಮುಖ್ಯವಾಗಿ ನಡೆದಿತ್ತು ಆ ಅಭಯಧಾಮ. ಎಲ್ಲಾದರೂ ಒಂದೆಡೆ ಅಗೌರವವಾದರೂ ಸಾಕು, ಆಡಳಿತ ಸಮಿತಿ ಮುರಿದು ಮಣ್ಣು ಪಾಲಾದ ಹಾಗೆಯೇ.

ಆ ಯುವಕ ಬಂದು ಹೇಳಿದ:

" ಇನ್ನು ಹೊರಡ್ಬಹುದೇ ಅಂತ ಮಮ್ಮಿ ಕೇಳ್ತಾರೆ."

...ಕೊಠಡಿಯಲ್ಲಿ ಹುಡುಗಿ ತಾಯಿಯ ಮಡಿಲಲ್ಲಿ ಮುಖವಿಟ್ಟು ಅತ್ತಳು:

" ಮಮ್ಮೀ ! ಮಮ್ಮಿ!"

" ಅಳಬೇಡ ಮಗೂ....ಆದಷ್ಟು ಬೇಗನೆ ಮನೆಗೆ ಕರಕೊಂಡು ಹೋಗ್ತೀವಿ."

" ಹಿ....ಹಿ....ದಿಗಿಲಾಗುತ್ತಮ್ಮ...."

" ಇಲ್ಲಿರೋ ಜನರಿಗೆ ಹೇಳ್ತೀನಿ. ನಿನಗೇನೂ ಕೊರತೆ ಆಗದ ಹಾಗೆ ನೋಡ್ಕೋತಾರೆ...."

ಹುಡುಗಿ ಅಳು ನಿಲ್ಲಿಸಿದಳು.

ಡ್ರೈವರ್, ಕಾರ್ಯದರ್ಶಿನಿ ಮತ್ತು ಆ ಯುವಕ ಹೊರಗೆ ಅಂಗಳ ಕ್ಕಿಳಿದ ಮೇಲೆ, ಹುಡುಗಿಯ ತಾಯಿಯೊಬ್ಬರೇ ಸರಸಮ್ಮನೆಡೆಗೆ ನಡೆದು ಬಂದರು.

"ಏನು ಬೇಕಮ್ಮ?"

—ಎಂದು ಕೇಳಿದರು ಸರಸಮ್ಮ.

ಆ ಹೆಂಗಸು ತಮ್ಮ ಪುಟ್ಟ ಕೈ ಚೀಲವನ್ನು ತೆರೆದು, ಅದರಿಂದ ನೂರು ರೂಪಾಯಿಯ ಒಂದು ನೋಟನ್ನು ಹೊರತೆಗೆದು ಸರಸಮ್ಮನಿಗೆ ಕೊಡ ಬಂದರು.

"ಅಭಯಧಾಮಕ್ಕೆ ವಂತಿಗೆಕೊಡ್ತೀರಾ? ದಯವಿಟ್ಟು ಸೆಕ್ರೆಟರಿ ಯವರ ಕೈಗೇ ಕೊಡಿ."

"ಅದಲ್ಲ....ಇದು ನಿಮಗೆ...."

ಸರಸಮ್ಮನಿಗೆ ಬೇಸರವಾಯಿತು.

"ಇದು ಆಸ್ಪತ್ರೆಯಲ್ಲವಮ್ಮ. ನಾವುಯಾರೂ ಯಾವತ್ತೂ ಏನೂ ತಗೋಳೊಲ್ಲ. ನಿಮ್ಮಲ್ಲೇ ಇಡ್ಕೊಂಡಿರಿ."

"ಅಲ್ಲ - ನನ್ನ ಕಾಣಿಕೇ ಅಂತ."

"ಅಭಯಧಾಮಕ್ಕೆ ಕಾಣಿಕೆ ಯಾವಾಗಲೂ ಕೊನೇಲಿ ತಗೋತೀವಮ್ಮ...."

"ನಮ್ಮ ಮಗೂಗೆ ಏನಾದರೂ ತಿಂಡಿ ತೀರ್ಥ...."

"ಅದೆಲ್ಲಾ ನಾವು ನೊಡ್ಕೋತೀವಿ. ಯಾವ ಯೋಚ್ನೇನೂ ಬೇಡಿ. ....ಸೆಕ್ರೆಟರಿಯವರು ಆಗಲೇ ಹೇಳಿದಾರೆ."

ಮನಸಿಲ್ಲದ ಮನಸಿನಿಂದ ಆ ಹೆಂಗಸು ನೋಟನ್ನು ಮತ್ತೆ ತಮ್ಮ ಕೈಚೀಲದೊಳಕ್ಕೆ ತುರುಕಿದರು.

ಅಂತೂ ಕಾರು ಹೊರಟು ಹೋಯಿತು.

ಹುಡುಗಿಯರು ಯಾರೂ ಕೊಠಡಿಯತ್ತ ಸುಳಿಯಲಿಲ್ಲ. ಬಂದಿದ್ದವಳು ಬಾಗಿಲು ಓರೆ ಮಾಡಿಕೊಂಡು ಬಿಟ್ಟಳು.

ಸ್ವಲ್ಪ ಹೊತ್ತಾದಮೇಲೆ ಸರಸಮ್ಮ ಹೆಸರು ನೋಂದಾಯಿಸುವ ಪುಸ್ತಕದೊಡನೆ ತುಂಗಮ್ಮನ ಜತೆಗೂಡಿ ಆ ಕೊಠಡಿಗೆ ಬಂದರು. ಹುಡುಗಿ ಶೂನ್ಯ ಮನಸ್ಕಳಾಗಿ ಹಾಸಿಗೆಯಮೇಲೆ ಕುಳಿತು, ಬರುತ್ತ ತಂದಿದ್ದ ಬಣ್ಣದ ಬೀಸಣಿಕೆಯಿಂದ ಗಾಳಿ ಹಾಕಿಕೊಳ್ಳುತಿದ್ದಳು.

ಒಳಕ್ಕೆ ಬಂದ ಹೆಂಗಸು....ಕಾರ್ಯದರ್ಶಿನಿಯವರ ಅಚಾತುರ್ಯ

ದಿಂದ ಆ ಅಭಯಧಾಮದ ಮುಖ್ಯಸ್ಥೆ ಸುರು ಎಂಬುದು ಹುಡುಗಿಗೆ ಗೊತ್ತಾಗಿರಲಿಲ್ಲ ಹೀಗಾಗಿ, ಬಂದವರನ್ನು ಕಕ್ಕಾವಿಕ್ಕಿಯಾಗಿಯೆ ನೋಡುತ್ತ ಅವಳೆಂದಳು :

" ವಾರ್ಡನ್ ಅವರ್ನ ಸ್ವಲ್ಪ ಕರೀತೀರಾ ?''

" ಇಲ್ಲಿ ವಾರ್ಡನ್ ಇಲ್ಲ. ಮೇಟ್ರನ್ ಅಂತಲೇ ಇರೋದು."

" ನನಗೆ ಗೊತ್ತಿರ್ಲಿಲ್ಲ. ಎಲ್ಲಿದಾರೆ ಮೇಟ್ರನ್ ?''

" ನಾನೇ."

" ಓ ! so sorrry ! ನಮಸ್ತೆ.''

ದೀರ್ಘಕಾಲದ ಅನುಭವದಿಂದ ರಕ್ತಗತವಾಗಿದ್ದ ಮೃದುತನದಿಂದಲೇ ಸರಸಮ್ಮ ಹೇಳಿದರು :

" ನಮಸ್ತೆ. ಹೊಸಬರು ಯಾರಾದರೂ ಬಂದಾಗ ಅವರ ಹೆಸರು ಬರಕೊಳ್ಳುವುದು ಇಲ್ಲಿನ ಕ್ರಮ. ನಿಮ್ಮ ಹೆಸರು ಏನೂಂತ ಬರಕೊಳ್ಳ ಬೇಕು ?"

ವಯಸ್ಸಿನಲ್ಲಿ ತನಗಿಂತ ಎಷ್ಟೆಷ್ಟೋ ಕಿರಿಯಳಾಗಿದ್ದ ಹುಡುಗಿಯನ್ನು ಬಹುವಚನದಿಂದಲೆ ದೊಡ್ಡಮ್ಮ ಸಂಬೋಧಿಸಿದುದನ್ನು ಕಂಡಾಗ ತುಂಗಮ್ಮನಿಗೆ, ಇದು ಸರಿಯಲ್ಲವೆಂದು ತೋರಿತು. ಹಾಗೆ ಕರೆಯ ಬೇಡಿರೆಂದು ಆ ಹುಡುಗಿ ಹೇಳದೆ ಇದ್ದುದುದನ್ನು ಕಂಡಾಗಲಂತೂ ತುಂಗಮ್ಮನಿಗೆ ಮತ್ತಷ್ಟು ಕೆಡುಕೆನಿಸಿತು.

ಉತ್ತರಿಸಲು ಆಕೆ ತಡವರಿಸಿದಳು.

" ಮಮ್ಮಿ ಅಂದಿದ್ದರು...."

" ನೀವು ಹೇಳ್ಲೇ ಬೇಕಾದ್ದಿಲ್ಲ. ಆದರೆ ಇಲ್ಲಿ ಯಾವುದಾದ್ರೂ ಒಂದು ಹೆಸರು ಬರ್ಕೋತೀವಿ. ನೋಡಿ, – ಪ್ರಭಾವತಿ, ಅಂತ ಆಗಬಹುದೊ ?''

ಇದು ತುಂಗಮ್ಮನಿಗೆ ಒಳ್ಳೆಯ ತಮಾಷೆಯಾಗಿ ತೋರಿತು.

'' ಹೂಂ.... ಪ್ರಭಾ ಅಂತ ಸಾಕು."

" ಆಗಲಿ ಪ್ರಭಾ.... ನಾನಿರೋದು ಪಕ್ಕದ ಕೊಠಡೀಲಿ. ಏನಾದರೂ ಬೇಕಾದ್ರೆ ಬಂದು ಬಾಗಿಲು ತಟ್ಟಿ. ಬನ್ನಿ.... ಬಚ್ಚಲು ಮನೆ ತೋರಿಸಿ ಕೊಡ್ತೀನಿ. ಬೇರೇನಾದರೂ ಬೇಕೆ ?''

" ಏನೂ ಬೇಡಿ.''

" ಕುಡಿಯೋಕೆ ನೀರು ಕಳಿಸ್ತೀನಿ.''

" ಹೌದು, ನೀರುಬೇಕು."

" ಈಗ ನನ್ಜತೇಲಿ ಬನ್ನಿ ಮಿಸ್ ಪ್ರಭಾ."

ಪ್ರಭಾ ಎದ್ದಳು. ತುಂಗಮ್ಮ ಹಿಂದೆಯೇ ಉಳಿದಳು. ಹೊರಹೋಗುತ್ತ ಸರಸಮ್ಮನೆಂದರು :

" ಈಗ ಅಸಾಧ್ಯ ಸೆಖೆ, ಇನ್ನು ನಾಲ್ಕೈದು ದಿವಸ. ಆಮೇಲೆ ಮಳೆ ಷುರುವಾಗ್ಬಿಡುತ್ತೆ. ಆಗ ತಣ್ಣಗಿರ್‍ತದೆ."

ಪ್ರಭಾ ಅಭಯಧಾಮಕ್ಕೆ ಬಂದ ಒಂದು ವಾರದಲ್ಲಿಯೇ ಜೋರೋ ಎಂದು ಮುಂಗಾರು ಮಳೆ ಶುರುವಾಯಿತು. ಜಗಲಿಯಲ್ಲಿ ಮಲಗಲಾರದೆ ಹುಡುಗಿಯರೆಲ್ಲ ಹಜಾರವನ್ನೂ ಸೇರಿದರು.

ಒಂದು ರಾತ್ರಿ ಹಾಗೆ ಚೆನ್ನಾಗಿ ಮಳೆ ಬಂದಮೇಲೆ, ಬೆಳಗು ಮುಂಜಾನೆ ಜಲಜ ತುಂಗಮ್ಮನನ್ನು ಎಬ್ಬಿಸಿ ಹಜಾರದ ಕಿಟಕಿಯ ಬಳಿ ನಿಂತು ಹೊರಗೆ ಬೊಟ್ಟು ಮಾಡಿದಳು :

" ನೋಡಿದ್ಯಾ ಅಕ್ಕ ? ಆವತ್ತು ಹೇಳಿರ್‍ಲಿಲ್ವಾ ನಾನು ? ಸಮುದ್ರದ ಹಾಗೇ ಇಲ್ಲ ?"

ಹೌದೆಂದು ತುಂಗಮ್ಮ ತಲೆಯಾಡಿಸಿದಳು. ಸುತ್ತಲಿನ ಹೊಲವನ್ನೆಲ್ಲ ಬಲುದೂರದವರೆಗೂ ನೀರು ಆವರಿಸಿಕೊಂಡು, ಅಭಯಧಾಮ ಒಂದು ಭಾಗದಲ್ಲಿ ಮಾತ್ರ ಭೂಮಿಗೆ ಅಂಟಿಕೊಂಡಿದ್ದ ಅರ್ಧದ್ವೀಪವಾಗಿತ್ತು. ನಾಲ್ಕು ಮೂಲೆಗಳಿಂದಲೂ ವಟಗುಟ್ಟುತಿದ್ದುವು ಕಪ್ಪೆಗಳು.

" ನೀನು ಚಿಕ್ಕವಳಿದ್ದಾಗ ಮಳೆಗಾಲದಲ್ಲಿ ಏನೇನು ಮಾಡ್ತಿದ್ದೆ ತುಂಗಕ್ಕ ?''

" ತಲೆಮೇಲೆ ಕೈ ಇಟ್ಕೊಂಡು ಲಂಗ ಎತ್ತಿಕೊಂಡು ಕುಣೀತಿದ್ದೆ. ಕಾಗ್ದದ ದೋಣೀನ ಚರಂಡಿ ನೀರ್‍ನಲ್ಲಿ ಬಿಟ್ಟು ಅದರ್‍ಜತೇಲೆ ಓಡ್ತಿದ್ದೆ."

" ನಾನೂ ಹಂಗೇ ಮಡ್ಬೇಕೊಂತ ಓಡಾಡ್ತಿದ್ನಮ್ಮ. ಆದರೆ ಆದೊಡ್ಡ

ಮನೆಯೋರು, 'ಚೆನ್ನಾ ನೆಗಡಿ ಆದೀತು, ಜ್ವರ ಬಂದೀತು' ಅಂತ ನನ್ನ ಹೊರಕ್ಕೇ ಬಿಡ್ತಿರ್ಲಿಲ್ಲ."

"ಆಮೇಲೆ, ನಿನ್ನ ಅವರು ಬಿಟ್ಬಿಟ್ಟಾಗ ?"

"ಆಗ ಆಟ ಆಡೋ ಬಯಕೇನೇ ಹೊರಟ್ಹೋಗಿತ್ತು."

ಪ್ರಕೃತಿಯ ಹೊಸವೇಷದಲ್ಲೇ ತನ್ಮಯಳಾಗಿದ್ದ ಜಲಜೆಯ ಮನಸ್ಸು ಅಂತರ್ಮುಖಿಯಾಗಿ ಗತಕಾಲವನ್ನು ಕುರಿತು ಚಿಂತಿಸುತಿತ್ತು....ಬಾಲ್ಯದ ನೆನಪುಗಳು....ಆದರೆ ಆ ಸ್ಮರಣೆಯೆಂದೂ ಮಧುರವಾಗಿರಲಿಲ್ಲ.

ಅದನ್ನು ಚೆನ್ನಾಗಿ ತಿಳಿದಿದ್ದ ತುಂಗಮ್ಮ ಅಂದಳು :

"ಬಾ ಹೋಗೋಣ. ಪ್ರಭಾನ ಎಬ್ಬಿಸೋಣ."

"ಅಯ್ಯೊ - ಇರಲಿ ಬಿಡೇ. ಬೇಕಾದಾಗ ಏಳ್ತಾಳೆ."

"ಇಲ್ಲ ಜಲಜ. ಈಗ ಜಂಭವೆಲ್ಲ ಇಳಿದ್ಬಿಟ್ಟಿದೆ. ಬಾ."

ಗೆಳತಿಯರಿಬ್ಬರೂ ಪ್ರಭಾಳ ಕೊಠಡಿಯತ್ತ ನಡೆದರು.

ಪ್ರಭಾ ತಾನು ಬಂದ ಮರುದಿನ ಬೆಳಿಗ್ಗೆ ಎದ್ದವಳು, ಹೊಸಪರಿಸ್ಥಿತಿಗೆ ಹೊಂದಿಕೊಳ್ಳಲಾರದೆ ಬಲು ಕಷ್ಟಪಟ್ಟಳು.

ತುಂಗಮ್ಮ ಬಾಗಿಲಬಳಿ ಸುಳಿದಾಗ ಪ್ರಭಾ ಕರೆದಳು :

"ಏ ಹುಡುಗಿ ಇಲ್ಲಿಗೆ ಬಾ ?

ಇದೂ ಸರಿಯೆ - ಎಂದುಕೊಂಡ ತುಂಗಮ್ಮ ವಿನಮ್ರತೆಯ ಅಭಿನಯ ಮಾಡುತ್ತಾ ಪ್ರಭಾಳ ಎದುರುನಿಂತಳು :

"ಏನು ಬೇಕಮ್ಮ ?"

"ನಿನ್ನ ಹೆಸರೇನೇ ?"

"ತುಂಗ ಅಂತಾರೆ."

"ನನ್ನ ಸ್ವಲ್ಪ ಬಚ್ಚಲುಮನೆಗೆ ಕರಕೊಂಡು ಹೋಗ್ತೀಯಾ ?"

"ರಾತ್ರೆ ನೋಡ್ಲಿಲ್ವೆ ?"

"ನೊಡಿದ್ದೆ. ಹಾದಿ ಮರೆತ್ಹೋಯ್ತು. ಬಚ್ಚಿಗೇ ಹೋಗಕ್ಕಾಗಲ್ಲ. ಮುಖ ತೊಳೀಬೇಕು."

"ಆಗ್ಲಿ ನಡೀರಿ."

ಪ್ರಭಾ ಸೂಟ್‌ಕೇಸ್ ತೆರೆದು ಬ್ರಶ್ಶಿಗೆ ಪೇಸ್ಟ್ ಅಂಟಿಸಿದಳು. ಸಾಬೂನಿನ ಪೆಟ್ಟಿಗೆಯನ್ನೂ ಬಿಳಿಯ ಅಂಗ ವಸ್ತ್ರವನ್ನೂ ತುಂಗಮ್ಮನ ಕೈಗೆ ಕೊಟ್ಟಳು.

" ಸ್ವಲ್ಪ ಇದನ್ನ ಹಿಡಕೋ."

ತುಂಗಮ್ಮ ಬೇಡವೆನ್ನಲಿಲ್ಲ.

ಆದರೆ ಅವರಿಬ್ಬರೂ ಜಗಲಿಯಮೇಲಿಂದ ಹೋದಾಗ, ಸರಸಮ್ಮ ನೋಡಿದರು ; ಹುಡುಗಿಯರು ನೋಡಿದರು. ಕೆಲವರು ಗೊಳ್ಳೆಂದು ನಕ್ಕರು.

ಪ್ರಭಾಗೆ ಇದು ಅರ್ಥವಾಗಲೇ ಇಲ್ಲ !

ಇದರ ಪುನರಾವೃತ್ತಿಯಾಗಬಾರದೆಂದು ಸರಸಮ್ಮ ಸ್ವಲ್ಪ ಹೊತ್ತಾದ ಮೇಲೆ ಪ್ರಭಾಳನ್ನು ಕಂಡರು.

" ಕಾಫಿ ಜತೇಲಿ ನೀವೇನೂ ತಗೋತೀರಾ ಪ್ರಭಾ ?"

" ಬ್ರೆಡ್ ಮತ್ತು ಬಟರ್ ಇದೆ. ಬಿಸ್ಕತ್ತುಗಳೂ ಇವೆ."

" ಸರಿ. ಬೇರೇನಾದರೂ ಬೇಕಾದರೆ ನನ್ನ ಅಸಿಸ್ಟೆಂಟ್ ಇದಾರೆ ಅವರ್ನ ಕೇಳಿ."

" ಹೂಂ. ಅವರು ಯಾರೋ ಗುರುತಿಲ್ಲವಲ್ಲ."

" ತುಂಗಮ್ಮಾ. ಇಲ್ಲಿಬನ್ನಿ."

—ಎಂದು ಸರಸಮ್ಮ ಕರೆದರು. ಈ ಬಹುವಚನದ ಸಂಬೊಧನೆಯ ಉದ್ದೇಶ ತುಂಗಮ್ಮನಿಗೆ ತಿಳಿಯದೆ ಹೋಗಲಿಲ್ಲ. ಆಕೆ ಬಂದು ಪ್ರಭಾ ಎದುರು ನಿಂತಳು.

ಒಂದು ನಿಮಿಷ ಉಸಿರು ಕಟ್ಟಿದ ಹಾಗಾಯಿತು ಆ ಪ್ರಭಾಗೆ !

" ಇವರೇ ನನ್ನ ಸಹಾಯಿಕೆ."

ತುಂಗಮ್ಮನನ್ನು ನೋಡುತ್ತ ಪ್ರಭಾ ಅಂದಳು :

" ಕ್ಷಮಿಸಿ. ನನಗೆ ಗೊತ್ತಿರ್ಲಿಲ್ಲ. ಒರಟಾಗಿ ವರ್ತಿಸಿದೆ. ದಯವಿಟ್ಟು ಕ್ಷಮಿಸಿ. I am really sorry."

" ನಾವೆಲ್ಲಾ ಒಂದೇ ಪ್ರಭಾದೇವಿ. ಇಲ್ಲಿ ಒಬ್ಬರ್ನ ಇನ್ನೊಬ್ಬರು ಕೀಳಾಗಿ ಕಾಣೋದೇ ಇಲ್ಲ."

ಪ್ರಭಾಳನ್ನು ಪ್ರಭಾದೇವಿಯಾಗಿಮಾಡಿ ಜಾಣತನದಿಂದ ನಯವಾಗಿ ತುಂಗಮ್ಮ ಉತ್ತರವಿತ್ತುದನ್ನು ಕಂಡು ಸರಸಮ್ಮನಿಗೆ ಆನಂದವಾಯಿತು.

ಅದು ಅಭಯಧಾಮದಲ್ಲಿ ಕಲಿತ ಮೊದಲಪಾಠ, ಪ್ರಭಾ ಬದಲಾಯಿಸಿದಳು ನಿಜ. ಆದರೆ ಆ ಹುಡುಗಿಯರಲ್ಲಿ ಆಕೆ ಒಬ್ಬಳಾಗಲಿಲ್ಲ. ಪಾಯಸದೂಟಕ್ಕೆ ಮುಂಚೆ "ಹುಡುಗೀರಾ" ಎಂದು ಸಂಬೋಧಿಸಿ ಸರಸಮ್ಮ ಭಾಷಣ ಮಾಡಲಿಲ್ಲ. ಇತರ ಹುಡುಗಿಯರ ಪಂಗ್ತಿಯಲ್ಲಿ ಊಟಕ್ಕೆ ಕುಳಿತುಕೊಳ್ಳಲೇ ಇಲ್ಲ ಪ್ರಭಾ. ಅವಳ ಊಟ ಕೊಠಡಿಯಲ್ಲೇ ನಡೆಯಿತು. ಎಲ್ಲರ ದೃಷ್ಟಿಯಲ್ಲಿ ಆಕೆ ಅತಿಥಿಯಾದಳು. ಹೊಸ ತುಪ್ಪ, ವಿಶೇಷ ಉಪ್ಪಿನಕಾಯಿ ಮತ್ತಿತರ ಸಾಮಗ್ರಿಗಳು ಹೊರಗಿನಿಂದಲೆ ಆಕೆಗೆ ಪೂರೈಕೆಯಾದುವು. ಅಗಸ ವಾರಕ್ಕೊಮ್ಮೆ ಬಟ್ಟೆ ಬರೆ ಒಗೆದು ತಂದ.

ಇಂತಹ ತರತಮ ನೀತಿ ಸರಸಮ್ಮನಿಗೆ ಇಷ್ಟವಿರಲಿಲ್ಲ. ಆದರೂ ಅವರು ಸಮಿತಿಯ ಪ್ರಮುಖರ ನಿರ್ದೇಶಕ್ಕೆ ಇದಿರಾಗಿ ಮಾತನಾಡುವಂತಿರಲಿಲ್ಲ.

ನಗರದ ಸುಪ್ರಸಿದ್ಧರಾದ ಡಾಕ್ಟರೊಬ್ಬರು ದಿನಬಿಟ್ಟು ದಿನಬಂದು ಪ್ರಭಾಳನ್ನು ನೋಡಿಕೊಂಡು ಹೋದರು.

ಜಾತಿಯ ಪ್ರಶ್ನೆಯಿಂದಾಗಿ ಆಕೆ ಬೇರೆಯಾಗಿಯೆ ಉಳಿದಿರಲಿಲ್ಲ. ಅಂತಹ ಭಾವನೆಗಳು ಅಲ್ಲಿ ಕ್ಷಣಿಕವಾಗುತಿದ್ದುವು. 'ಕಾಲುಜಾರಿ'ದ ತಾವೆಲ್ಲ ಒಂದೇ ಜಾತಿ - ಎನ್ನುವುದು ಅಭಯಧಾಮದ ಹುಡುಗಿಯರ ಧೋರಣೆ.

ಆದರೆ ಪ್ರಭಾ, ವರ್ಗವ್ಯತ್ಯಾಸದಿಂದಾಗಿ ಬೇರೆಯಾಗಿದ್ದಳು. ಆಕೆ ಹುಟ್ಟಿದ ಬೆಳೆದ ವಾತಾವರಣವೆಲ್ಲ, ಆಕೆಯ ಓದು ಸಂಸ್ಕಾರವೆಲ್ಲ, ಈ ಹುಡುಗಿಯರಿಗಿಂತ ಭಿನ್ನವಾಗಿತ್ತು.

ಮೊದಲು ಏಕಾಂತವನ್ನೇ ಬಯಸಿದಳು ಪ್ರಭಾ. ಆದರೆ ಕ್ರಮೇಣ ಅದು ಬೇಸರವಾಗಿ, ಒಬ್ಬಿಬ್ಬರು ಹುಡುಗಿಯರೊಡನೆ ಹೆಚ್ಚು ಸಲಿಗೆಯಿಂದ ಇರತೊಡಗಿದಳು.

ಮಳೆ ಬಂದು ನಿಂತಿದ್ದ ಆ ಮುಂಜಾನೆ ತುಂಗಮ್ಮ ಮತ್ತು ಜಲಜ ಪ್ರಭಾಳ ಕೊಠಡಿಗೆ ಬಂದು ಬಾಗಿಲು ತಟ್ಟಿದರು. ಅಗಣಿ ಹಾಕಿರಲಿಲ್ಲ.

ಮುಟ್ಟಿದಾಗ ತೆರೆದು ಕೊಂಡಿತು ಬಾಗಿಲು, ಪ್ರಭಾ ಕೂಡಾ, ಕಿಟಕಿಯ ಎಡೆಯಿಂದ ನೀರ ಸಾಗರವನ್ನೆ ನೋಡುತ್ತ ನಿಂತಿದ್ದಳು.

“ ನೋಡೋಕೆ ಚೆನ್ನಾಗಿದೆ ಅಲ್ವೇನ್ರೀ ?”

—ಎಂದು ತುಂಗಮ್ಮ ಕೇಳಿದಳು.

“ ಹೌದು.”

ಮಳೆಯನ್ನು ಕುರಿತಾದ ಚರ್ಚೆಯಲ್ಲಿ ಯಾವತೊಂದರೆಯೂ ಇರಲಿಲ್ಲ ಆದರೆ ಬೇರೆ ಮಾತುಗಳು ಬಂದಾಗ—

ಒಮ್ಮೆ ಪ್ರಭಾ ಕೇಳಿದಳು :

“ ನೀವು ಎಷ್ಟು ಓದಿದೀರಾ ತುಂಗಮ್ಮ ?”

“ ಹೆಚ್ಚೇನೂ ಇಲ್ಲ ಕಣ್ರೀ. ಹೈಸ್ಕೂಲು ಕೂಡ ಪೂರ್ತಿಯಾಗಲಿಲ್ಲ.”

“ ಓ ನೀವು ಗ್ರ್ಯಾಜುಯೇಟೇನೋ ಅಂತಿದ್ದೆ.”

“ ಇಲ್ಲವಪ್ಪ - ಅದಕ್ಕೇ ನಾನು ಇಂಗ್ಲಿಷ್ ಅಷ್ಟಾಗಿ ಮಾತಾಡೊಲ್ಲ.”

“ ಮೇಟ್ರನ್ ಎಷ್ಟು ಓದಿದಾರೆ ?”

ಆ ಪ್ರಭಾ ‘ದೊಡ್ಡಮ್ಮ’ ಎಂದು ಒಮ್ಮೆಯೂ ಅಂದಿರಲಿಲ್ಲ. ಆಕೆಯ ಪಾಲಿಗೆ ಸರಸಮ್ಮ ಮೇಟ್ರನ್ ಮಾತ್ರ. ಆ ಪ್ರಶ್ನೆಯ ಹಿಂದಿನ ಪ್ರವೃತ್ತಿ ತುಂಗಮ್ಮನಿಗೆ ಮೆಚ್ಚುಗೆ ಇರಲಿಲ್ಲ. ಅವಳು ಸುಳ್ಳಾಡಿದಳು.

“ ದೊಡ್ಡಮ್ಮ ಎಂ. ಎ. ಬಿ. ಟಿ.ಯಂತ ಕಾಣುತ್ತೆ. ಸರಿಯಾಗಿ ಗೊತ್ತಿಲ್ಲ.”

“ I see.”

“ ನೀವೆಷ್ಟು ಓದಿದೀರಾ ಮಿಸ್ ಪ್ರಭಾ ?”

“ ಈ ವರ್ಷ ಬಿ. ಎಸ್. ಸಿ. ಡಿಗ್ರಿ ಪರೀಕ್ಷೆಗೆ ಕೂತ್ಕೋಬೇಕಾಗಿತ್ತು. ಆಗ್ಲಿಲ್ಲ ನೋಡಿ....”

ಇನ್ನೊಮ್ಮೆ ಬೇರೆಮಾತು ಬಂತು.

“ ತುಂಗಮ್ಮ, ನೀವು ಇಲ್ಲಿ ಹ್ಯಾಗೆ ಸೇರ್ಕೊಂಡ್ರಿ ಕೆಲಸಕ್ಕೆ ?”

“ ಮೂರುತಿಂಗಳ ಹಿಂದೆ ಒಂದುರಾತ್ರಿ ನಿಮ್ಮ ಹಾಗೇ ನಾನೂ ಬಂದೆ ಮಿಸ್ ಪ್ರಭಾ.”

ಆ ಮಾತು ಪ್ರಭಾಳ ಮೇಲೆ ಪರಿಣಾಮ ಮಾಡದೆ ಇರಲಿಲ್ಲ.

"ಓ! ಆಮೇಲೆ ವಾಪ್ಸ ಹೋಗ್ಲೇ ಇಲ್ವೊ?"

"ಇಲ್ಲ."

ತುಂಗಮ್ಮ ಕಾರಿನಲ್ಲಿ ಬಂದಿರಲಿಲ್ಲ. ಕಲ್ಲು ಮುಳ್ಳು ತುಳಿದು ನಡೆದು ಬಂದು, ಬಾಗಿಲುತಟ್ಟಿ, ಬಳಲಿ ಬವಳಿ ಬಂದು ಮೆಟ್ಟಿಗಲ್ಲ ಮೇಲೆ ಬಿದ್ದಿದ್ದಳು. ಅದನ್ನೆಲ್ಲ ಆಕೆ ಹೇಳಲಿಲ್ಲ. ಅದನ್ನು ಪ್ರಭಾಗೆ ಹೇಳುವುದರಿಂದ ಯಾವ ಪ್ರಯೋಜನವೂ ಇದ್ದಂತೆ ತುಂಗಮ್ಮನಿಗೆ ತೋರಲಿಲ್ಲ. ಅಷ್ಟೇ ಅಲ್ಲ, ಬೇರೆಹುಡುಗಿಯರ ಜೀವನ ವೃತ್ತಾಂತಗಳನ್ನೂ ಅವಳು ತಿಳಿಸಲಿಲ್ಲ.

ಒಂದೇ ಕಟ್ಟಡದಲ್ಲಿದ್ದೂ ಬೇರೆಯಾಗಿ ಈ ಹುಡುಗಿ ಪ್ರಭಾ ಸಂಕಟ ಪಡುತ್ತಿರುವಳಲ್ಲಾ - ಎಂದು ಸರಸಮ್ಮನಿಗೆ ಕೆಡುಕೆನಿಸಿತು. ಆದರೆ ಮುಂದೆ ಆ ವಿಚಾರವಾಗಿ ಹೆಚ್ಚಿನ ಯೋಚನೆ ಮಾಡುವ ಅಗತ್ಯ ಬೀಳಲಿಲ್ಲ.

ಪ್ರಭಾಗೆ ದಿನಗಳು ತುಂಬಿ ನೋವು ಕಾಣಿಸಿಕೊಂಡಿತು. ಆಕೆಯ ಊರಿನಿಂದ ಅಣ್ಣ ಬಂದ. ನಿಷ್ಣಾತರಾದ ಸ್ತ್ರೀವೈದ್ಯರು ಬಂದರು.

ಸುಲಭವಾಗಿ ಹೆರಿಗೆಯಾಯಿತು. ಮುದ್ದಾದ ಗಂಡು ಕೂಸು.

ತಾನು ಮಗುವಿಗೆ ಜನ್ಮ ಕೊಟ್ಟ ಸ್ವಲ್ಪ ಹೊತ್ತಾದ ಬಳಿಕ ಚೇತರಿಸಿಕೊಂಡು ಪ್ರಭಾ, ಮಗುವಿನ ಮುಖನೋಡಿ ಒಮ್ಮೆ ಮುಗುಳ್ನಕ್ಕರೂ, ಬಳಿಕ ಒಂದೇ ಸಮನೆ ಅತ್ತಳು - ತನಗೆ ಹಾಗಾಯಿತಲ್ಲಾ ಎಂದು.

"ಇದೊಂದು ವಿಚಿತ್ರ ಹುಡುಗಿ."

—ಎಂದು ಗೊಣಗುಟ್ಟಿದಳು. ತುಂಗಮ್ಮ.

ಕೆಲವು ದಿನಗಳಲ್ಲೆ ಪ್ರಭಾ ಎದ್ದು ನಡೆದಳು. ಹಿಂದೊಮ್ಮೆ ಬಂದಿದ್ದ ಕಾರೇ ಮತ್ತೆ ಬಂದು ಅವಳನ್ನು ಕರೆದೊಯ್ದಿತು. ಹಿಂದೆಯೇ ಉಳಿಯಿತು ಮಗು.

ಒಂದು ಮಗುವನ್ನು ಹೊತ್ತು ಹೆತ್ತು ಆಡಿಸಿ ಕಳೆದುಕೊಂಡಿದ್ದ ಒಬ್ಬಳು ಈ ಮಗುವನ್ನೆತ್ತಿಕೊಂಡು ಅದರ ಬಾಯಿಗೆ ತನ್ನ ಸ್ತನವನ್ನು ನೀಡಿದಳು. ಮಗು ಚೀಪಿತು. ಹಾಲು ಬರಲಿಲ್ಲವೆಂದು ಅತ್ತಿತು.

ಮಾರನೆದಿನವೆ ಅನಾಥಾಶ್ರಮದವರು ಒಂದು ಟ್ಯಾಕ್ಸಿನಲ್ಲಿ ಬಂದು ಮಗುವನ್ನೊಯ್ದರು. ಅದನ್ನು ಸಾಕಲೆಂದು ಅವರಿಗೂ ಹಣ ದೊರೆತಿತ್ತು.

ಅಭಯಧಾಮದ ಮುಖವನ್ನೇ ಕಂಡಿರದ ಗಂಡಸೊಬ್ಬರು ಪ್ರಭಾಳ ತಂದೆ - ಅಭಯಧಾಮದ ಬೆಳವಣಿಗೆಯ ವೆಚ್ಚಕ್ಕಾಗಿ ಐದು ಸಾವಿರ ರೂಪಾಯಿಗಳಿಗೆ ಒಂದು ಚೆಕ್ ಕಳುಹಿಸಿಕೊಟ್ಟರು.

ಆ ವಿಷಯವನ್ನು ಕಾರ್ಯದರ್ಶಿನಿಯಿಂದ ಕೇಳಿ ತಿಳಿದ ಬಳಿಕ ಸರಸಮ್ಮ ತುಂಗಮ್ಮನಿಗೆ ಹೇಳಿದರು.

"ನೋಡಿದ್ಯಾ ತುಂಗ? ಹೀಗಿದೆ ಪ್ರಪಂಚ."

"ಹೂಂ ದೊಡ್ಡಮ್ಮ."

"ಈ ಹಣ ನಮಗೆ ಬೇಕೇ ಬೇಕು. ಬರೀ ಸರಕಾರದ ಒಂದಿಷ್ಟು ದಾನದಿಂದಲೇ ಇಂಥ ಸಂಸ್ಥೆ ನಡೆಸೋದು ಸಾಧ್ಯವೆ."

"ಆದರೆ ಅವಳು ಪ್ರಭಾ—"

"ಈಗ ಹೇಳ್ತೀನಿ ತುಂಗ. ಹುಡುಗರ ಜತೆ ಓಡಾಡೋದು ಅವಳಿಗೆ ಆಟವಾಗಿತ್ತಂತೆ. ಏನೂ ಆಗಬಾರದೆಂದು ಮುಂಜಾಗ್ರತೆ ವಹಿಸ್ಕೊಂಡಿದ್ಲು. ಆದರೂ ಹೀಗಾಯ್ತು. ಇಂಥವನೇಂತ ಹೇಳೋದಕ್ಕೂ ಅವಳಕೈಲಿ ಆಗ್ಲಿಲ್ವಂತೆ....ಇನ್ನು ಆ ಮಗು ಅನಾಥಾಶ್ರಮದ್ದು. ಅದರ ಪಾಲಿಗೆ ತಂದೆಯೂ ಇಲ್ಲ ತಾಯಿಯೂ ಇಲ್ಲ. ಇನ್ನು ಆ ಪ್ರಭಾನೋ. ಆಕೆಯ ಮನಸ್ಸಿನಲ್ಲಿ ಪಶ್ಚಾತ್ತಾಪದ ಭಾವನೆ ಇದೇಂತ ಯಾವ ಆಧಾರದ ಮೇಲೆ ಹೇಳೋಣ?"

ಆ ಮಾತು ನಿಜವಾಗಿತ್ತು.

ಆ ಪ್ರಭಾ ತನ್ನ ಹಾಗೆ ಮೋಸಹೋಗಿರಲಿಲ್ಲ ಹಾಗಾದರೆ.

"ಶ್ರೀಮಂತರು ಎಲ್ಲ ಹುಡುಗೀರೂ ಹೀಗೆಯೇ ಇರ್ತಾರ ದೊಡ್ಡಮ್ಮ?"

"ಛೆ! ಛೆ! ಹಾಗಲ್ಲ ತುಂಗ. ಎಲ್ಲೋ ಕೆಲವರು ಹೀಗಿರ್ತಾರೆ ಅಷ್ಟೆ. ಇವರು ಬದುಕೋ ರೀತಿಯೇ ಇಂಥಾದ್ದು. ಹಿಂದೆ ಇಲ್ಲಿ ಸುಲೋಚನಾಂತ ಒಬ್ಬಳಿದ್ಲು. ಶ್ರೀಮಂತರ ಹುಡುಗಿಯೇ....ಆದರೆ ಇಲ್ಲಿಗೆ ಬಂದ್ಮೇಲೆ ಹ್ಯಾಗೆ ಬದಲಾದ್ಲೂಂತ! ಎಲ್ಲರ ಜತೇಲಿ ಅನ್ಯೋನ್ಯವಾಗಿದ್ದು, ಎಲ್ಲರ ಪ್ರೀತಿಗೂ ಪಾತ್ರಳಾದ್ಲು. ಈಗನೋಡು, ಈ ಪ್ರಭಾ ಹೋದಾಗ ನಮ್ಮ ಹುಡುಗೀರಿಗೆ ಏನಾದರೂ ಬೇಸರವಾಯ್ತೆ? ಸುಲೋಚನಾ ಹೊದಾಗ ಹಾಗಲ್ಲ....ಅವಳೂ

ಅಷ್ಟೇ. ತನ್ನ ಮಗೂನ ಬಿಟ್ಟು ಹೋಗೋಕೆ ಒಪ್ಲೇ ಇಲ್ಲ. ಆದರೆ ಮನೆ ತನದ ಗೌರವದ ಪ್ರಶ್ನೆ. ಒತಾಯಮಾಡಿ ಕರ್ಕೊಂಡು ಹೋದ್ರು...."

"ಹೌದು ದೊಡ್ಡಮ್ಮ. ಮನುಷ್ಯರು ಅಂದ್ಮೇಲೆ ಒಳ್ಳೆಯವರೂ ಇರ್‍ತಾರೆ ಕೆಟ್ಟವರೂ ಇರ್‍ತಾರೆ."

"ನಿಜ. ಆದರೆ, ಕೆಟ್ಟವರು ಒಳ್ಳೆಯವರಾಗೋಕೆ ಪ್ರಯತ್ನಿಸ್ಬೇಕು. ಒಳ್ಳೆಯವರು ಕೆಟ್ಟವರಾಗದಹಾಗೆ ಎಚ್ಚರವಾಗಿರ್ಬೇಕು. ಅಲ್ವಾ ?"

"ಹೂಂ. ಹೌದು."

ರಾತ್ರೆ ಮಲಗುವುದಕ್ಕೆ ಮುಂಚೆ ತುಂಗಮ್ಮ, ಪ್ರಭಾ ಎಂಬ ಹುಡುಗಿ ಬಂದು ಹೋದ ವಿಷಯ, ತಂದೆಗೆ ವಿವರವಾಗಿ ಕಾಗದ ಬರೆದಳು.

ಬರೆದ ಬಳಿಕ ಆದ್ಯಂತವಾಗಿ ಓದಿದಳು. ಮನಸಿಗೆ ತೃಪ್ತಿಯಾಗಲಿಲ್ಲ. ಇದನ್ನು ತಂದೆಗಾದರೂ ಯಾಕೆ ಬರೆಯಬೇಕು ಎಂದು ಕೊಂಡಳು.

ಕಾಗದ ಹರಿದು ಚೂರಾಯಿತು. ಬೆಳಿಗ್ಗೆ ಬಚ್ಚಲು ಒಲೆಗೆ ಹಾಕ ಲೆಂದು ಆ ಚೂರುಗಳನ್ನೆಲ್ಲ ಮುದುಡಿಸಿ ಮುದ್ದೆಮಾಡಿ ತನ್ನ ಚಾಪೆಯ ಕೆಳಗಿರಿಸಿದಳು.

ಮನಸಸ್ಸು ಬೇಸರಕ್ಕೆ ಗುರಿಪಡಿಸಿದ ಯೋಚನೆಗಳನ್ನು ಓಡಿಸಲೆತ್ನಿ ಸುತ್ತಾ ದುಪಟಿ ಹೊದೆದುಕೊಂಡು ತುಂಗಮ್ಮ ನಿದ್ದೆಗೆ "ಬಾ ಬಾ ಬಾ" ಎಂದಳು. ಒಂದು, ಎರಡು, ಮೂರು, ಎಂದು ನೂರರ ತನಕ ಎಣಿಸ ಹೊರಟಳು. ಆ ಸಂಖ್ಯೆ ಅರುವತ್ತರ ಗಡಿ ದಾಟಿತೋ ಇಲ್ಲವೋ....

೧೭

ಆ ಭಾನುವಾರ ಸಂಜೆ ಸರಸಮ್ಮ ಅಭಯಧಾಮದಲ್ಲಿರಲಿಲ್ಲ. ಜಲಜ-ಸಾವಿತ್ರಿಯರನ್ನು ಕರೆದುಕೊಂಡು, ಸಾಮಾನುಕೊಳ್ಳಲೆಂದು ಮಾರ್ಕೆಟಿಗೆ ಹೋಗಿದ್ದರು. ತುಂಗಮ್ಮ ಒಬ್ಬಳೇ ಕಿಟಕಿಯ ಎಡೆಯಿಂದ ಹೊರ ನೋಡುತ್ತ ಕುಳಿತಿದ್ದಳು ...

ಆಕಾಶ ಶುಭ್ರವಾಗಿರಲಿಲ್ಲ. ಕರಿಯ ಮೋಡಗಳು ಕವಿದುಕೊಂಡಿದ್ದುವು. ಆ ಮೋಡಗಳನ್ನು ಚೆದುರಿಸಿ ಓಡಿಸುವಂತಹ ಬಲವಾದ ಗಾಳಿಯೂ ಇರಲಿಲ್ಲ. ಮಳೆ ಬರುವ ಲಕ್ಷಣ.

'ಇವತ್ತು ಇವರೆಲ್ಲ ಒದ್ದೆಯಾಗದೆ ವಾಪಸು ಬರೊಲ್ಲ'

—ಎಂದು ಮನಸಿನಲ್ಲೆ ತುಂಗಮ್ಮ ಅಂದುಕೊಂಡಳು.

ಅಷ್ಟರಲ್ಲೆ ಯಾರೋ ಅಭಯಧಾಮದತ್ತ ಬರುತಿದ್ದುದು ಕಂಡಿತು. ಆತ ಸಮೀಪಿಸಿದಂತೆ, ಪರಿಚಯದ ವ್ಯಕ್ತಿ ಎನಿಸಿತು ತುಂಗಮ್ಮನಿಗೆ.

"ಮಹಾಬಲ!"

ಎಂದು, ತುಂಗಮ್ಮನ ತುಟಿಗಳೆಡೆಯಿಂದ ಆಶ್ಚರ್ಯದ ಸ್ವರ ಹೊರಟಿತು. ಸಂತೋಷವಾಯಿತು ಆಕೆಗೆ. ಒಳಗೆ ಕುಳಿತು ಬೇಸರವಾಗಿ, ಹರಟೆ ಹೊಡೆಯಲು ಹೊರಗಿನವರು ಯಾರಾದರೂ ದೊರೆತರೆ ಸಾಕು ಎನ್ನುವಂತಹ ಮನೋಸ್ಥಿತಿ. ಬರುತಿದ್ದ ಮಹಾನುಭಾವನೋ, ಮನೆಯಳಿಯ! ತುಂಗಮ್ಮ ಲಗುಬಗೆಯಿಂದ ಎದ್ದು ಬಾಗಿಲು ತೆರೆದಳು.

ಆತ ವೇಗವೇಗವಾಗಿ ಹೆಜ್ಜೆಗಳನ್ನಿರಿಸಿ ಬಾಗಿಲ ಬಳಿ ಬಂದ.

ಅಯ್ಯೋ! ಇದೇನೀವೇಷ? ಕೆದರಿದ ಕೂದಲು, ಮಾಸಿದ ಬಟ್ಟೆ, ವಿವರ್ಣವಾದ ಮುಖ....'ಕನಕಲಕ್ಷ್ಮಮ್ಮ ಹೇಗಿದಾಳೆ?' ಎಂದು ಕೇಳಬೇಕೆಂದು ತುಂಗಮ್ಮ ತೆರೆದಬಾಯಿ ಹಾಗೆಯೇ ಉಳಿಯಿತು.

ಆತ ಕಂಪಿಸುವ ಧ್ವನಿಯಲ್ಲಿ ಗಟ್ಟಿಯಾಗಿಯೆ ಕೇಳಿದ:

"ನನ್ನ ಹೆಂಡ್ತಿ ಇಲ್ಲಿಗೆ ಬಂದವ್ಳಾ ?"

ತುಂಗಮ್ಮನಿಗೆ ಆ ಪ್ರಶ್ನೆ ಕೇಳಿ ಸೋಜಿಗವೆನಿಸಿತು ಆಕೆ ಅಂದಳು :

"ಒಳಗ್ಬನ್ನಿ"

ಆತ ಒಳಕ್ಕೆ ಬಂದೊಡನೆ ಎಂದಿನಂತೆ ತುಂಗಮ್ಮ ಬಾಗಿಲಿಗೆ ಬೀಗ ತಗಲಿಸಿದಳು.

"ಕನಕಲಕ್ಷ್ಮಮ್ಮ ಇಲ್ಲಿಗೆ ಬಂದವ್ರೇನ್ರಿ ?"

"ಇಲ್ವಲ್ಲಾ !"

"ತಮಾಷೆ ಮಾಡ್ಬೇಡಿ. ನಿಜ ಹೇಳಿ."

"ಇಲ್ಲ ಕಣ್ರೀ....!"

"ಅಯ್ಯೊ ! ಇನ್ನೇನಪ್ಪಾ ಗತಿ ?"

—ಎನ್ನುತ್ತ ಮಹಾಬಲ ಒರಗು ಬೆಂಚಿನಲ್ಲಿ ಕುಸಿಕುಳಿತ.

ಗಂಡಸಿನ ಸ್ವರ ಕೇಳಿ ಹುಡುಗಿಯರು ಅತ್ತ ಬಂದರು. ಮಹಾಬಲನನ್ನು ನೋಡಿ, ಆಫೀಸು ಕೊಠಡಿಯ ಬಾಗಿಲಲ್ಲೆ ಗುಂಪುಕಟ್ಟಿ ನಿಂತರು.

"ಅಮ್ಮ ಎಲ್ಲಿ ?"

"ಹೊರ ಹೋಗಿದಾರೆ."

"ಅಯ್ಯೊ ಶಿವನೆ ! ನನ್ನ ಗತಿ ಹೀಗಾಯ್ತಲ್ಲಪೊ !"

ಲಲಿತೆಯೊಬ್ಬಳೇ ಹುಡುಗಿಯರ ಗುಂಪನ್ನು ದಾಟಿ ಒಳ ಬಂದಳು :

"ಏನ್ರಿ ಅದು ? ಏನುಗಲಾಟೆ ?"

"ನನ್ನ ಹೆಂಡ್ತಿ ಓಡ್ಹೋದ್ಲಪೋ ಓಡ್ಹೋದ್ಲು."

ಹುಡುಗಿಯರಲ್ಲಿ ನಾಲ್ಕಾರು ಜನ ಮಾತ್ರ ನಕ್ಕರು. ಉಳಿದವರ ಮುಖಗಳು ಕಪ್ಪಿಟ್ಟುವು. ಕನಕಲಕ್ಷ್ಮಮ್ಮ ಓಡಿ ಹೋಗುವುದೆಂದರೆ ಅಭಯ ಧಾಮಕ್ಕೇ ಅವಮಾನವಾದ ಹಾಗೆ....

ಗದರಿಸುವ ಧ್ವನಿಯಲ್ಲಿ ಲಲಿತ ಅಂದಳು :

"ಆಕೆ ಓಡ್ಹೋದ್ಲೊ ? ನೀವೇ ಓಡ್ಸಿದ್ರೊ ?"

"ಅಯ್ಯೊ ! ಒಂದೆಳೆ ಸರ ಮಾಡಿಸಿಹಾಕಿದ್ದೆ....ಒಂದು ಜತೆ ಚಿನ್ನದ ಬಳೆಗ್ಳು........ರೇಷ್ಮೆಸೀರೆ........ಎಲ್ಲಾ ಹೊಡ್ಕೊಂಡು ಹೋದಳಲ್ಲಪ್ಪೋ ಭಗವಂತಾ !"

"ಸಾಕು ಸುಮ್ನಿರಿ!"

ಲಲಿತೆಯ ಗದರಿಕೆಯಧ್ವನಿ ಕೇಳಿ ಆ ಮಹಾಬಲ ಗೋಳೋ ಎಂದು ಅತ್ತ. ನಡುವೆ ಒಮ್ಮೆಲೆ ಅಳು ನಿಲ್ಲಿಸಿ ಕೇಳಿದ:

"ಹಾಗಾದರೆ ಇಲ್ಲಿಗೆ ಬರ್ಲಿಲ್ಲ ಅನ್ನಿ."

"ಇಲ್ಲ, ಇಲ್ಲಿಗ್ಬರ್ಲಿಲ್ಲ."

"ಇನ್ನೇನಪ್ಪಾ ಗತಿ ನಂಗೆ?"

ಮತ್ತೆ ಏಕಪ್ರಕಾರವಾದ ಅಳು.

"ಹೆಂಗಸರ ಹಾಗೆ ಅಳ್ತೀರಲ್ರೀ—"

ತನ್ನ ಜಾತಿಯನ್ನು ಹಾಗೆ ಮೂದಲಿಸುವ ಮನಸಿಲ್ಲದಿದ್ದರೂ ಲಲಿತ ಬಳಕೆಯಲ್ಲಿದ್ದ ಆ ಮಾತನ್ನು ಅಂದಳು. ಆದರೆ ಆ ಮಹಾಬಲ ಹಾಗೆಲ್ಲ ಅನ್ನಿಸಿಕೊಂಡು ನಾಚುವ ಆಸಾಮಿಯಾಗಿರಲಿಲ್ಲ.

"ನೀವು ಕನಕಂಗೆ ಹೊಡೆದು ಗಿಡದು ಏನಾದರೂ ಮಾಡಿದ್ರಾ?"

"ಇಲ್ಲಪ್ಪಾ ಇಲ್ಲ. ದೇವರಹಾಗೆ ನೋಡ್ಕೋತಿದ್ದೆ."

ಅವನು ಸುಳ್ಳು ಹೇಳುತ್ತಿರಲಿಲ್ಲ. ಮಾತಿನ ಸತ್ಯತೆಯನ್ನು ಆ ಮುಖವೇ ಸಾರುತಿತ್ತು. ತುಂಗಮ್ಮನಿಗೆ ಇದರಿಂದ ದುಃಖವಾಯಿತು. ಲಲಿತೆಗೂ ಕೂಡಾ. ಕನಕಲಕ್ಷ್ಮ ಓಡಿಯೇ ಹೋಗಿದ್ದಳು. ಅದರಲ್ಲಿ ಸಂದೇಹವಿರಲಿಲ್ಲ ತುಂಗಮ್ಮ ಅಲ್ಲಿ ನೆರೆದಿದ್ದ ಒಬ್ಬೊಬ್ಬ ಹುಡುಗಿಯ ಮುಖವನ್ನೂ ನೋಡಿದಳು. ಎಂಥೆಂಥ ಭಾವನೆಗಳಿದ್ದುವು ಅಲ್ಲಿ! ಮಹಾಬಲ ನಿಗಾಗಿ ಮರುಕವೆ? ತಿರಸ್ಕಾರವೆ? ಅಥವಾ....ಅಥವಾ....ತಾವೂ ಮದುವೆಯ ನೆಪದಲ್ಲಿ ಹೊರ ಹೋಗಿದ್ದರೆ ಓಡಿಹೋಗಬಹುದಾಗಿತ್ತು ಎಂಬ ಭಾವನೆಯೆ?

ಅಳುತಳುತ ಮಹಾಬಲ ನಡೆದುದನ್ನು ಹೇಳಿದ. ಹೇಳಲು ಹೆಚ್ಚೇನೂ ಇರಲಿಲ್ಲ. ಹೀಗಾಗಿ ಆತ ಅದನ್ನೆ ಮತ್ತೆ ಮತ್ತೆ ಪಾಠ ಒಪ್ಪಿಸಿದ.

"ನಿನ್ನೆ ಬೆಳಗಿನ ಜಾವದಲ್ಲೇ ನಾನು ಮನೆ ಬಿಟ್ಟೆ. ಸಾಹೇಬರ ಜತೇಲಿ ಸರ್ಕೀಟು ಹೋಗ್ಬೇಕಾಯ್ತು. ಇವತ್ತು ಮಧ್ಯಾಹ್ನ ವಾಪ್ಸು ಬಂದೆ. ಮನೆಗೆ ಬೀಗ ಇಕ್ಕಿತ್ತು. ಅಂಗಡಿ ಬೀದಿಗೆ ಹೋಗಿದಾಳೇನೋಂತ ಹಾದಿ

ನೋಡ್ತಾ ನಿಂತೆ. ಪಕ್ಕದ್ಮನೆಯೋರು ಅವಳಿಲ್ಲಾ ಅಂದ್ರು ಶೇಷಾದ್ರಿ ಪುರದಲ್ಲಿ ಅಕ್ಕನ್ಮನೆ ಇದೆ, ಅಲ್ಲಿಗೆ ಹೋಗ್ತೀನಿ, ಅಂತ ಹೇಳಿ ನಿನ್ನೆಯೇ ಹೊರಟೋದ್ಲಂತೆ. ಆದರೆ ನಂಗೆ ಗೊತ್ತಿಲ್ವಾ, ಅವಳಿಗೆ ಈ ಊರಲ್ಲಿ ಯಾರೂ ಇಲ್ಲ ಅನ್ನೋ ವಿಷಯ? ಯಾಕೋ ಸಂಶಯ ಬಂತು. ಅದೇ ನಿದ್ರೂ ನಿಮ್ಮನ್ನೆಲ್ಲಾ ನೋಡೋಕೆ ಇಲ್ಲಿಗೇ ಬಂದಿರ್ಬ್ಬೋದೂಂತ ಅಂದ್ಕೊಂಡು ಓಡ್ಬಂದೆ.''

"ಒಳ್ಳೇ ಕೆಲಸ ಮಾಡ್ದೆ"

—ಎಂದಳು ಹುಡುಗಿಯೊಬ್ಬಳು.

"ಹಾಂ? ಏನಂದ್ರಿ?"

ತುಂಗಮ್ಮನೆಂದುಕೊಂಡಳು: ಬೆಪ್ಪು-ಶುದ್ಧ ಬೆಪ್ಪು. ಎಂತಹ ಅಚಾತುರ್ಯವಾಗಿ ಹೋಯಿತು! ಕನಕಲಕ್ಷ್ಮಮ್ಮನ್ನ ಇವನಿಗೆ ಕೊಡಲೇ ಬಾರದಾಗಿತ್ತೇನೋ, ಅನ್ಯಾಯವಾಗಿ ಆಕೆ ಬೀದಿ ಪಾಲಾದಳು. ಹುಚ್ಚಿ! ಹಾಗೂ ಮಾಡಬೇಕಾಗಿತ್ತೆ? ಅಭಯಧಾಮಕ್ಕೇ ವಾಪಸು ಬರಬಾರದಾಗಿತ್ತೆ?

ಬೇಗನೆ ಒಮ್ಮೆ ದೊಡ್ಡಮ್ಮ ಬಂದರೆ—ಎನಿಸಿತು. ಏನಾದರೂ ಮಾಡಿ ಕನಕಲಕ್ಷ್ಮಮ್ಮನನ್ನು ಉಳಿಸಿಕೊಳ್ಳುವುದು ಸಾಧ್ಯವಿದ್ದರೆ—ಅದು ಅವರಿಂದ ಮಾತ್ರ. ಆದರೆ ಅವರು ಅಷ್ಟು ಬೇಗನೆ ಬರುವ ಲಕ್ಷಣವಿರಲಿಲ್ಲ.

ಮಳೆ ಮಾತ್ರ ಬಂತು. ಧೊ ಎಂದು ಸುರಿಯಿತು. ಹುಡುಗಿಯರು, ತಮ್ಮ ಬಟ್ಟೆಬರೆಗಳು ತೋಯದಂತೆ ಮುನ್ನೆಚ್ಚರಿಕೆ ವಹಿಸಲು ಓಡಿಹೋದರು ಅಡುಗೆಮನೆಯಲ್ಲಿ ರಾತ್ರೆಗೆ ಸಿದ್ಧತೆಯೂ ಆಗ ತೊಡಗಿತು.

ಹೊರಗೆ ಮಳೆ ನೀರು ಬೀಳತೊಡಗಿದ ಮೇಲೆ ಮಹಾಬಲನ ಅಳು ನಿಂತಿತು. ಆತ ಬೆಂಚಿನಮೇಲೆ ಕಾಲುಗಳನ್ನಿರಿಸಿ, ಕೈಗಳಿಂದ ಸುತ್ತಿಕೊಂಡು, ಹೃದಯದೊಳಗಿನ ಛಳಿಗಾಗಿ ಕುಟುಕುಟು ಹಲ್ಲುಕಡಿಯುತ್ತ ಕುಳಿತ. ಮಳೆಯ ಕತ್ತಲೆಗಾಗಿ ತುಂಗಮ್ಮ ದೀಪಉರಿಸಿದಳು. ಆದರೆ ಮಳೆ ನಿಂತಾಗ ನಿಜವಾಗಿಯೂ ಕತ್ತಲಾಗಿತ್ತು.

ಆಮೇಲೆ ಸರಸಮ್ಮ ಜಲಜ—ಸಾವಿತ್ರಿಯರೊಡನೆ ಬಂದರು.

ಬಂದಾಗ ಅವರ ಮೈ ಮಾತ್ರ ತೋಯ್ದಿತ್ತು. ಆದರೆ ಮಹಾಬಲನ ಗೋಳಿನ ಕತೆ ಕೇಳಿದ ಮೇಲೆ ಅವರ ಮನಸ್ಸೂ ತೋಯ್ದುಹೋಯಿತು.

ಹಿಂದೆ ಎಂದೂ ಅವರಮುಖ ಅಷ್ಟೊಂದು ಕಪ್ಪಿಟ್ಟಿದನ್ನ ತುಂಗಮ್ಮ ನೋಡಿರಲಿಲ್ಲ. ಇನ್ನೂ ಒಂದು ಹುಡುಗಿಯನ್ನ ಸಂಸಾರವಂದಿಗಳಾಗಿ ಮಾಡಿ ಧನ್ಯಳಾದೆ ಎಂದು ಸರಸಮ್ಮ ಭಾವಿಸಿಕೊಂಡಿದ್ದ ಸ್ವಲ್ಪ ಸಮಯದಲ್ಲೇ—

"ಪೋಲೀಸರಿಗೆ ತಿಳಿಸಿದೀರಾ ?"

"ಇನ್ನೂ ಇಲ್ರಮ್ಮ. ತಿಳಿಸ್ಲಾ ?"

"ಹೂಂ. ಈಗ್ಲೇ ತಿಳಿಸಿ."

ಅವರು ಮಾಡುವಂಥಾದ್ದೇನೂ ಉಳಿದಿರಲಿಲ್ಲ. ಆದರೂ ಮಹಾಬಲ ಪೂರ್ತಿ ನಿರಾಸೆಗೊಳ್ಳಬಾರದೆಂದು ಅವರೆಂದರು :

"ನಾವೂ ಹುಡುಕ್ತೀವಿ. ಏನಾದರೂ ಗೊತ್ತಾದ್ರೆ ಹೇಳಿ ಕಳಿಸ್ತೀವಿ."

"ನಾನೇ ಬರ್ತೀನ್ರಮ್ಮ."

"ಬೇಡಿ. ಹ್ಯಾಗೂ ನಿಮ್ಮನೆ ಗೊತ್ತಿದೆಯಲ್ಲ....ನಾವೇ ಬಂದು ಹೇಳ್ತೀವಿ."

ಅಂತೂ ಮಹಾಬಲ ಹೊರಬಿದ್ದ. ಬೀದಿಗಿಳಿಯುವಲ್ಲಿ ನೀರು ನಿಂತು ಮಣ್ಣು ತೇವವಾಗಿ ಅಂಟುಅಂಟಾಗಿತ್ತು. ಮಹಾಬಲನ ಕಾಲು ಜಾರಿತು. ಬೇಗನೆ ಎದ್ದು ನಿಂತು, ಹಿಂತಿರುಗಿ ನೋಡಿದ. ಅಭಯಧಾಮದ ಬಾಗಿಲು ಮುಚ್ಚಿತ್ತು. ಅದರಮೇಲೆ ಉರಿಯುತಿತ್ತುದೀಪ. ಕಿಟಕಿಯಲ್ಲೂ ಯಾರೂ ಇರಲಿಲ್ಲ....ಕಾಲಿಗೆ ಸ್ವಲ್ಪ ನೋವಾಗಿದ್ದಂತೆ ತೋರಿತು ಮಹಾಬಲನಿಗೆ. ಆತ ಕುಂಟುತ್ತ ತನ್ನ ಪ್ರದೇಶದ ಪೋಲೀಸ್ ಸ್ಟೇಷನಿನ ಹಾದಿಹಿಡಿದ.

....ಆರಾತ್ರೆ, ನೊಂದಿದ್ದ ಸರಸಮ್ಮನನ್ನ ಮಾತನಾಡಿಸುವ ಧೈರ್ಯ ತುಂಗಮ್ಮನಿಗಾಗಲಿಲ್ಲ.

ಮಾರನೆದಿನ ಕನಕಲಕ್ಷ್ಮಮ್ಮನ ವಿಷಯತಿಳಿದು ಅಭಯಧಾಮದ ಕಾರ್ಯದರ್ಶಿನಿಯೂ ಬಂದು ಹೋದರು. ಅವರೂ ನಿರಾಸೆಯಿಂದ ನಿಟ್ಟುಸಿರು ಬಿಟ್ಟರು.

ಮೂರನೆದಿನ, ತಿಂಗಳ ಸಂಬಳ ಬಂತು, ಒಂದು ವಾರದ ವೆಚ್ಚಕ್ಕೆ ಬೇಕಾದ ಹಣವೂಕೂಡಾ.

ತುಂಗಮ್ಮ ಕೊಡಬೇಕಾಗಿದ್ದ ಹಬ್ಬದೂಟವೇನೋ ಆಯಿತು. ಆದರೆ ಹೆಚ್ಚಿನವರು ಯಾರೂ ಸಂತೋಷದಿಂದಿರಲಿಲ್ಲ.

ಆ ಸಂದರ್ಭದಲ್ಲಿ ಸರಸಮ್ಮ ಮಾತನಾಡಿದರು. ಅದು ಮಾಮೂಲಿನ ಭಾಷಣವಾಗಿರಲಿಲ್ಲ. ಸಂಕಟಪಡುತ್ತಿದ್ದ ಹೃದಯದಿಂದ ಮಾತುಗಳು ಬಲು ಪ್ರಯಾಸದಿಂದಲೆ ಹೊರಬಂದುವು.

"ಹುಡುಗೀರಾ....ಏನು ಹೇಳಬೇಕೋ ನನಗೆ ತಿಳೀದು....ಕನಕ ಲಕ್ಷಮ್ಮ ಹೀಗೆ ಮಾಡ್ತಾಳೆ ಅಂತ ಯಾರಿಗೆ ಗೊತ್ತಿತ್ತು? ಅಂತೂ ನಾವು ತಲೆ ಎತ್ತೋದು ಕಷ್ಟವಾಯಿತು, ಒಳ್ಳೆಯವರಾಗಿ ಗಂಡನ ಜತೆಯಲ್ಲಿ ಸಂಸಾರ ಮಾಡ್ಬೇಕೂಂತ ನಿಮಗೆ ಯಾರಿಗೂ ಆಸೆ ಇಲ್ವೆ? ಇನ್ನು, ವರ ಹುಡುಕೋದು ಎಷ್ಟು ಕಷ್ಟವಾಗ್ತದೆ ಗೊತ್ತಾ?...."

ತುಂಗಮ್ಮನನ್ನು ಕುರಿತು ಅಭಿನಂದಿಸಿ ಮಾತನಾಡಬೇಕಾಗಿದ್ದವರು, ಕನಕಲಕ್ಷ್ಮಮ್ಮನ ವರ್ತನೆಯಿಂದ ಅಭಯಧಾಮಕ್ಕೆ ತಟ್ಟಿದ ಕಲಂಕದ ವಿಷಯವಾಗಿಯೇ ಮಾತನಾಡಿದರು. ಮಾತನಾಡುತ್ತಾ ಒಮ್ಮೆಲೆ ಅದು ಅವರಿಗೆ ಅರಿವಾಯಿತೇನೊ!

"ಅಂದಹಾಗೆ, ನಾನು ಈ ಹಬ್ಬದೂಟದ ವಿಷಯ ಹೇಳಬೇಕು. ಏನೋ ಹೇಳಬೇಕಾಗಿದ್ದವಳು ಅದನ್ನು ಮರೆತು ಬೇರೇನೋ ಹೇಳ್ತಾ ಇದ್ದೇನೆ. ನಮ್ಮ ತುಂಗಮ್ಮ—"

ಅದು ತುಂಗಮ್ಮನ ಗುಣಗಾನ. ಮಾತನಾಡುತ್ತಿದ್ದಂತೆ, ಹುಡುಗಿಯ ರೆದುರು ಒಬ್ಬಳನ್ನೇ ಹೀಗೆ ಹೊಗಳುವುದು ಸರಿಯಲ್ಲವೆಂದು ಸರಸಮ್ಮನಿಗೆ ತೋರಿತು.

"ತುಂಗಮ್ಮನನ್ನು ನಾನು ಹೊಗಳುವಾಗ ನಿಮ್ಮೆಲ್ಲರನ್ನೂ ಹೊಗಳು ತಿದ್ದೇನೆ ಎಂದು ನೀವು ಭಾವಿಸಬೇಕು. ಮನುಷ್ಯರು ಯಾರೂ ಇದ್ದ ಹಾಗೇ ಇರುವುದಿಲ್ಲ. ಬದಲಾಗುತ್ತಲೇ ಇರುತ್ತಾರೆ. ಈ ಬದಲಾವಣೆ ಎರಡು ವಿಧ. ಕೆಲವರು ಬದಲಾಗುತ್ತ ಮತ್ತೂ ಒಳ್ಳೆಯವರಾಗುತ್ತಾರೆ. ಕೆಲವರು ಮತ್ತೂ ಕೆಟ್ಟವರಾಗುತ್ತಾರೆ. ನಾವು ಮೊದಲನೆಯವರಹಾಗೆ ದಿನಕಳೆಯುತ್ತ ಹೆಚ್ಚು ಹೆಚ್ಚು ಒಳ್ಳೆಯವರಾಗಬೇಕು. ಅಲ್ಲವಾ?...."

ಹೌದು—ಎಂದು ಯಾರೂ ಉತ್ತರಿಸಲಿಲ್ಲ. ಆದರೆ ಆ ಮೌನಕ್ಕಿದ್ದುದು ಅದೇ ಅರ್ಥ.

ಔತಣ ಹಾಗೆ ಕಳೆಯಿತು. ತುಂಗಮ್ಮ ಎಲ್ಲರಿಗಿಂತ ಹೆಚ್ಚು

ದುಃಖಿನಿಯಾಗಿದ್ದಳು. ಕುಲಾವಿ ಕಾಲು ಚೀಲಗಳಿಗಾಗಿ ಉಣ್ಣೆ ಕೊಂಡು ತಂದು ಕನಕಲಕ್ಷ್ಮಮ್ಮನಿಗೆ ಆದಿನ ಕಳುಹಿಸಬೇಕೆಂಬುದು ಅವಳ ಅಪೇಕ್ಷೆ ಯಾಗಿತ್ತು. ಆದರೆ ಆ ಕನಕಲಕ್ಷ್ಮಮ್ಮ—

....ಆದಿನ, ತನ್ನ ಸಂಪಾದನೆ ಕೈಗೆ ದೊರೆತ ಮೊದಲದಿನ, ತುಂಗಮ್ಮ ತನ್ನ ತಂದೆಗೆ ಕಾಗದ ಬರೆಯಲು ಕುಳಿತಳು. ಬರೆವಣಿಗೆ ಬಲು ಕಷ್ಟವಾ ಯಿತು. ಹೃದಯವನ್ನು ಯಾರೋ ಹಿಂಡಿದ ಹಾಗೆ ನೋವಾಯಿತು. ಕನಕ ಲಕ್ಷ್ಮಮ್ಮನ ವಿಷಯ ಬರೆದು, ತನ್ನ ದುಃಖವನ್ನು ಮಾತುಗಳಲ್ಲಿ ಹರಿಯಗೊಡ ಬೇಕೆಂದು ತುಂಗಮ್ಮ ಯೋಚಿಸಿದಳು. ಮರುಕ್ಷಣವೆ, ಛೆ! ಅಭಯಧಾಮ ಇಷ್ಟೇನೆ ಎಂದುಕೊಳ್ಳಬಹುದು ಅಣ್ಣಯ್ಯ. ಆತನಿಗೆ ಈ ವಿಷಯ ಏನನ್ನೂ ಬರೆಯ ಕೂಡದು, ಎಂದು ತೀರ್ಮಾನಿಸಿದಳು. ಹಾಗೆ ಮಗಳು, ಒಲ್ಲದ ನಗೆ ಯನ್ನು ಮುಖದ ಮೇಲೆ ಬರಿಸಿಕೊಂಡು ತಂದೆಗೆ ಒಳ್ಳೆಯ ಕಾಗದ ಬರೆದಳು.

ಆ ವಾರದಲ್ಲಿ ಮತ್ತೊಮ್ಮೆ ಮಹಾಬಲ ಬಂದ. ಹತ್ತು ವರ್ಷಗಳಷ್ಟು ಮುಂದಕ್ಕೆ ಹಾರಿ ಹೋದ ಹಾಗಿತ್ತು ಅವನ ವಯಸ್ಸು. ಗಲ್ಲಗಳು ಬತ್ತಿ ಹೋಗಿ ಕಣ್ಣುಗಳು ಗುಳಿ ಬಿದ್ದಿದ್ದುವು. ಸರಸಮ್ಮ ಮತ್ತು ತುಂಗಮ್ಮನೆದುರು, ನಡೆದುದೆಲ್ಲವನ್ನೂ ಆತ ಹೇಳಿದ.

ಕನಕಲಕ್ಷ್ಮಮ್ಮ ಮನೆಯಿಂದ ಓಡಿ ಹೋದ ಮರುದಿನದಿಂದಲೆ ಮಹಾಬಲ ರಜಾಪಡೆದ. ಕಾಲು ಸ್ವಲ್ಪ ಕುಂಟುತಿದ್ದರೂ ಹುಚ್ಚನಂತೆ ಬೀದಿ ಬೀದಿ ಅಲೆದ. 'ಅಕ್ಕನ ಮನೆ' ಎಂಬುದು ಸುಳ್ಳಾದರೂ, ಆ ಅವಸರದಲ್ಲಿ ಶೇಷಾದ್ರಿಪುರ ಎಂಬುದನ್ನಷ್ಟು ಸತ್ಯವಾಗಿಯೆ ಆಕೆ ಹೇಳಿರಬಹುದೆಂಬುದು ಮಹಾಬಲನ ಊಹೆಯಾಗಿತ್ತು. ಹೀಗಾಗಿ ಸಂಜೆಯ ಹೊತ್ತು ಶೇಷಾದ್ರಿ ಪುರದ ಬೀದಿಗಳಲ್ಲಿ ಎರಡನೆಯ ಬಾರಿ ಸುತ್ತಾಡಿದ.

ಹಾಗೆ ಸುತ್ತಾಡಿ ಬೇಸತ್ತು ಜೋಲುಮೋರೆ ಹಾಕಿಕೊಂಡು ಕಾಫಿ ಯನ್ನಾದರೂ ಕುಡಿಯೋಣವೆಂದು [ಕಾಫಿ ಎಂದ ಆತ; ಹೆಂಡವಿದ್ದರೂ ಇರಬಹುದು!] ಅಂಗಡಿಬೀದಿಗೆ ಬರುತಿದ್ದಾಗ ಆಕೆ ಕಾಣಸಿಕ್ಕಿದಳು. ಪಕ್ಕದ ಬೀದಿಯಲ್ಲಿ ಅವಸರ ಅವಸರವಾಗಿ ಹೋಗುತಿದ್ದಳು. ತಲೆಯ ಮೇಲೆ ಸೆರಗನ್ನು ಹೊದೆದುಕೊಂಡಿದ್ದಳು.

ಮಹಾಬಲ ಓಡಿ ಓಡಿ ಹೋಗಿ ಅವಳನ್ನು ತಡೆದು ನಿಲ್ಲಿಸಿದ. ಆಕೆ ಗಲಾಟೆಮಾಡಲಿಲ್ಲ. [ಹಾಗೆ ಕೂಗಾಡಿರೆ ಜನ ಸೇರುವರೆಂದು, ಪೋಲೀಸರು ಬರುವರೆಂದು, ಗಂಡನ ಜತೆಯಲ್ಲಿ ಕಳುಹಿಕೊಡುವರೆಂದು ಆಕೆಗೆ ಗೊತ್ತಿರಲಿಲ್ಲವೆ?]

ಯಾಚಿಸುವ ಧ್ವನಿಯಲ್ಲಿ ಮಹಾಬಲ ಕೇಳಿದ:

"ಕನಕ, ಯಾಕೆ ಹೀಗ್ಮಾಡ್ದೆ? ಇದು ಸರೀನಾ? ಬಾ ಓಗಾನಾ ಮನೇಗೆ."

"ಊ ಹೂಂ."

"ನೀನು ಮಾಡಿದ್ದೆಲ್ಲಾ ಮರೆತ್ಬುಡ್ತೀನಿ....ಎದರ್ಕ್ಯೋಬೇಡ."

"ಎದರ್ಕೆ!"

"ಯಾಕ್ನಗ್ತೀಯಾ? ಬಾ ನಡಿ. ಓಟ್ಲಾಗೆ ಕಾಫಿ ಕುಡಿಯಾನ."

"ನೀವು ಒಂಟೋಗಿ. ನಾನ್ಬರಾಕಿಲ್ಲ."

"ಯಾಕ?"

ಕನಕಲಕ್ಷ್ಮಮ್ಮ ಮಾತನಾಡಲಿಲ್ಲ. ಅಲ್ಲೇಇದ್ದ ಆಟದ ಬಯಲಿನತ್ತ ಆಕೆಯನ್ನು ಕರೆದೊಯ್ಯುತ್ತ ಮಹಾಬಲ ಅಳು ಬೆರೆತ ಧ್ವನಿಯಲ್ಲಿ ಹೇಳಿದ:

"ಅಂಗನ್ಬ್ಯಾಡ್ವೆ....ಬಾ ಮನೀಗೆ."

ಅವಳು ಬರಲು ಒಪ್ಪಲೇ ಇಲ್ಲ.

"ಎಲ್ಲ್ಹೋಗ್ತೀಯಾ ಈಗ? ನನ್ನೂ ಕರಕೊಂಡು ಓಗು.

"ಇಲ್ಲ! ನೀವು ಅಲ್ಲೆ ಬರಬಾರ್ದು."

"ಇಂಗ್ಮಾಡ್ಬವುದಾ ನೀನು?"

ಕನಕಲಕ್ಷ್ಮಮ್ಮ ಒಂದು ಕ್ಷಣ ಸುಮ್ಮನಿದ್ದು ಅಂದಳು:

"ನೀವು ಒಳ್ಳೆಯೋರು. ನಾನು ತಪ್ಮಾಡಿದೀನಿ. ನನ್ನಕ್ಷಮಿಸ್ಬಿಡಿ. ಬೇರೆ ಮದ್ವೆ ಮಾಡ್ಕೊಳ್ಳಿ."

ಮಹಾಬಲನಿಗೆ ತಾನು ಅಸಹಾಯನೆಂದು ತೋರಿತು. ಮಾತೇ ಹೊರಡಲಿಲ್ಲ....ಕಳೆದು ಹೋಗಿದ್ದ ಕನಕನನ್ನು ಆತ ಮತ್ತೆ ಕಂಡಿದ್ದ. ಆದರೂ ಕೈಗೆಟಕದ ಹಾಗೆ ಎಷ್ಟೊಂದು ದೂರವಿದ್ದಳು ಆಕೆ!

ಒಂದು ಉಪಾಯ ಹೊಳೆದು ಮಹಾಬಲ ಕೊನೆಯ ಯತ್ನವನ್ನು ಮಾಡಿದ:

"ಕನಕ, ದೊಡ್ಡವ್ವನ್ನಲ್ಲಿಗೆ ಓಗಿ ಬರಾನ ನಡಿ."

"ಯಾಕೊ?"

"ಅವ್ರು ನಿನ್ನ ಕರ್ಕೊಂಬಾ ಅಂದ್ರು."

"ಬ್ಯಾಡಪ್ಪ. ಅಲ್ಲಿಗ್ಬರಾಕೆ ನಂಗೆ ಎದ್ರಿಕೆ ಆಗ್ತೇತೆ."

"ನೊಡ್ದಾ! ಅಂಗನ್ಬಾರ್ದು....ದೊಡ್ಡಮ್ಮ ಒಳ್ಳೆಯೋರಲ್ವಾ?"

"ಸಾಕು! ನಾನ್ಹೋಗ್ತೀನಿ!"

ಆಕೆ ಹೊರಟೇ ಹೋಗುವಳೆಂಬುದು ಮಹಾಬಲನಿಗೆ ಸ್ಪಷ್ಟವಾಯಿತು. ನಿರಾಶೆಯ ಮಹಾಪೂರ ತನ್ನನ್ನು ತೇಲಿಸಕೊಂಡು ಹೋಗುತಿದ್ದಂತೆ ತೋರಿತು. ಬದುಕು, ಬಡತನ, ಭವಿಷ್ಯತ್ತುಗಳು ಅವನ ಮುಂದೆ ಸುಳಿದಾಡಿದುವು. ಮಹಾಬಲ ಕನಕಲಕ್ಷ್ಮಮ್ಮನನ್ನೇ ನೋಡಿದ. ಕೊರಳಲ್ಲಿ ತಾನು ಕೊಟ್ಟಿದ್ದ ಸರವಿರಲಿಲ್ಲ. ಬಳೆಗಳಿರಲಿಲ್ಲ ಕೈಗಳಲ್ಲಿ. ಆ ಸೀರೆಯೂ ಬೇರೆಯೇ.

"ಸರ—ಬಳೆ ಏನ್ಮಾಡ್ದೆ?"

ತುಟಿಗಳ ನಡುವೆ ಎಂಜಲನ್ನು ಹೊರತಂದು ಒಳಕ್ಕೊಯ್ದು, ಕಣ್ಣುಗಳನ್ನು ಕಿರಿದು ಗೊಳಿಸಿ, ಆಕೆಯೆಂದಳು:

"ಕಳೆದ್ಹೋಯ್ತು."

"ಸುಳ್ಳು! ಸುಳ್ಳು!"

ಅದು ಸುಳ್ಳೆಂಬ ವಿಷಯದಲ್ಲಿ ಸಂಶಯವಿರಲಿಲ್ಲ ಮಹಾಬಲನಿಗೆ. ತನ್ನ ಮನೆಗೆ ಬಂದ ಮೇಲೆ ಆಕೆ, ಅಭಯಧಾಮದಲ್ಲಿ ಏಳುತಿದ್ದಂತೆ ನಸುಕಿನಲ್ಲೇ ಏಳುತಿದ್ದುದು; ಮನೆಯನ್ನು ಗುಡಿಸಿ ಸಾರಿಸಿ ಚೊಕ್ಕಟವಾಗಿಡುತಿದ್ದುದು; ಬಚ್ಚಲಿಗೆ ಉರಿಹಾಕಿ ನೀರು ಬಿಸಿಮಾಡಿ ತನ್ನನ್ನು ಎಬ್ಬಿಸುತಿದ್ದುದು: ರಾತ್ರೆ ಆಕೆಯ ಯೌವನದ ಮೈ ತನಗೆ ಕೊಡುತಿದ್ದ ಸ್ಪರ್ಶಸುಖ; ಎಲ್ಲವನ್ನೂ ಆ ಕ್ಷಣವೇ ಮಹಾಬಲ ಮರೆತ. ಅವನೆದುರು ಹೊಳೆದುದೊಂದೇ ವಿಷಯ: 'ಈಕೆ ಕಳ್ಳಿ—! ಸುಳ್ಳಿ!'

ಸೀರೆಎಲ್ಲಿ ಎಂದೂ ಕೇಳಬಹುದಾಗಿತ್ತು. ಆದರೆ ಅಭಿಮಾನಿಯಾದ ಮಹಾಬಲ ಕೇಳಲಿಲ್ಲ. ಅದನ್ನು ಆತ ಮರೆಯಲೆತ್ನಿಸಿದರೂ ಆ ಸೀರೆ

ಯನ್ನುಟ್ಟು ಆಕೆ ಇನ್ನೊಬ್ಬ ಗಂಡಸಿನೊಡನೆ ಸರಸವಾಡಬಹುದೆಂಬ ಕಲ್ಪನೆಯಿಂದ ಆತನಿಗೆ ನೋವಾಯಿತು.

ನೋವನ್ನೆಲ್ಲ ಪುರೆಯುವಂತೆ ಮಹಾಬಲ ಹಲ್ಲುಕಡಿದು, ಉಗುಳನ್ನು 'ಥೂ' ಎಂದು ಹೊರಕ್ಕೆ ಉಗುಳಿ ಕೊಳೆಯ ಮಾತು ಹೇಳಿದ:

"ಹೋಗು! ತೊಲಗಿ ಹೋಗು! ಹಾಳಾಗಿಹೋಗು!"

ಅವಳು ಸರಸರನೆ ಹೊರಟೇ ಹೋದಳು. ಆಕೆಯ ಹಿಂದೆ ಓಡಿ ಹೋಗಿ ಕಾಲುಕಟ್ಟಿಕೊಂಡು ಬೇಡೋಣವೆನಿಸಿತು ಆತನಿಗೆ. ಆದರೆ ಕಾಲುಗಳು ಚಲಿಸಲು ನಿರಾಕರಿಸಿದುವು. ಆತ ಅಲ್ಲೆ ಆಟದ ಬಯಲಿನಲ್ಲಿ ಕುಸಿಕುಳಿತು, ಬಹಳ ಹೊತ್ತು ಮಗುವಿನಂತೆ ಅತ್ತ.

ಅದು ನಿನ್ನೆ. ಈದಿನ ಅದನ್ನು ಸರಸಮ್ಮ ಮತ್ತು ತುಂಗಮ್ಮನೆದುರು ವಿವರಿಸಿದಾಗ ಮಹಾಬಲ ಹೆಚ್ಚು ಕಡಿಮೆ ನಿರ್ವಿಕಾರನಾಗಿಯೇ ಇದ್ದ.

ವಿವರಣೆ ಮುಗಿದಮೇಲೆ ಆತ ಅಂದ:

"ಕನಕ ಹೊರಟೋಗಿದ್ರೂ ಪರವಾಇರ್ಲಿಲ್ಲ. ಆದರೆ ಅವ್ಳು ಸುಳ್ಹೇಳಿದ್ಲು. ಸರ—ಬಳೆ ಕಳೆದ್ಹೋಯ್ತು ಅಂದ್ಲು!"

ಮಗಳು ಮಾಡಿದ್ದ ತಪ್ಪಿಗೆ ತಾಯಿಯೇ ಜವಾಬ್ದಾರಳಾದ ಹಾಗಿತ್ತು ಸರಸಮ್ಮನ ಪರಿಸ್ಥಿತಿ. ಆದರೂ ಸಂತೈಸುವ ಧ್ವನಿಯಲ್ಲಿ ಅವರು ಹೇಳಿದರು:

"ಬೇಜಾರು ಪಟ್ಕೋಬೇಡಿ. ಆದದ್ದು ಆಗ್ಹೋಯ್ತು. ಕನಕಲಕ್ಷ್ಮಿ ಹೀಗೆ ಮೋಸ ಮಾಡ್ಬಹುದೂಂತ ನಾವು ಭಾವಿಸಿರ್ಲಿಲ್ಲ. ನಮ್ಮ ದುರ್ದೈವ."

ಕನಕಲಕ್ಷ್ಮಿ ತಪ್ಪು ಮಾಡಿದಳೆಂದು ಸರಸಮ್ಮ ಒಪ್ಪಿಕೊಂಡುದರಿಂದ ಮಹಾಬಲನಿಗೆ ಒಂದು ರೀತಿಯ ಸಮಾಧಾನವಾಯಿತು. ತನ್ನನ್ನು ಕುರಿತು ತೋರಿದ ಸಹಾನುಭೂತಿ ಪ್ರಿಯವೆನಿಸಿತು.

ಮಹಾಬಲನ ಮನಸ್ಸು ಪ್ರಸನ್ನವಾಗಲೆಂದು ಸರಸಮ್ಮ ಕಾಫಿಯ ಮಾತನ್ನೆತ್ತಿದ್ದಳು.

"ಒಂದಿಷ್ಟು ಕಾಫಿ ಮಾಡಿಸ್ಲಾ?"

"ಬೇಡ್ರಮ್ಮ, ಬೇಡಿ."

ಆ ಕಾಫಿಯ ಪ್ರಸ್ತಾಪ, ಕನಕಲಕ್ಷ್ಮಮ್ಮ ತಂದುಕೊಟ್ಟಿದ್ದ ಕಾಫಿಯ ನೆನಪು ಅವನಿಗೆ ಮರುಕಳಿಸಲು ಕಾರಣವಾಯಿತು. ಅಂತಹ ನೆನಪು ಅಸಹನೀಯವೇ ಆಗಿದ್ದ ಸಂಕಟ....

ಹಾಗೆ ಸ್ವಲ್ಪ ಹೊತ್ತು ಕುಳಿತಿದ್ದು, ಮಹಾಬಲ ಹೊರಟುನಿಂತ. ಸರಸಮ್ಮ ಅವನನ್ನು ಬೀಳ್ಕೊಡಲೆಂದು ಬಾಗಿಲವರೆಗೂ ಬಂದರು.

ಅಲ್ಲಿ ಒಮ್ಮೆಲೆ ಆತ ಅವರ ಪಾದಗಳನ್ನು ಹಿಡಿದುಕೊಂಡ.

"ಛೆ! ಛೆ! ಏಳಿ—ಏಳಿ!"

"ಅಮ್ಮಾ....ನಾನು ಹಾಳಾಗಿ ಹೋದೆ. ನನ್ನನ್ನು ಉದ್ಧಾರಮಾಡಿ."

"ಏನಪ್ಪಾ, ಏನುಬೇಕು?"

"ಅಮ್ಮಾ....ನನಗೆ ಇನ್ನೊಂದು ಹೆಣ್ಣು ಕೊಡ್ಸಿ...."

"ಆ!"

ಸರಸಮ್ಮನ ತೆರೆದಬಾಯಿ ಮುಚ್ಚಿಕೊಳ್ಳಲಿಲ್ಲ ಸ್ವಲ್ಪ ಹೊತ್ತು! ದಂಗುಬಡೆದಹಾಗಾಯಿತು ಅವರಿಗೆ.

ತುಂಗಮ್ಮ ಮಹಾಬಲನ ಮಾತುಕೇಳಿ ಬೆರಗಾಗಿ ಬೆರಳುಗಳಿಂದ ಮೂಗನ್ನು ಒರೆಸಿಕೊಂಡಳು.

"ಏಳು, ಹೇಳ್ತೀನಿ"

—ಎಂದರು ಸರಸಮ್ಮ. ಬಹುವಚನದ ಸಂಬೋಧನೆ ಇನ್ನು ಅನಗತ್ಯವಾಗಿ ಅವರಿಗೆ ತೋರಿತು.

ಆತ ಎದ್ದುನಿಂತ. ಸರಸಮ್ಮನೂ ಅವನೊಡನೆ ಅಂಗಳಕ್ಕಿಳಿದಳು. ಅಲ್ಲಿ ಗಂಭೀರಧ್ವನಿಯಲ್ಲಿ ಒಂದೊಂದೇ ಪದವನ್ನು ಸ್ಪಷ್ಟವಾಗಿ ಆಡುತ್ತ ಅವರೆಂದರು:

"ನಾನು ಹೇಳೋದು ಕೇಳು ಮಹಾಬಲ. ಈ ಅಭಯಧಾಮದ ಹುಡುಗೀರು ಒಳ್ಳೆಯೋರಲ್ಲ....ಇವರ ಯೋಚ್ನೆಬಿಟ್ಬಿಡು. ನಿಮ್ಮ ಹಳ್ಳಿಗೆ ಹೋಗಿಒಳ್ಳೆ ಹುಡುಗಿ ನೋಡ್ಕೊಂಡು ಬಂದು ಮದುವೆಯಾಗು."

ಅಂತೂ ನಿರಾಶನಾಗಿ ಮಹಾಬಲ ಹೊರಟುಹೋದ.

"ನೋಡಿ ಅವನ ಧೈರ್ಯ! ಇನ್ನೊಂದು ಹೆಣ್ಣು ಬೇಕಂತೆ!"

—ಎಂದು ತುಂಗಮ್ಮ, ನಗು ತಡೆಯಲಾರದೆ ಅಂದಳು.

ಮನಸ್ಸು ಮುದುಡಿಕೊಳ್ಳುವ ಆ ಪರಿಸ್ಥಿತಿಯಲ್ಲೂ ಸರಸಮ್ಮಕೂಡಾ ನಕ್ಕರು.

ನಕ್ಕು ಮುಗಿದಮೇಲೆ ಅವರು ಮತ್ತೊಮ್ಮೆ ಸಪ್ಪಗಾದರು.

ಯಾಕೆ ಹೀಗಾಯಿತು? ಯಾಕೆ? ಮಹಾಬಲ ಒಳ್ಳೆಯವನಿರಬಹುದು. ಆದರೆ ಆತ ಮಹಾಮೂರ್ಖ. ಅಲ್ಲದೆ ಕನಕಲಕ್ಷ್ಮಮ್ಮನೇನು ಪರಮ ಸಾಧ್ವಿಯೆ? ಹಳೆಯ ಗೆಳೆಯನ ಆಕರ್ಷಣೆಗೆ ಆಕೆ ಬಲಿಯಾಗಿರಬಹುದು.... ಮರಳಿ ಆ ಬದುಕಿಗೆ....ಎಂತಹ ಅನ್ಯಾಯ! ಇಷ್ಟುಕಾಲ ಅಭಯಧಾಮ ಆಕೆಗೆ ನೀಡಿದ ಶಿಕ್ಷಣವೆಲ್ಲ ವ್ಯರ್ಥವಾಯಿತಲ್ಲ!

—ಅಥವಾ, ಅಭಯಧಾಮದ ಈ ಜೀವನದಿಂದ ನಿಜವಾದ ಪ್ರಯೋಜನ ಏನೂ ಇಲ್ಲವೆ?

....ಸರಸಮ್ಮನ ಮೆದುಳು ಧೀಂಗುಡುತಿತ್ತು....ನಿರಾಸೆಯ ಆ ವಿಚಾರಗಳೆನ್ನೆಲ್ಲ ಅವರು ತುಂಗಮ್ಮನಿಗೆ ಹೇಳಲಿಲ್ಲ. ತಮ್ಮ ಮನಸ್ಸಿನಲ್ಲೆ ಬಚ್ಚಿಟ್ಟರು.

೧೮

ದಿನಗಳು ಕಳೆದು ಮಾಸಗಳಾದುವು. ಕಾಲ, ಋತುಮತಿಯಾಯಿತು.

ಮಂಜುಕವಿದಿದ್ದ ಆ ಮುಂಜಾವ!

ರಾತ್ರಿ ಮಲಗಿದಾಗ ಸರಸಮ್ಮ ಕಿಟಕಿ ಮುಚ್ಚಿದ್ದರು - ಗಾಳಿಮಳೆಯ ಅವಾಂತರದಿಂದ ನೀರು ಒಳಕ್ಕೆ ಹರಿಯದಿರಲೆಂದು ಕೊಠಡಿಯ ಬಾಗಿಲೇನೋ ತೆರೆದೇ ಇತ್ತು. ಉಷಃಕಾಲದಲ್ಲೆ ಎಚ್ಚರಗೊಂಡಾಗ ಅವರಿಗೆ, ಬಾಗಿಲಿನೆಡೆಯಿಂದ ತಣ್ಣನೆ ಬೀಸುತಿದ್ದ ಗಾಳಿಯ ಸುಖಸ್ಪರ್ಶದ ಅನುಭವವಾಯಿತು. ಹೊದೆದಿದ್ದ ಕಂಬಳಿಯನ್ನು ಮತ್ತಷ್ಟು ಬೆಚ್ಚಗೆ ಅವರು ದೇಹಕ್ಕೆ ಅಂಟಿಸಿಕೊಂಡರು. ಆದರೆ ನಿದ್ದೆ ಓಡಿಯೇ ಹೋಯಿತು. ಬೆಳಗಾದರೂ ಆಗಿರಬಹುದು - ಎನಿಸಿತು ಸರಸಮ್ಮನಿಗೆ. ಸರಿಯಾಗಿ ಕಣ್ಣು ತೆರೆದು ಅವರು ಬಾಗಿಲಿನಾಚೆ ನೋಡಿದರು. ಏನೂಕಾಣಿಸಲಿಲ್ಲ. ಮತ್ತೊಮ್ಮೆ ನಿದ್ದೆ ಹೋಗಲು ಅವರು ಮಾಡಿದ ಯತ್ನವೂ ವಿಫಲವಾಯಿತು. ಎದ್ದು ಕುಳಿತು, ಮಂಚದಿಂದ ಕೆಳಕ್ಕಿಳಿದು, ದೀಪ ಹಾಕಿ ಟೈಂಪೀಸಿನತ್ತ ನೋಡಿದರು. ಐದೂವರೆ!....ಅವರು ಕಿಟಕಿ ತೆರೆದರು. ಏನೂ ಕಾಣಿಸಲಿಲ್ಲ. ಹೊರಗೆ ನಸುಬೆಳಕೂ ಇಲ್ಲ ವೆಂದರೆ! ಇದು ಆಶ್ಚರ್ಯವೇ ಸರಿ. ಏನೋ ಹೊಳೆದು, ಅವರು ದೀಪ ಆರಿಸಿ ಕಿಟಕಿಯ ಬಳಿ ಬಂದು ನಿಂತರು.

ಓ್ಹ! ತಪ್ಪಾಗಿರಲಿಲ್ಲ ಅವರ ಊಹೆ!

ಕಳ್ಳ ಹೆಜ್ಜೆಯೊಡನೆ ಬೆಳಕು ಭೂಮಿಗಿಳಿದು ಬರುತಿತ್ತು - ಬೆಳ್ಳಿಯ ನವುರಾದ ಸೀರೆಯುಟ್ಟುಕೊಂಡು. ಮಂಜು, ತನ್ನ ಶೀತಲ ಅಪ್ಪುಗೆಯಿಂದ ಯಾರೂ ತಪ್ಪಿಸಿ ಕೊಳ್ಳಲಾರದಂತೆ, ಮನೆಮರಗಳನ್ನು ಗಿಡಹೂಗಳನ್ನು ಮುತ್ತಿಟ್ಟಿತ್ತು.

ನಿಸರ್ಗದ ಆ ಸುಂದರ ರಮಣೀಯತೆಯಲ್ಲಿ, ನಿದ್ದೆಹೋದ ಎಳೆಯ

ಮಗುವಿನಹಾಗೆ ನಿರ್ಮಲಮನಸಿನಿಂದ ಸರಸಮ್ಮ ತಲ್ಲೀನರಾದರು.... ತಾವೂ ಕರಗಿ ಆ ಹಿಮದೊಡನೆ ಲೀನವಾದ ಹಾಗೆ ಅವರಿಗೆ ಅನಿಸುತಿತ್ತು.

ಅದೆಷ್ಟು ಹೊತ್ತು ಅವರು ಹಾಗೆ ನಿಂತರೊ!

ಗಂಟೆ ಬಾರಿಸಿ ಹುಡುಗಿಯರನ್ನು ಎಬ್ಬಿಸಬೇಕು. ಆದರೆ ಲೋಕವೇ ಮೈಮರೆತು ನಿದ್ದೆ ಹೋಗಿದ್ದಾಗ ಈ ಮಕ್ಕಳು ಮಾತ್ರ ಏಳಬೇಕೆನ್ನುವುದು ಸರಿಯೆ? ಅಭಯಧಾಮದ ನಿಷ್ಠುರ ನಿಯಮಗಳೂ ಈ ಘಳಿಗೆಯಲ್ಲಿ ಸ್ವಲ್ಪ ಹೊತ್ತು ಶಿಥಿಲವಾಗಬಾರದೇಕೆ?

ಸರಸಮ್ಮ ಹೊರಬಂದು, ತುಂಗಮ್ಮ ಮಲಗಿದ್ದ ಜಾಗದತ್ತ ನಡೆದು, ಮೆಲ್ಲನೆ ಮೈ ಮುಟ್ಟಿ, "ತುಂಗಾ!" ಎಂದು ಪಿಸುಧ್ವನಿಯಲ್ಲಿ ಉಸುರಿ, ಆಕೆಯನ್ನು ಎಬ್ಬಿಸಿದರು. 'ಬಾ'—ಎಂದು ಕೈಸನ್ನೆಯಿಂದ ಕರೆದರು. ಆಕೆಯೊಡನೆ, ಕರಿಕತ್ತಲು ನಸುಬೆಳಕುಗಳ ಸಂಗಮ ನಡೆದಿದ್ದ ತಮ್ಮ ಕೊಠಡಿಗೆ ಬಂದು, ತೆರೆದ ಕಿಟಕಿಯ ಬಳಿನಿಂತರು.

"ನೋಡು! ಮಂಜು ಹ್ಯಾಗೆ ಕವಿದಿದೆ!"

"ಹೌದಲ್ಲ! ಅಯ್ಯ - ಎಷ್ಟು ಚೆನ್ನಾಗಿದೆ!"

"ಮಳೆಗಾಲ ಆಗೋಯ್ತು. ಇನ್ನು ಚಳಿಗಾಲ."

"ಹೌದು!"

ಬೆಳಗಾಗುತ್ತಲಿತ್ತು. ಅಲ್ಲಿ ಇಲ್ಲಿ ಯಾವುದೋ ವಸ್ತುವಿಗೆ ಜೀವ ಬಂದು ಸದ್ದಾಗುತಿತ್ತು - ನಿಸರ್ಗತಾಯಿ ಮೈ ಕುಲುಕಿದಹಾಗೆ.

ತನ್ಮಯತೆಯ ಆ ಮನೋಸ್ಥಿತಿಯಲ್ಲಿ ಮಾತನಾಡುವ ಆಂಶಗಳೇ ಇರಲಿಲ್ಲ.

ಆರುಗಂಟೆಯೂ ದಾಟಿತೆಂದು ತಿಳಿದು ಸರಸಮ್ಮ ಮೆಲುಧ್ವನಿಯಲ್ಲಿ ಅಂದರು:

"ಘಂಟೆ ಬಾರಿಸ್ತೀಯಾ ತುಂಗ?"

"ಹೂಂ...."

ಘಂಟೆಯ ನಾದ ಅಲೆಯಲೆಯಾಗಿ ನಸುಕಿನ ನೀರವತೆಯಲ್ಲಿ ಬಲು ದೂರಕ್ಕೆ ತೇಲಿ ಹೋಯಿತು.

ಒಬ್ಬೊಬ್ಬರಾಗಿ ಹುಡುಗಿಯರು ಎದ್ದರು.

" ಘನ ಶ್ಯಾಮಸುಂದರಾ ಶ್ರೀಕರಾ ಅರುಣೋದಯ ಝಾಲ...."

ಮಧುರ ಕಂಠದಿಂದ ಹಾಡುತಿದ್ದಳು ಪಾರ್ವತಿ, ಯಾರೂ ಹೇಳದೆಯೇ, 'ಹಾಡು - ಹಾಡು' ಎಂದು ಕೇಳದೆಯೇ.

" ಆನಂದ ಕಂದಾ—"

ನೈಸರ್ಗಿಕ ಶೋಭೆಗೆ ಮಾನವನಿರ್ಮಿತ ಸೌಂದರ್ಯ ಲೇಪನವಾದ ಹಾಗಾಯಿತು ವಾತಾವರಣ....

" ಇಂಥ ಘಳಿಗೆಯಲ್ಲಿ ಲೋಕವೆಲ್ಲ ಸುಂದರವಾಗಿಯೇ ಇರತ್ತೆ ಅಂತ ಅನಿಸುತ್ತೆ ಅಲ್ವೆ ತುಂಗಾ ?"

" ಹೌದು ದೊಡ್ಡಮ್ಮ. ಈ ಸೌಂದರ್ಯ ಸದಾಕಾಲವೂ ಹೀಗೆಯೇ ಇರಲಿ ಅಂತಾನೂ ಅನಿಸುತ್ತೆ.

—ಆ ಬಳಿಕ ಗಜಿಬಿಜಿ, ಗುಲ್ಲು, ಸದ್ದು.

ದಿನ ನಿತ್ಯದ ಜೀವನ ಚಕ್ರ ತಿರುಗಲು ಆರಂಭ.

................

ನವರಾತ್ರಿ ಕಳೆದಿತ್ತು, ಸಣ್ಣ ಪುಟ್ಟ ಹಬ್ಬಗಳೆಷ್ಟೋ ಆಗಿ ಹೋಗಿದ್ದುವು.

ಆದರೆ ಅಭಯಧಾಮವೇ ಇದಿರು ನೋಡಿದ ದೊಡ್ಡದೊಂದು ಹಬ್ಬವಿತ್ತು. ಅದು ಅಭಯಧಾಮದ ವಾರ್ಷಿಕೋತ್ಸವ.

ಡಿಸೆಂಬರ್ ಹತ್ತೊಂಭತ್ತರ ಆ ಉತ್ಸವದ ಸಿದ್ಧತೆ ಭರದಿಂದಲೆ ಸಾಗಿತು. ಒಳಗಿನ ಗೋಡೆಗಳಿಗೆಲ್ಲ ಹುಡುಗಿಯರು ತಾವೇ ಸುಣ್ಣ ಬಳೆದರು. ಹೊರಗಿನ ಗೋಡೆಗಳನ್ನು ಕೂಲಿತೆತ್ತು ಬಿಳಿದುಗೊಳಿಸಿದ್ದಾಯಿತು. ಕಿಟಕಿ ಬಾಗಿಲುಗಳು ನಿರ್ಮಲವಾದುವು. ಉದ್ಯಾನದ ಕಳೆ ನಾಶವಾಯಿತು. ಸರಸಮ್ಮ ಇಬ್ಬರು ಹುಡುಗಿಯರೊಡನೆ, ತುಂಗಮ್ಮ ಮತ್ತು ಜಲಜ ಬೇರೊಬ್ಬಳೊಡನೆ, ಲಲಿತ - ಸಾವಿತ್ರಿಯರು ಮತ್ತೊಬ್ಬಳೊಡನೆ— ಹೀಗೆ ಮೂರು ಗುಂಪುಗಳಾಗಿ, ಮೊದಲೇ ಸಿದ್ಧಗೊಳಿಸಿದ್ದ ಪಟ್ಟಿಯಂತೆ ಊರಿನ ಪ್ರಮುಖ ಅಂಗಡಿಗಳಿಗೆ ಹೋಗಿ, ಬಡ ಅನಾಥ ಹುಡುಗಿಯರ ಅಭಯಧಾಮಕ್ಕಾಗಿ ಸೀರೆ - ರವಕೆ ಕಣಗಳನ್ನು ಕೇಳಿ ತಂದರು. ಸಮಿತಿಗೇ ನೇರವಾಗಿ ಚಂದಾ ಕೊಡದೇ ಇದ್ದ ಕೆಲವರು ಶ್ರೀಮಂತರ ಮನೆಗಳಿಗೆ

ಹೋಗಿ, ಅಷ್ಟಿಷ್ಟು ಹಣಸಹಾಯ ಪಡೆದು ತಂದರು. ಸರಸಮ್ಮ, ಅಭಯ ಧಾಮದ ಕಾರ್ಯದರ್ಶಿನಿಯ ಜತೆಗೂಡಿ ಹೋಗಿ ಸಮಾರಂಭದ ಅಧ್ಯಕ್ಷ ಸ್ಥಾನ ವಹಿಸುವಂತೆ ನಗರದ ಮೇಯರ್‌ರನ್ನು ಒಪ್ಪಿಸಿಬಂದರು. ಅಭಯ ಧಾಮದೊಳಗೇ ಸಣ್ಣಪುಟ್ಟ ಸ್ಪರ್ಧೆಗಳು ನಡೆದುವು. ಕೆಲವು ಹುಡುಗಿಯರು ಬಹುಮಾನಗಳಿಗೆ ಅರ್ಹರಾದರು.

ಉತ್ಸವದ ದಿನ ಬೆಳಿಗ್ಗೆ, ಮೇಲುಗಡೆ ಹೊದಿಕೆಯಿದ್ದ ಒಂದು ಲಾರಿ ಯಲ್ಲಿ ಸುಂದ್ರಾಳನ್ನೂ ಒಳಗೊಂಡು ಎಲ್ಲ ಹುಡುಗಿಯರನ್ನು ಕುಳ್ಳಿರಿಸಿ ಸರಸಮ್ಮ ನಗರದ ನಾಲ್ಕು ಮೂಲೆಗಳಲ್ಲಿ ಸುತ್ತಾಡಿಸಿ ಬಂದರು.

ಆಹ್ವಾನ ಪತ್ರಿಕೆಯನ್ನೇನೂ ಮುದ್ರಿಸಿರಲಿಲ್ಲ, ಆದರೂ ಬಾಯ್ದೆರೆ ಯಾಗಿ, ಅವರಿಗೆ ಸಹಾಯಧನ ನೀಡಿದ್ದ ಆ ಊರಿನ ಪ್ರತಿಷ್ಠಿತರನ್ನೆಲ್ಲ ಆಹ್ವಾನಿಸಿ ಬಂದುದಾಗಿತ್ತು.

ಸಂಜೆ ಆರುಘಂಟೆಯ ಹೊತ್ತಿಗೆ ಕೆಲವರು ಬಂದರು. ಸರಸಮ್ಮನ ಆಫೀಸು ಕೊಠಡಿಯ ಮೇಜು ಬೆಂಚು ಕುರ್ಚಿ, ಹಜಾರಕ್ಕೆ ಸ್ಥಳಾಂತರ ಹೊಂದಿ, ಪಕ್ಕದ ಮನೆಗಳಿಂದ ಎರವಲು ತಂದಿದ್ದ ಕುರ್ಚಿಗಳ ಜತೆಯಲ್ಲಿ ಬಂದವರನ್ನು ಬಳಿಗೆ ಕರೆದುವು.

ಹತ್ತು ನಿಮಿಷ ತಡವಾಗಿ ಬಂದ ಮೇಯರ್ ಐದು ನಿಮಿಷಗಳಲ್ಲೆ ಅಭಯಧಾಮದ ಚಟುವಟಿಕೆಗಳನ್ನು ಈಕ್ಷಿಸಿದ್ದಾಯಿತು.

ಸರಸಮ್ಮನತ್ತ ತಿರುಗಿ ಮೇಯರ್ ಕೇಳಿದರು :

"ಎಲ್ಲಿ - ಪ್ರೆಸ್ಸಿನವರ ಪತ್ತೇನೆ ಇಲ್ವಲ್ಲಾ!"

"ಪ್ರೆಸ್ಸಿನವರು ?"

"ಪತ್ರಿಕೆಯುವರು ಅಮ್ಮಾ."

"ಓ! ನಾವು ಕರೀಲಿಲ್ಲ. ಖಾಸಗಿ ಕಾರ್ಯಕ್ರಮ ಅಂತ—"

"ಛೆ! ಛೆ! ಕರೀ ಬೇಕಾಗಿತ್ತು. ಪತ್ರಿಕೆಗಳಲ್ಲಿ ನಿಮ್ಮ ಅಭಯ ಧಾಮದ ವಿಷಯ ಬಂದರೆ ನಿಮಗೇ ಅನುಕೂಲವಾಗುತ್ತೆ."

"ಹೌದು ಸಾರ್. ನಮಗೆ ಹೊಳೀಲಿಲ್ಲ."

"ಪರವಾಗಿಲ್ಲ. ಈ ಉತ್ಸವದ ವಿಷಯ ವರದಿ ಆಗೋ ಹಾಗೇ ನಾನು ಮಾಡ್ತೀನಿ."

“ಅಷ್ಟು ಮಾಡಿದರೆ ತುಂಬ ಉಪಕಾರವಾಗುತ್ತೆ ಸಾರ್.”

ಸಂಗ್ರಹಿಸಿ ತಂದಿದ್ದ ಹೊಸಸೀರೆಗಳನ್ನು ಹಂಚಿ ಉಟ್ಟುಕೊಂಡು ಅಲಂಕಾರವಾಗಿದ್ದರು ಹುಡುಗಿಯರೆಲ್ಲ. ಕುರುಡಿ ಸುಂದ್ರಾ ಮತ್ತು ಪಾರ್ವತಿ ದೇವತಾಪ್ರಾರ್ಥನೆ ಮಾಡಿದರು. ಸರಸಮ್ಮನಪರವಾಗಿ ತುಂಗಮ್ಮ ಸ್ವಾಗತ ಭಾಷಣವನ್ನೋದಿದಳು.

ನಿರಾಭರಣ ಸುಂದರಿ. ಸೆರಗನ್ನು ಎದೆಯ ಮೇಲೆ ಹಾಯಿಸಿ ಇನ್ನೊಂದು ಕಡೆಯಿಂದ ಇಳಿಬಿಟ್ಟು ನಡುವಿಗೆ ಬಿಗಿದಿದ್ದಳು. ಎತ್ತರದ ಮಾಟವಾದ ನಿಲುವು. ಯಾವ ಕಂಪನವೂ ಇಲ್ಲದ ಉಚ್ಚಸರ. ಸ್ಪಷ್ಟ ಪದೋಚ್ಚಾರಣೆ. ಆಕೆ ಆಡುತಿದ್ದ ಮಾತು, ಕುಳಿತಿದ್ದ ಹುಡುಗಿಯರ ತಲೆಗಳನ್ನು ಹಾದು ಗೋಡೆಗೆ ಬಡಿದು ಇಂಪಾಗಿಯೇ ಪ್ರತಿಧ್ವನಿಸುವಂತಿತ್ತು.

ತಮ್ಮ ಹಿಂದೆ ನಿಂತಿದ್ದ ಸರಸಮ್ಮನನ್ನು ಉದ್ದೇಶಿಸಿ ಮೇಯರ್ ಕೇಳಿದರು:

“ಇವರು ಯಾರು?”

“ತುಂಗಮ್ಮ ಅಂತ. ನನ್ನ ಸಹಾಯಿಕೆ.”

“I see.”

“ಮೊದಲು ಅಭಯಧಾಮಕ್ಕೆ ಬೇರೆ ಹುಡುಗಿಯರ ಹಾಗೆಯೇ ಈಕೇನೂ ಬಂದಿದ್ರು.”

“ಓ!”

ಅಭಯಧಾಮದ ಹಿರಿಮೆಯ ಬಾವುಟ ತುಂಗಮ್ಮ. ಆರೀತಿ ಸರಸಮ್ಮ ಹೇಳಿದುದು ಸರಿಯಾಗಿಯೇ ಇತ್ತಲ್ಲವೆ? ಆ ಅಭಿಮಾನಕ್ಷಮ್ಯವಲ್ಲವೆ?

ಮೇಯರ್ ಆಶ್ಚರ್ಯ ವ್ಯಕ್ತಪಡಿಸಿದುದನ್ನು ಕಂಡು ಸಂತೋಷಗೊಂಡ ಸರಸಮ್ಮ ಹೆಮ್ಮೆಯಿಂದಲೇ ಅಧ್ಯಕ್ಷಪೀಠದ ಅಕ್ಕ ಪಕ್ಕದಲ್ಲಿದ್ದವರನ್ನು ನೋಡಿದಳು. ತಮ್ಮನ್ನೇ ದಿಟ್ಟಿಸುತಿದ್ದ ಆ ಯುವಕ....ತಾವು ಆಡಿದ ಮಾತುಗಳೂ ಆತನಿಗೆ ಕೇಳಿಸಿದವೋ....ಏನೋ....ಮುಖ ಮಾಟವಾಗಿತ್ತು. ಮುಗುಳುನಗು ಕುಣಿಯುತಿತ್ತು ತುಟಿಗಳಮೇಲೆ. ಯಾರೋ ಆತ? ಆತನಪಕ್ಕದಲ್ಲಿ ಸುಂದರಮ್ಮ ಅನಂತರಾಮಯ್ಯ ಕುಳಿತಿದ್ದರು – ಆಡಳಿತ ಸಮಿತಿಯ ಪ್ರಮುಖ ಸದಸ್ಯೆ. ಅವರ ಸಂಬಂಧಿಕನಿರಬಹುದೆ?

ಆ ಯೋಚನೆಯಲ್ಲಿ ತುಂಗಮ್ಮನ ಭಾಷಣ ಕೇಳುವುದನ್ನೆ ಸರಸಮ್ಮ ಮರೆತು ಬಿಟ್ಟಿದ್ದರು. ನಿದ್ದೆಯಿಂದ ಎಚ್ಚೆತ್ತವರಂತೆ ಅವರು ತುಂಗಮ್ಮ ಓದುತಿದ್ದುದಕ್ಕೆ ಕಿವಿಗೊಟ್ಟರು.

"ಈ ವರ್ಷ, ನಮ್ಮ ಸೋದರಿಯರಲ್ಲಿ ಒಬ್ಬಳಾದ ಕನಕಲಕ್ಷ್ಮಮ್ಮನಿಗೆ ಮದುವೆಯಾಯಿತೆಂದು ತಿಳಿಸಲು ಸಂತೋಷಿಸುತ್ತೇವೆ."

ಕುಳಿತಿದ್ದ ಹುಡುಗಿಯರ ತುಟಿಗಳೆಲ್ಲ ಬಿಮ್ಮನೆ ಬಿಗಿದಿದ್ದರೂ ಕಣ್ಣು ಗಳು ನಕ್ಕುವು. ಸರಸಮ್ಮನ ಉಸಿರು ಒಂದು ಕ್ಷಣ ತಡೆದು ನಿಂತಿತು. ಕನಕಲಕ್ಷ್ಮಮ್ಮನಿಗೆ ಮುಂದೇನಾಯಿತೆಂಬುದನ್ನು ಅವರು ಆ ಭಾಷಣದಲ್ಲಿ ತಿಳಿಸಿರಲಿಲ್ಲ. ಮೇಯರ್ ಮತ್ತೊಮ್ಮೆ ಪಕ್ಕಕ್ಕೆ ಹೊರಳಿದರು. ಕನಕ ಲಕ್ಷ್ಮಮ್ಮನ ವಿಷಯ ಅವರಿಗೆ ತಿಳಿದಿದೆಯೇನೋ ಎಂದು ಗಾಬರಿಯಾದರು ಸರಸಮ್ಮ. ಆದರೆ ಮೇಯರ್ ಹೇಳಿದುದು ಬೇರೆಯೇ :

"ವರದಿವಾಚನ ಸ್ವಾಗತಭಾಷಣ ಎರಡನ್ನೂ ಒಂದರಲ್ಲೇ ಸೇರಿಸ್ಬಿಟ್ಟಿದ್ದೀರಿ. ಒಳ್ಳೇದೇ ಆಯ್ತು!''

'ಬದುಕಿದೆ!—' ಎಂದು ಕೊಂಡರು ಸರಸಮ್ಮ.

ಸ್ವಾಗತಭಾಷಣ ನಡೆದೇ ಇತ್ತು :

"ಕೊಡುವ ಸಹಾಯಧನವನ್ನು ಹೆಚ್ಚಿಸಬೇಕೆಂದು ಆಡಳಿತ ಸಮಿತಿ ಯವರು ಈ ವರ್ಷವೂ ಸರಕಾರಕ್ಕೆ ಮನವಿಮಾಡಿದ್ದಾರೆ. ಮಾನ್ಯಸಚಿವರು ಈ ಸಾರೆಯೂ ಮನವಿಯನ್ನು ಪರಿಶೀಲಿಸುವುದಾಗಿ ಆಶ್ವಾಸನೆ ಕೊಟ್ಟಿದ್ದಾರೆ...."

ಆ ಯುವಕ ಕಿಸಕ್ಕನೆ ನಕ್ಕ. ತುಂಗಮ್ಮ ಅರೆಕ್ಷಣ ಭಾಷಣನಿಲ್ಲಿಸಿ ಕಕ್ಕಾವಿಕ್ಕಿಯಾಗಿ ನೋಡಿದಳು. ಮೇಯರರೂ ಸಣ್ಣನೆ ನಕ್ಕರು. ತಾವು ಬರೆದುದರಲ್ಲೇನೋ ಅಚಾತುರ್ಯವಾಗಿರಬೇಕೆಂದು ಸರಸಮ್ಮ ಯೋಚನೆಗೆ ಒಳಗಾದರು. ....ಈ ವರ್ಷವೂ ಮಾಡಿರುವ ಮನವಿ....ಈ ಸಾರೆಯೂ ದೊರೆತ ಆಶ್ವಾಸನೆ....ಓ! ಅದೊಂದು ರೀತಿಯ ವ್ಯಂಗ್ಯ. ಆತಪ್ಪನ್ನು ತಮಗರಿಯದೆಯೇ ಸರಸಮ್ಮ ಮಾಡಿದ್ದರು....ಈಗ ಎಂತಹ ಪ್ರಮಾದ!

ಆದರೆ ತುಂಗಮ್ಮ ಮುಂದಿನದನ್ನು ಅವಸರ ಅವಸರವಾಗಿಯೇ ಓದಿದಳು.

“ ಪೌರಸಭೆಯವರು ಕೊಡುತ್ತಿರುವ ಅಲ್ಪ ಸಹಾಯವನ್ನೂ ಹೆಚ್ಚಿಸ ಬೇಕೆಂದು ಕೇಳಿಕೊಳ್ಳಲಾಗಿದೆ. ಈದಿನ ಪೌರಸಭಾಧ್ಯಕ್ಷರೇ ನಮ್ಮ ವಾರ್ಷಿಕೋತ್ಸವದ ಅಧ್ಯಕ್ಷತೆಯನ್ನು ವಹಿಸಲು ಒಪ್ಪಿಕೊಂಡಿರುವುದು ನಮ್ಮ ಭಾಗ್ಯವೇ ಸರಿ. ಮತ್ತೊಮ್ಮೆ ನಾವು ತಮಗೆಲ್ಲಾ ಹೃತ್ಪೂರ್ವಕ ಸ್ವಾಗತ ಬಯಸುತ್ತೇವೆ.”

ತುಂಗಮ್ಮ ಭಾಷಣ ಮುಗಿಸಿ ಕೈ ಜೋಡಿಸಿ ಬಾಗಿ, ಎಲ್ಲರಿಗೂ ಎಂಬಂತೆ, ವಂದಿಸಿದಳು. ಆಕೆಯ ಕಂಕುಳುಗಳೆರಡೂ ಬೆವತು ರವಕೆ ಒದ್ದೆಯಾಗಿತ್ತು. ಒಂದು ಹನಿ ಬೆವರು ಕತ್ತಿನ ಕೆಳಗಿಂದ ಹೊರಟು ಎದೆಯ ನಡುವಿನಿಂದಲೂ ಇನ್ನೊಂದು ಬೆನ್ನು ಹುರಿಯ ಮೇಲಿಂದಲೂ ಆಮೆಯ ನಡಿಗೆಯಿಂದ ಕೆಳಕ್ಕಿಳಿದುವು.

ಕರತಾಡನವಾಯಿತು. ತುಂಗಮ್ಮನ ಮುಖ ಕೆಂಪೇರಿತು. ಆಕೆ ಹಿಂಭಾಗಕ್ಕೆ ಬಂದು ಸರಸಮ್ಮನ ಪಕ್ಕದಲ್ಲಿ ನಿಂತಳು.

ಆ ಬಳಿಕ ಕಾರ್ಯದರ್ಶಿನಿ ಕಮಲಮ್ಮನ ಭಾಷಣ.

ಅದಾದಮೇಲೆ ಹಿತ ಚಿಂತಕರು....

ಅಧ್ಯಕ್ಷತೆ ವಹಿಸಿದ್ದ ಮೇಯರ್, ತಮ್ಮ ಪಕ್ಕದಲ್ಲಿದ್ದ ಯುವಕನನ್ನು ಉದ್ದೇಶಿಸಿ ಕೇಳಿದರು :

“ ನೀವು ಮಾತಾಡ್ತೀರಾ ಮಿ. ಸೋಮಶೇಖರ್ ?”

“ ಬೇಡೀಪ್ಪಾ. ಜಾಸ್ತಿ ಹಿಂಸೆ ಕೊಡಬಾರದು ಹುಡುಗೀರಿಗೆ.”

ಸುಂದರಮ್ಮ ಅನಂತರಾಮಯ್ಯ ಇಳಿಧ್ವನಿಯಲ್ಲಿ ಅಂದರು :

“ ಮಾತಾಡೋ ಸೋಮೂ.”

“ ಬೇಡ ಅಕ್ಕಾ.”

ಅಕ್ಕ – ಹಾಗಾದರೆ ಈ ಯುವಕ ಸುಂದರಮ್ಮನ ಸಣ್ಣ ತಮ್ಮನಿರಬೇಕು ಎಂದು ಎಣಿಕೆ ಹಾಕಿದರು ಸರಸಮ್ಮ.

ಬಹುಮಾನಗಳ ವಿನಿಯೋಗವಾಯಿತು. ಮೇಯರರ ಪುಟ್ಟ ಭಾಷಣ ವಾಯಿತು.

ನೆರೆದಿದ್ದ ಎಲ್ಲರಿಗೂ ಸರಸಮ್ಮ ಮನಃ ಪೂರ್ವಕವಾಗಿ ವಂದನಾರ್ಪಣೆ ಮಾಡಿದರು.

ಪಾರ್ವತಿ ಜನಗಣಮನ ಹಾಡಿದಳು.

ಬಂದವರನ್ನು ಬೀಳ್ಕೊಡಲು ಸರಸಮ್ಮ, ತುಂಗಮ್ಮ, ಜಲಜ ಲಲಿತ, ಸಾವಿತ್ರಿಯರು ಬಾಗಿಲಹೊರಗೆ ಬಂದು ನಿಂತಂತೆ ಕಾರುಗಳು ಒಂದೊಂದಾಗಿ ಹೊರಟವು. ಕೊನೆಯದಾಗಿ ಉಳಿದ ಪುಟ್ಟ ಕಾರನ್ನು ಏರುವುದಕ್ಕೆಮುಂಚೆ ಆ ಯುವಕ - ಸೋಮಶೇಖರ್ - ಸರಸಮ್ಮನ ಬಳಿಗೆ ಬಂದ.

" ಅಮ್ಮ, ಈ ಅಭಯಧಾಮದ ಕೆಲಸಕಾರ್ಯಗಳ ಸ್ವರೂಪ ಪರಿಚಯ ನನಗಿರ್ಲಿಲ್ಲ. ನಮ್ಮಕ್ಕ ಒತ್ತಾಯಿಸಿ ಕರಕೊಂಡು ಬಂದ್ರು. ಅಂತೂ ಈ ದಿವಸದ ಸಾಯಂಕಾಲ ನನ್ನ ಪಾಲಿನ ಒಂದು ಅಪೂರ್ವ ಅನುಭವ ವಾಗಿದೆ. ಸಮಾರಂಭಕ್ಕಾಗಿ—ಅದಕ್ಕಿಂತಲೂ ಹೆಚ್ಚು ನೀವು ಪಡುತ್ತಿರೋ ಶ್ರಮಕ್ಕಾಗಿ—ಧನ್ಯವಾದಗಳು."

ಅದೊಂದೂ ನಟನೆಯ ಕಪಟದ ಮಾತಾಗಿರಲಿಲ್ಲ. ತಮ್ಮ ದುಡಿಮೆ ಸಾರ್ಥಕವಾಯಿತೆಂದು ಸರಸಮ್ಮನಿಗೆ ಅನಿಸಿತು.

ಆ ಯುವಕನೊ-ಸರಸಮ್ಮನಿಂದ ಸರಕ್ಕನೆ ತುಂಗಮ್ಮನತ್ತ ತಿರುಗಿದ:

"ನಿಮ್ಮ ಸ್ವಾಗತ ಭಾಷಣ ಚೆನ್ನಾಗಿತ್ತು, ಧನ್ಯವಾದಗಳು!"

ಅನಿರೀಕ್ಷಿತವಾಗಿದ್ದ ಮಾತುಕೇಳಿ ತುಂಗಮ್ಮನ ಗಂಟಲಿನಿಂದ ಸ್ವರ ಹೊರಡಲೇ ಇಲ್ಲ. ಮುಖಮಾತ್ರ ಕಿವಿಗಳವರೆಗೂ ಕೆಂಪೇರಿತು. ಅಷ್ಟು ಹೇಳಿ ಸೋಮ ಶೇಖರ್, ಉಳಿದ ಹುಡುಗಿಯರನ್ನೊಮ್ಮೆ ನೋಡಿ, ತನ್ನ ಅಕ್ಕ ಕುಳಿತಿದ್ದ ಕಾರಿನತ್ತ ಗಂಭೀರವಾದ—ಆದರೂ ಹಗುರವಾದ ಹೆಜ್ಜೆ ಗಳನ್ನಿಡುತ್ತ ಸಾಗಿದ.

ಸರಸಮ್ಮನಿಗೆ ಆಶ್ಚರ್ಯವಾಯಿತು. ತುಂಗಮ್ಮನನ್ನೊಮ್ಮೆ ಅವರು ನೋಡಿದರು. ಹಾಗೆ ನೋಡಿದಾಗ ಮೂಡಿದ ಮುಗುಳುನಗು ಹಾಗೆಯೇ ಬಹಳ ಹೊತ್ತು ಅಲ್ಲೆ ನಿಂತಿತು.

ಆ ಕಾರು ಹೊರಟಾಗ ಸರಸಮ್ಮ, ಸುಂದರಮ್ಮ ಅನಂತರಾಮಯ್ಯ ನಿಗೆ ವಂದಿಸಿದಳು. ಎಡಗೈಯಿಂದ ತನ್ನ ಕ್ರಾಪು ತೀಡಿಕೊಳ್ಳುತ್ತ ನಗುತ್ತ ಲಿದ್ದ ಸೋಮಶೇಖರನೂ ಅಕ್ಕನ ಜತೆಯಲ್ಲಿ ಮರುವಂದನೆಮಾಡಿದ.

ಬಂದಿದ್ದವರೆಲ್ಲ ಹೊರಟುಹೋದಮೇಲೂ ಸರಸಮ್ಮ ಆ ಹುಡುಗಿಯ ರೊಡನೆ ಐದು ನಿಮಿಷಗಳ ಕಾಲ ಹೊರಗೇ ನಿಂತರು.

ಬೀದಿಯ ದೀಪಗಳು ಆಗಲೇ ಹತ್ತಿಕೊಂಡಿದ್ದುವು. ಸಮೀಪದ ಮನೆಗಳಿಂದ ಜನರು ಕಿಟಕಿಗಳ ಬಳಿನಿಂತು ಕುತೂಹಲದಿಂದ ಅಭಯಧಾಮದತ್ತ ನೋಡುತಿದ್ದರು.

ರಾತ್ರೆ ಊಟ ತಡವಾಯಿತು. ವಾರ್ಷಿಕೋತ್ಸವದ ವಿಶೇಷ ಅಡುಗೆ.

ಗುಂಪುಗುಂಪಾಗಿ ಹುಡುಗಿಯರು, ಹರಟೆ ಹೊಡೆಯುತ್ತಲೊ ನಗೆ ಮಾತಾಡುತ್ತಲೊ ಹಾಡುತ್ತಲೊ ಹೊತ್ತು ಕಳೆದರು.

ಊಟಕ್ಕೆ ಕುಳಿತಾಗ ಸರಸಮ್ಮನ ಪಕ್ಕದಲ್ಲಿ ತುಂಗಮ್ಮನಿದ್ದಳು; ಆಕೆಯ ಬಲಕ್ಕೆ ಜಲಜ.

ತುಂಗಮ್ಮನ ತಟ್ಟೆಯನ್ನು ನೋಡುತ್ತ ಸರಸಮ್ಮ ಅಂದರು:

"ಹೇಗಾಗಿದೆ ನೋಡು ನಿನ್ನ ತಟ್ಟೇರೂಪ. ಬೇರೆ ಒಂದು ಕೊಂಡ್ಕೋಬೇಕಮ್ಮ."

"ನಿಧಾನವಾಗಿ ಕೊಂಡುಕೊಂಡರಾಯಿತು."

"ಏನು, ಏನಂದಿರಿ ದೊಡ್ಡಮ್ಮ?"

—ಎಂದು ಜಲಜ ಕತ್ತು ಚಾಚಿ ಕೇಳಿದಳು.

"ತುಂಗಮ್ಮನ ತಟ್ಟೆ ಹಳೇದಾಯ್ತಲ್ಲಾ, ಅದಕ್ಕೆ ಅಂದೆ."

"ಆದರೆ ದೊಡ್ಡಮ್ಮ, ಅದು ಹ್ಯಾಗಾಗುತ್ತೆ? ಯಾವತಟ್ಟೆನೋಡಿ ಅದು....!"

"ಯಾವುದೇ?"

"ಭಾಗ್ಯದ ತಟ್ಟೆ ದೊಡ್ಡಮ್ಮ."

ಆ ತಟ್ಟೆಯ ವಿಷಯವಾಗಿ ಹುಡುಗಿಯರು ಕಟ್ಟಿದ್ದ ಕತೆ ಸರಸಮ್ಮನಿಗೆ ನೆನಪಾಗಿ ಅವರು ನಕ್ಕರು.

"ಅದೇನೇ ಜಲಜ, ಎಲ್ರೂ ಸೇರಿ ತುಂಗನ್ನ ಕಳಿಸ್ಬಿಡ್ಬೇಕೊಂತ ಮಾಡಿದೀರೇನ್ರೆ?"

"ನಾವ್ಯಾಕೆ ಕಳಿಸ್ತೀವಿ ದೊಡ್ಡಮ್ಮ. ರಾಜಕುಮಾರ ಕರಕೊಂಡು ಹೋಗೋಕೆ ಬಂದ್ರೆ, ಅವನೇನು ನಮ್ಮ ಒಪ್ಗೆ ಇಲ್ಲಾಂತ ಸುಮ್ನೆ ಕೂತ್ಕೋತಾನೆ?"

ಅಷ್ಟರಲ್ಲಿ ಹುಡುಗಿಯೊಬ್ಬಳು ಜಿಲೇಬಿ ಬಡಿಸುತ್ತ ಬಂದಳು. ಆಗ ಜಲಜೆಗೆ ತುಂಗಮ್ಮನೆಂದಳು:

"ನಿನ್ನ ಬಾಯಿ ತೆರೆ ಜಲಜ. ಜಿಲೇಬಿ ತುರುಕ್ತೀನಿ ಅದರೊಳಕ್ಕೆ. ಆಗಲಾದರೂ ನೀನು ಮಾತಾಡೋದು ನಿಲ್ಲುತ್ತೆ."

ಆದರೆ ತುಂಗಮ್ಮನ ಮುಖ ಅಷ್ಟರಲ್ಲೆ ಜಿಲೇಬಿಯಷ್ಟೆ ಕೆಂಪಗಾಗಿತ್ತು. ಆಸೆಯ ಅಭಿಮಾನದ ದೃಷ್ಟಿಯಿಂದ ಆ ಮುಖವನ್ನೆ ನೋಡುತ್ತ ಜಲಜ ಅಂದಳು:

"ನಿನ್ನ ಮುಖವೇ ಜಿಲೇಬಿ ಹಾಗಿದೆಯಲ್ಲೇ ನನ್ನಕ್ಕ! ನೀನು ಗಲಾಟೆ ಮಾಡ್ದೆ ಇರೋ ಹಾಗಿದ್ರೆ ಅದನ್ನೆ ತಿಂತೀನಿ."

"ಸಾಕು ಸಾಕೇ" ಎಂದರು ಸರಸಮ್ಮ; "ಹುಚ್ಚುಮಾತು! ಎಷ್ಟೊಂತ ಅದನ್ನೇ—!"

ಹಾಗೆ ಹೇಳಿ ಸರಸಮ್ಮ ಮೌನವಾದರು. ಆದರೆ ಅವ್ಯಕ್ತವಾದೊಂದು ಭಯ ಅವರನ್ನು ಹಿಡಿದಲುಗಿಸಿತು. ತಾವು ಒಬ್ಬಂಟಿಗಳೇ ಎಂಬ ಭಾವನೆ ಅವರಿಗಾಯಿತು. ಆದರೆ ಮರುಕ್ಷಣವೆ, 'ನಾನೂ ಸರಿಯೆ! ಏನೋಮಾತು ಕೇಳಿ ಏನೋ ವಿಚಾರ' ಎಂದು ತಮ್ಮನ್ನು ತಾವೇ ಗದರಿಸಿಕೊಂಡು ನಿಶ್ಚಿಂತೆಯಾಗಿ ಊಟ ಮಾಡಿದರು.

ದೀಪ ಆರಿಸಿ ಹುಡುಗಿಯರೆಲ್ಲ ಮಲಗಿಕೊಂಡಾಗ ಜಲಜ ಪಕ್ಕಕ್ಕೆ ಕೈಚಾಚಿ ತುಂಗಮ್ಮನ ಬೆರಳುಗಳನ್ನು ಮುಟ್ಟಿ ಅವುಗಳೊಡನೆ ಆಟ ವಾಡಿದಳು.

"ಅಕ್ಕ, ಅವರು ಎಷ್ಟು ಚೆನ್ನಾಗಿದ್ದಾರೆ ನೋಡೋಕೆ, ಅಲ್ಲ?"

ಯಾರು—ಎನ್ನುವುದು ತಿಳಿದರೂ ತುಂಗಮ್ಮ ಕೇಳಿದಳು:

"ಯಾರೇ?"

"ಸಾಕು ಜಂಭ! ರಾಜಕುಮಾರ—ಇನ್ನುಯಾರು? ಬಂದು ನಿನ್ನ ಮೆಚ್ಚಿಕೊಂಡು ಏನೋ ಅಂದು ಹೋದ್ರಲ್ಲ."

"ಸಾಕು ಸುಮ್ನಿರು!"

"ರಾಜಕುಮಾರ—"

"ಮುಚ್ಕೋ ಬಾಯಿ!"

"ಪಾರ್ವತಿಗೆ ಹೇಳ್ತೀನಿ ನಾಳೆ. ಮೇರೇದಿಲ್ ಟೂಟ್‌ಗಯಾ ಅಂತ ಹಾಡ್ತಾಳೆ."

"ಹಾಗೇನಾದರೂ ಮಾಡಿದ್ರೆ ನೋಡು ನಿನ್ನ."

ಜಲಜ ನಕ್ಕು ಸುಮ್ಮನಾದಳು ನಿಜ. ಆದರೆ ತುಂಗಮ್ಮನ ಮನಸ್ಸು ಸುಮ್ಮನಿರಲಿಲ್ಲ. ಬಹಳ ಹೊತ್ತು ನಿದ್ದೆ ಬರಲಿಲ್ಲ ಅವಳಿಗೆ.

# ೧೯

ಹೃಷ್ಟಪುಷ್ಟಳಾಗಿದ್ದ ಲಲಿತಾ ಕಾಹಿಲೆ ಬೀಳುವಳೆಂದು ಯಾರೂ ನಿರೀಕ್ಷಿಸಿರಲಿಲ್ಲ. ವರ್ಷಾಂತ್ಯದಲ್ಲಿ ತನಗೆ ದೊರೆತ ಕೊನೆಯ ಗಿರಾಕಿ ಎಂದೋ ಏನೋ ವಿಷಮಜ್ವರ ಆಕೆಗೆ ಅಂಟಿಕೊಂಡಿತು. ಏಳನೆಯ ದಿನ, ಒಂದುರೂಪಾಯಿ ಫೀಸಿನ ಸಮೀಪದ ಡಾಕ್ಟರು ಬಂದು ನೋಡಿದರು.

ಹೆರಿಗೆಯ ಕೊಠಡಿಯಲ್ಲಿ ಜ್ವರ ಪೀಡಿತಳಾಗಿದ್ದ ಲಲಿತೆಯನ್ನು ಮಲಗಿಸಿದ್ದರು. ಆ ಕೊಠಡಿಯಿಂದ ಸರಸಮ್ಮನೊಡನೆ ಹೊರಬಂದ ಡಾಕ್ಟರು ಗೋಡೆಯ ಮರೆಯಲ್ಲಿ ನಿಂತು ಹೇಳಿದರು :

"ಟೈಫಾಯ್ಡ್. ದುರ್ಲಕ್ಷ್ಯ ಮಾಡ್ಬೇಡಿ. ಇಲ್ಲಿ ಎಷ್ಟೆಂದರೂ ಆರೈಕೆ ಸರಿಯಾಗೊಲ್ಲ. ಆಸ್ಪತ್ರೆಗೆ ಸೇರಿಸಿ."

ಅಷ್ಟುಹೇಳಿ, ಫೀಸು ತೆಗೆದುಕೊಳ್ಳದೆಯೇ ಡಾಕ್ಟರರು ಹೊರಟು ಹೋದರು. ಸರಸಮ್ಮ ತಡಮಾಡಲಿಲ್ಲ. ಕಾರ್ಯದರ್ಶಿನಿಯ ಮನೆಗೆ ಹೋಗಿ ಬಂದರು. ವಿಕ್ಟೋರಿಯಾ ಆಸ್ಪತ್ರೆಗೆ ಹೋಗಿ ಜನರಲ್ ವಾರ್ಡಿನಲ್ಲಿ ಒಂದು ಬೆಡ್ ದೊರಕಿಸಿಕೊಂಡರು. ಆದರೆ ಆ ಹೊತ್ತಿಗೆ ಆಂಬ್ಯುಲೆನ್ಸ್ ಕಾರ್ ಸಿಗಲಿಲ್ಲ. ಕುಂಟುಕುದುರೆಯ ಜಟಕಾಗಾಡಿಯಲ್ಲಿ, ಜ್ವರದಗುಂಗಿನಲ್ಲಿ ಏನೇನೋ ಒಂಟಿಪದದ ಮಾತುಗಳನ್ನಾಡುತಿದ್ದ ಲಲಿತೆಯನ್ನು ಆಸ್ಪತ್ರೆಗೆ ಒಯ್ಯ ಬೇಕಾಯಿತು. ಸರಸಮ್ಮ, ತುಂಗಮ್ಮ ಮತ್ತು ಜಲಜ ಮೂವರೂ ಆಸ್ಪತ್ರೆಯ ತನಕ ಹೋದರು.

ಅಭಯಧಾಮದ ಹುಡುಗಿ ತಾನೆ? ಚೆನ್ನಾಗಿ ದುಡ್ಡು ಖರ್ಚುಮಾಡ ಬಲ್ಲವರಿಗೇ ಒಮ್ಮೊಮ್ಮೆ ಬೆಡ್ ಸಿಗದೇ ಹೋಗುವುದುಂಟು. ಅದರಲ್ಲಿ ಈ ಹುಡುಗಿಗೆ?

ಅಂತೂ ದೊರಕಿತು, ಮಂಚದಮೇಲೂ ಕೆಳಗೆ ನೆಲದಲ್ಲೂ ರೋಗಿ

ಗಳು ಮಲಗಿದ್ದ ಒತ್ತಡವಿದ್ದ ವಾರ್ಡಿನಲ್ಲಿ ಹತ್ತಾರು ಬೆಡ್ಡುಗಳ ನಡುವೆ ಲಲಿತೆಗಾಗಿ ಒಂದು ಮಂಚ.

ಅಲ್ಲಿ ಒಬ್ಬೊಬ್ಬ ರೋಗಿಯ ಪರವಾಗಿಯೂ ಆವರವರ ಸಂಬಂಧಿಕರು ಅಲ್ಲಿಯೇ ವಾಸಮಾಡುತಿದ್ದಂತೆ ತೋರಿತು!

"ದೊಡ್ಡಮ್ಮ! ಎಷ್ಟೊಂದು ಗಲಾಟೆ ಇಲ್ಲಿ! ಲಲಿತಾನ ಒಳ್ಳೇಕಡೆ ಮಲಗಿಸೋಕೆ ಆಗಲ್ವೆ?"

"ಹ್ಯಾಗಾಗುತ್ತೆ? ಸ್ಪೆಷಲ್ ವಾರ್ಡಿಗೆ ಎಲ್ಲಿಂದ ತರೋಣ ದುಡ್ಡು?"

ತುಂಗಮ್ಮನಿಗೆ ಉಸಿರುಕಟ್ಟಿತು. ತಮ್ಮಲ್ಲಿ ದುಡ್ಡಿಲ್ಲ, ತಾವು ಬಡವರು, ಅಲ್ಲವೆ?

"ದೊಡ್ಡಮ್ಮ! ಒಂದು ಹೇಳ್ತೀನಿ. ಏನೂತಪ್ಪು ತಿಳ್ಕೋಬೇಡಿ. ನನ್ನ ಸಂಬಳಾನ—"

ಸರಸಮ್ಮನಿಗೆ ಗಂಟಲು ಒತ್ತರಿಸಿ ಬಂತು.

"ಅದಲ್ಲ ತುಂಗ. ಹೀಗೆ ಒಂದ್ಸಾರಿ ಮಾಡಿದ್ವಿ ಅಂದ್ರೆ ಪ್ರತಿಸಾರೇನೂ ಮಾಡೋಕಾಗುತ್ತ?"

ತಪ್ಪೇನು?—ಎಂದು ಕೇಳಬೇಕೆನ್ನಿಸಿತು ತುಂಗಮ್ಮನಿಗೆ. ಆದರೆ ದೊಡ್ಡಮ್ಮನ ಮಾತಿಗೆ ಪ್ರತಿಯಾಡಬಾರದೆನ್ನಿಸಿತು.

"ಇಲ್ಲೇ ಇದ್ದರೂ ಪರವಾಗಿಲ್ಲ ಅಲ್ವಾ?"

"ಇಷ್ಟೊಂದು ಜನ ಇಲ್ವೆ? ದೇವರದಯದಿಂದ ನಮ್ಮ ಲಲಿತಾಗೆ ಏನೂ ಆಗಲ್ಲ. ದೇಹಬಲ ಚೆನ್ನಾಗಿದೆ. ಸುಲಭವಾಗಿ ಪಾರಾಗ್ತಾಳೆ."

ಲಲಿತೆಯನ್ನು ಮಲಗಿಸಿ ಹೊರಗೆ ಜಗಲಿಯಲ್ಲಿ ನಿಂತು, ಮಾರ್ಕೆಟಿನ ಜನಸಮುರ್ದದತ್ತ ನೋಡುತಲಿದ್ದಾಗ, ಚಿಕ್ಕಮೋರೆ ಮಾಡಿ ಆವರೆಗೂ ಮೌನವಾಗಿದ್ದ ಜಲಜ ಕೇಳಿದಳು:

"ರಾತ್ರೆ ಇಲ್ಲಿ ಯಾರಾರೂ ಇರ್ಬೇಕು ಅಲ್ವೆ ದೊಡ್ಡಮ್ಮ?"

"ಡಾಕ್ಟರನ್ನ ಕೇಳ್ತೀನಿ ನೋಡೋಣ, ಹಿಂದೆ ಎರಡು ಸಾರೇನೂ ಯಾರೂ ಇರಬೇಕಾದ್ದಿಲ್ಲ ಅಂದಿದ್ರು."

"ಅವರು ಯಾವಾಗಲೂ ಹಾಗೆಯೇ ಅಂತಾರೆ, ಆದರೆ ನಾವು—

ಹೃದಯದ ನೋವು ಆಡಿಸಿದ್ದ ಅಂಥ ಮಾತನ್ನು ಜಲಜ ಪೂರ್ತಿಗೊಳಿಸಲಿಲ್ಲ.

ಅಲ್ಲಿಯಾರೂ ಇರಬೇಕಾದ್ದಿಲ್ಲವೆಂದೇ ಡಾಕ್ಟರರೂ ಹೇಳಿದರು.

"ಇಲ್ಲಿ ಸ್ಟಾಫ್ ಇರೋದು ಯಾತಕ್ಕೆ? ನರ್ಸುಗಳುಯಾಕಿರೋದು? ನಾವುಯಾಕೆ? ಏನೂತಿಳೀದವರಹಾಗೆ ಅಂತೀರಲ್ಲಮ್ಮ ನೀವು!"

ಆರೀತಿ ತಮ್ಮ ದೊಡ್ಡಮ್ಮನೊಡನೆ ಡಾಕ್ಟರು ಮಾತನಾಡಿದ್ದನ್ನು ಕಂಡು ತುಂಗಮ್ಮ—ಜಲಜೆಯರಿಗೆ ಕೆಡುಕೆನಿಸಿತು. ಅವಮಾನಿತರಾದವರಂತೆ ಅವರು ಉಗುಳು ನುಂಗಿದರು.

"ಹಾಗಲ್ಲ ಡಾಕ್ಟರ್. ಯಾರಾದರೂ ಇಲ್ಲಿರ್ಬೇಕೂಂತ ನಾವೇ ಹೇಳಿದ್ವಿ."

"ಓ!" ಎಂದರು ವಯಸ್ಸಾಗಿದ್ದ ಆ ಡಾಕ್ಟರಮ್ಮ ತುಂಗಮ್ಮನನ್ನು ನೋಡಿ. "ಪೇಷಂಟು ನಿಮ್ಮ ಸ್ನೇಹಿತೇನೋ?"

ಜಲಜ ಹೌದೆಂದು ತಲೆಯಾಡಿಸಿದಳು.

"ಏನೂ ಹೆದರ್ಕೊೀ ಬೇಡಿ. ನಿಮ್ಮ ಸ್ನೇಹಿತೇನ ನಾವು ನೋಡ್ಕೋತೀವಿ."

ಆ ಆಶ್ವಾಸನೆಯ ಸ್ವರ ಪ್ರಮಾಣಿಕವಾಗಿತ್ತೆಂದು ತುಂಗಮ್ಮನಿಗೆ ಅನಿಸಿತು....ಆ ಬಳಿಕ ಅವರು ಮೂವರೂ ಅಭಯಧಾಮದ ಹಾದಿ ಹಿಡಿದರು.

ಮಾರನೆದಿನ ಬೆಳಿಗ್ಗೆ ಜಲಜ ಆಸ್ಪತ್ರೆಗೆ ಹೋಗಿ ಬಂದಳು; ಸಂಜೆಗೆ ತುಂಗಮ್ಮ.

ಆದಾದ ಮರುದಿನ ಸರಸಮ್ಮನೇ ಬೆಳಿಗ್ಗೆ ಹೋದರು. ಸಂಜೆ ತುಂಗಮ್ಮ ಹೊರಟಳು.

ಆಕೆ ಆಸ್ಪತ್ರೆ ಸೇರಿದಾಗಲಿನ್ನೂ ಐದೂಕಾಲುಗಂಟೆ. ಸಂದರ್ಶಕರನ್ನು ಒಳಕ್ಕೆ ಬಿಡಲು ಮತ್ತೂ ಹದಿನೈದು ನಿಮಿಷ ಬೇಕು. ಮೆಟ್ಟಲೇರುವಲ್ಲಿ ಪುಟ್ಟಗೇಟುಹಾಕಿ ವಾರ್ಡ್‌ಬಾಯ್ ನಿಂತಿದ್ದ. ತುಂಗಮ್ಮ, ಎಲ್ಲರಹಿಂದೆ ಕಂಬಕ್ಕೊರಗಿ ನಿಂತಳು.

ಪ್ಯಾಂಟಿನ ಎಡಜೇಬಿನೊಳಕ್ಕೆ ಕೈ ಇಳಿಬಿಟ್ಟು ಉಣ್ಣೆಯ ಸೂಟು

ಧರಿಸಿದ್ದ ಎತ್ತರದ ನಿಲುವಿನ ಕೆಂಪನೆಯ ಮುಖದ ಆ ಯುವಕ ಯಾರನ್ನೋ ಹುಡುಕುತಿದ್ದ. ಹಲವು ಮುಖಗಳ ಜತೆಯಲ್ಲಿ ಅದೂ ಒಂದಾಗಿ ತುಂಗಮ್ಮನ ಕಣ್ಣೆದುರು ಹಾದು ಹೋಯಿತು. ಆದರೆ ಆ ಕ್ಷಣವೆ ವಿದ್ಯುತ್ ಸಂಚಾರ ವಾದಂತಾಗಿ ತುಂಗಮ್ಮ ಮತ್ತೊಮ್ಮೆ ಆ ಯುವಕನನ್ನು ನೋಡಿದಳು. ಆತನನ್ನು ಮರೆಯುವ ಪ್ರಶ್ನೆಯೇ ಇರಲಿಲ್ಲ. ಆದರೆ ಇಲ್ಲಿ—ಆಸ್ಪತ್ರೆಯಲ್ಲಿ—ಆತ ಏನು ಮಾಡುತಿದ್ದಾನೆ? ಆತನ ಸಂಬಂಧಿಕರು ಯಾರಾದರೂ ರೋಗಿ ಯಾಗಿ ಇರುವರೇನೋ. ಇದ್ದರೂ ಈ ವಾರ್ಡಿನಲ್ಲಿ! ಸಾಧ್ಯವಿಲ್ಲದ ಮಾತು ಅಷ್ಟು ಶ್ರೀಮಂತರು ಸ್ಪೆಷಲ್‌ವಾರ್ಡಿನಲ್ಲೇ ಅಲ್ಲವೆ ಇರಬೇಕಾದ್ದು?

ಅಲ್ಲಿ ನೆರೆದಿದ್ದ ಹೆಂಗಸರ ಗಂಡಸರ ಭುಜಗಳ ಮೇಲಿಂದ ತಲೆಗಳ ಮೇಲಿಂದ ದೃಷ್ಟಿಹಾಯಿಸಿ ಆತ ನೋಡುತಿದ್ದ, ಯಾರನ್ನೋ ಹುಡುಕುತಿದ್ದ. ತನ್ನನ್ನೆ ಎಲ್ಲಾದರೂ ಹುಡುಕುತ್ತಿರಬಹುದೆ? ಛೆ! ಎಂಥ ಯೋಚನೆ! ಆ ಯುವಕನೆಲ್ಲಿ? ಅಭಯಧಾಮದ ಬಡಹುಡುಗಿಯಾದ ತಾನೆಲ್ಲಿ?

ಆಹ್ವಾನದ ಗಂಟೆ ಬಾರಿಸಿತು. ಮೆಟ್ಟಲೇರಿ ಹೋಗುತಿದ್ದವರನ್ನು ನೋಡುತ್ತ ನಿಂತ ಆ ಯುವಕ. ಆತನಿಗೆ ಕಾಣಿಸಿಕೊಳ್ಳದಿರುವುದೇ ವಾಸಿ ಎಂದು ತುಂಗಮ್ಮ, ಮೆಲ್ಲನೆ ಮೆಟ್ಟಲೇರುತಿದ್ದ ಚೆನ್ನಾಗಿ ಬೊಜ್ಜು ಬೆಳೆದಿದ್ದ ಒಬ್ಬಳಿಗೆ ಮರೆಯಾಗಿ ತಾನೂ ಏರತೊಡಗಿದಳು. ಆಗ ಸ್ವರ ಕೇಳಿಸಿತು:

"ರೀ ನಿಲ್ಲಿ!"

ಭಾಷಣ ಚೆನ್ನಾಗಿತ್ತು ಎಂದು ಹಿಂದೆ ಹೇಳಿದ್ದ ಧ್ವನಿಯೇ. ಆದರೆ ಹೆಸರು ಹಿಡಿದು ಯಾರೂಕರೆದಿರಲಿಲ್ಲ. ತನದಲ್ಲವೆಂದು ನೇರವಾಗಿ ಹೊರಟು ಹೋಗಬಹುದಿತ್ತು. ಆದರೂ—

ತುಂಗಮ್ಮ ಅಲ್ಲೆ ಗೋಡೆಗೊರಗಿ ನಿಂತು ಆತನ ಮುಖ ನೋಡಿದಳು. ಆ ಮುಖದ ಆಕಾಶದಮೇಲೆ ವಿಸ್ತಾರವಾದ ಚಂದ್ರನಾಗಿತ್ತು ನಗು. ತುಂಗಮ್ಮನ ಮೈ ಬೆವತುಹೋಯಿತು.

ಏನು ಮಾಡಬೇಕೆಂದು ತಿಳಿಯದೆ ನಿಂತಿದ್ದ ತುಂಗಮ್ಮನ ಸಮಸ್ಯೆ ಯನ್ನು ಬಗೆಹರಿಸುವವನಂತೆ ಯುವಕ ತಾನೂ ಮೆಟ್ಟಲೇರಿದ. ಇಬ್ಬರೂ ಮುಂದುವರಿದರು.

"ನಾನು ಸೋಮಶೇಖರ್. ಜ್ಞಾಪಕ ಇದೆಯೊ?"

ಮೌನವಾಗಿ, ಲಜ್ಜೆಯಿಂದ ಕೆಂಪೇರಿದ್ದ ಮುಖವನ್ನಷ್ಟೆ ಚಲಿಸಿ, ಹೂಂ ಎಂಬ ಸಾಂಕೇತಿಕ ಉತ್ತರವನ್ನು ತುಂಗಮ್ಮ ಕೊಟ್ಟಳು.

"ನಿಮ್ಮನ್ನೇ ಹುಡುಕಿಕೊಂಡು ಬಂದೆ. ನಿಮ್ಮ ಗುರುತು ನನಗೆ ಸಿಗುತ್ತೋ ಇಲ್ವೋಂತ ಸ್ವಲ್ಪ ಅನುಮಾನವಾಯ್ತು. ಆದಿನ ಬೇರೆ ಸೀರೆ ಉಟ್ಕೊಂಡಿದ್ರಿ. ಅಲ್ವೆ? ಆದರೆ ನೀವು ಯಾವ ಸೀರೆ ಉಟ್ಕೊಂಡ್ರೂ ಒಂದೇ ರೀತಿ ಕಾಣ್ತೀರ....

ಆತ ಮಾತುಗಾರ. ಆ ಮಾತುಗಳು ಆಕೆಯನ್ನು ಸುತ್ತುವರಿದು ಒಂದೇಸಮನೆ ಮುತ್ತುತಿದ್ದುವು. ತನ್ನನ್ನು ಹುಡುಕಿಕೊಂಡು ಯಾಕೆ ಬಂದ ಆತ?

ಮೇಲಿನ ಮಹಡಿ ತಲಪುತ್ತಲೇ ಜಗಲಿಯಮೇಲೆ ಅವರಿಬ್ಬರೂ ನಿಂತರು.

"ನಾನುಯಾಕೆ ನಿಮ್ಮನ್ನ ಹುಡುಕಿಕೊಂಡು ಬಂದೆ ಅಂತ ಕೇಳ್ಬಾರ್ದ?"

"ಹೌದು, ಯಾಕೆ?"

ಅಬ್ಬ, ಆ ಪ್ರಶ್ನೆಯಾದರೂ ಬಂತಲ್ಲ! ನಿನ್ನೆಯ ದಿವಸ ನಿಮ್ಮ ಕಾರ್ಯದರ್ಶಿ ಮನೆಗೆ ನನ್ನಕ್ಕ ಹೋಗಿದ್ದಾಗ ಏನೋ ಮಾತು ಬಂತಂತೆ—ಅಭಯಧಾಮದ ಯಾವಳೋ ಹುಡುಗಿ, ಆಸ್ಪತ್ರೇಲಿದಾಳೆ, ಟೈಫಾಯ್ಡು, ಅಂತ. ಅಕ್ಕ ಮನೆಗೆ ಬಂದು ಹಾಗೆ ಅಂದಾಗ, ಹುಡುಗಿ ಹೆಸರೇನೂಂತ ಕೇಳ್ದೆ. ಅವಳಿಗೆ ನೆನಪಿರಲಿಲ್ಲ. ನನಗೆ ಗೊತ್ತಿದ್ದುದು ಒಂದೇ ಹೆಸರು. ತುಂಗಮ್ಮನೆ?—ಅಂತಕೇಳ್ದೆ. ಹೂಂ—ಅಂದರು ಅಕ್ಕ. ಆಮೇಲೆ, ಇದ್ದರೂ ಇರಬಹುದು ಅಂದ್ಲು. ಅದೇನೂ ನೋಡ್ಕೊಂಡೇ ಬರೋಣಾಂತ ಇವತ್ತು ಅಭಯಧಾಮಕ್ಕೇ ಹೋದೆ. ಅಲ್ಲಿ ಏನಾಯ್ತೂಂತ?"

—ಹಾಗೆ ಕೇಳಿ ಆತ ನಗತೊಡಗಿದ.

"ಏನಾಯ್ತು?"

"ನಿಮ್ಮ ಅಸಿಸ್ಟೆಂಟ್ ಎಲ್ಲೀಂತ ಸರಸಮ್ಮನವರ್ನ ಕೇಳ್ದೆ. ಆಸ್ಪತ್ರೇಲಿದಾರೆ—ಅಂದ್ರು. ಈಗ ಹ್ಯಾಗಿದೆ ಅವರ್ಗೆ?—ಅಂದೆ."

"ಓ!"

" ಯಾರಿಗೆ ?—ಅಂದ್ರು. ಅದೇ, ತುಂಗಮ್ಮನವರಿಗೆ ಅಂದ್ದಿದಕ್ಕೆ, ಅವರಿಗೇನಾಗಿದೆ ?—ಅಂತ ಆಶ್ಚರ್ಯಪಟ್ರು....ಆಮೇಲೆ ವಿಷಯ ತಿಳಿಯಿತೂಂತಿಟ್ಕೊಳ್ಳಿ...."

ತಮಾಷೆ ಒಟ್ಟಿನಲ್ಲಿ. ಆದರೆ ತನ್ನನ್ನು ಆತ ಹುಡುಕಿಕೊಂಡು ಬಂದು ದಂತೂ ನಿಜ. ಅಳುಕುತ್ತ, ಛೆ—ಇರಲಾರದು ಎಂದು, ತಾನು ಮಾಡಿದ್ದ ಯೋಚನೆ ತಪ್ಪಾಗಿತ್ತು.

ಆತನ ಸರಳ ವರ್ತನೆಯ ಎದುರಿಗೆ ಆಕೆಯ ಸಂಕೋಚದ ಮಂಜಿನ ತೆರೆ ಮೆಲ್ಲ ಮೆಲ್ಲನೆ ಕರಗ ತೊಡಗಿತು. ತನ್ನನ್ನು ನೋಡಿದ್ದಾಯಿತು. ಇನ್ನು ಆತ ಹೊರಟುಬಿಡಬಹುದು. ಒಳಗೆ ಲಲಿತೆಯನ್ನು ನೋಡುವುದಕ್ಕೂ ಆತ ಬರಬಾರದೆ ?....ತುಂಗಮ್ಮ ವಾರ್ಡಿನತ್ತ ದೃಷ್ಟಿಸರಿಸಿದಳು.

ಅದನ್ನು ಗಮನಿಸಿ ಅವನೆಂದ:

ಬನ್ನಿ ಒಳಕ್ಕೆ ಹೋಗೋಣ...."

ಲಲಿತೆಯ ಮೈಯಲ್ಲಿನ್ನೂ ಜ್ವರವಿತ್ತು. ಎಚ್ಚರವಾಗಿಯೇ ಇದ್ದಳಾಕೆ. ಮಂಚದ ಬಳಿನಿಂತ ತುಂಗಮ್ಮನ ಬೆರಳುಗಳನ್ನು ಮುಟ್ಟಿ ಆಕೆ ನರಳಾಡಿದಳು. ಆಕೆಗೆ ಪಕ್ಕದಲ್ಲಿ ನಿಂತವನ ಗುರುತು ಸಿಕ್ಕಿದಂತೆ, ಇಲ್ಲವೆ ಗುರುತುತಿಳಿಯುವ ಕುತೂಹಲವಿದ್ದಂತೆ, ಕಾಣಲಿಲ್ಲ.

ಸೋಮಶೇಖರ ವಾರ್ಡಿನ ಉದ್ದಗಲಕ್ಕೂ ನೋಡಿದ. ಬಹಳ ವರ್ಷ ಗಳಿಂದ ಅವನು ಆಸ್ಪತ್ರೆಯ ಜನರಲ್ ವಾರ್ಡುಗಳನ್ನು ಕಂಡಿರಲಿಲ್ಲ. ಹೇಗಿತ್ತು! ಆ ರೋಗಿಗಳೊ—ಆ ಸಂದರ್ಶಕರೊ! ಒಂದೆರಡು ಮಂಚ ಗಳನ್ನಂತೂ ಹತ್ತಾರು ಜನ ಸಂದರ್ಶಕರು ಮುತ್ತಿದ್ದರು.

ಈ ಗದ್ದಲದೆಡೆಯಲ್ಲಿ ಅಭಯಧಾಮದ ರೋಗಿಗೆ--ತುಂಗಮ್ಮನ ಗೆಳತಿಗೆ—ಗುಣವಾಗಬೇಕು !

" ಇಲ್ಲೇ ಇರಿ, ಈಗ ಬರ್ತೀನಿ"

—ಎಂದು ಸೋಮಶೇಖರ ಅತ್ತಿತ್ತ ನೋಡುತ್ತ ಹೊರಟುಹೋದ. ಆತನನ್ನೆ ಲಲಿತೆಯ ದೃಷ್ಟಿಹಿಂಬಾಲಿಸಿತು. ಆದರೆ, ಯಾರು ?—ಎಂದು ಕೇಳುವ ಸಾಮರ್ಥ್ಯವಾಗಲೀ ತಿಳಿಯುವ ಇಚ್ಛೆಯಾಗಲೀ ರೋಗಿಗೆ ಇದ್ದಂತೆ ತೋರಲಿಲ್ಲ. ತುಂಗಮ್ಮ ತಾನಾಗಿ ಹೇಳಲಿಲ್ಲ.

ನಿಮಿಷಗಳು ಬಲು ನಿಧಾನವಾಗಿ ಕಳೆದುವು.

ಸ್ವಲ್ಪ ಹೊತ್ತಿನಲ್ಲೇ ಸೋಮಶೇಖರ, ಯುವತಿಯಾದ ಒಬ್ಬ ಲೇಡಿ ಡಾಕ್ಟರೊಡನೆಯೂ ಒಬ್ಬ ಯುವಕ ಡಾಕ್ಟರೊಡನೆಯೂ ಬಂದ.

ಹತ್ತಿರಬರುತಿದ್ದಂತೆ ಲೇಡಿ ಡಾಕ್ಟರು ಕೇಳಿದರು.

"ಎಲ್ಲಿ ಮಿಸ್ಟರ್ ಸೋಮಶೇಖರ್ ನಿಮ್ಮ ಪೇಷೆಂಟು ?"

ಹಾಗೆ ಕೇಳಿದಾಗ ಆ ಡಾಕ್ಟರ ತುಟಿಗಳು ಸೂಕ್ಷ್ಮವಾಗಿ ನಕ್ಕಂತೆ ತುಂಗಮ್ಮನಿಗೆ ತೋರಿತು. ಯಾಕೊ, ಆದೃಶ್ಯ ಅವಳಿಗೆ ಇಷ್ಟವಾಗಲಿಲ್ಲ.

ಸೋಮಶೇಖರ ಲಲಿತೆಯತ್ತ ಬೊಟ್ಟುಮಾಡಿದ. ಗಂಡಸು ಡಾಕ್ಟರನ್ನು ಉದ್ದೇಶಿಸಿ ಅವನೆಂದ:

"ಅಲ್ಲ ನಾಗರಾಜ್, ಇಂಥ ಗಲಾಟೇಲೂ ಕಾಹಿಲೆ ವಾಸಿ ಯಾಗುತ್ತೇನಯ್ಯ ?"

"ಅದೆಲ್ಲಾ ಕೇಳ್ಬೇಡ. ನಾಳೆ ಚುನಾವಣೆಗೆ ನಿಂತು ಶಾಸನ ಸಭೆಗೆ ಹೋಗಿ, ಆಸ್ಪತ್ರೆಗೆ ಹೊಸಕಟ್ಟಡಬೇಕು—ಜಾಸ್ತಿ ಬೆಡ್ಡು ಬೇಕು ಅಂತ ಗಲಾಟೆ ಮಾಡು. ಈಗ—?"

ಆ ಡಾಕ್ಟರ ಮಾತು ನಿಲ್ಲಿಸಿ ಲೇಡಿ ಡಾಕ್ಟರು ಅಂದರು:

"ನೋಡಿ, ಆ ಕೊನೇ ಪೇಷೆಂಟು ನಾಳೆ ಬೆಳಿಗ್ಗೆ ಡಿಸ್‌ಚಾರ್ಜು ಆಗ್ತಾಳೆ."

ಕೊನೆಯ ಬೆಡ್ಡು. ಅದು ಚೆನ್ನಾಗಿತ್ತು. ಕಿಟಕಿಯಬಳಿ, ಗಾಳಿ ಓಡಾಡುವ ಜಾಗ.

"ಹಾಗಾದರೆ ನಾಳೆ ಈಕೇನ ಅಲ್ಲಿ ಹಾಕಿಸ್ತೀರಾ ? ಪ್ಲೀಸ್ !"

ಡಾ. ನಾಗರಾಜ್ ಅಂದರು:

"ಹೂಂ. ಅಷ್ಟೂ ಮಾಡ್ದೆ ಇರೋಕಾಗುತ್ತೇನಯ್ಯ, ನೀನು ಕೇಳ್ದೆ ಅಂದ್ಮೇಲೆ."

ಬಂದಿದ್ದ ಡಾಕ್ಟರಿಬ್ಬರೂ ಲಲಿತೆಯ ತಲೆಯಮೇಲೆ ಮಂಚಕ್ಕೆತಗಲಿಸಿ ತೂಗಹಾಕಿದ್ದ ಚಾರ್ಟನ್ನು ನೋಡಿದರು. ಒಬ್ಬೊಬ್ಬರು ಒಂದೊಂದು ವಿಧ ವಾಗಿ ತುಂಗಮ್ಮನತ್ತ ದೃಷ್ಟಿಹಾಯಿಸಿದರು

ಯುವತಿ ಡಾಕ್ಟರು ಮುಗುಳುನಗುತ್ತಲೇ ಅಂದರು:

" ನೀವೇನೂ ಚಿಂತಿಸ್ಬೇಡಿ ಮಿ. ಸೋಮಶೇಖರ್. ನಿಮ್ಮ ಪೇಷಂಟ್ನ ನಾವು ನೋಡ್ಕೊಳ್ತೀವಿ."

" ಅಷ್ಟು ಮಾಡೀಪ್ಪಾ...."

ಬಂದ ಮೂವರೂ, ಹಿಂತಿರುಗಿದರು. ಇಬ್ಬರು ಡಾಕ್ಟರನ್ನೂ ವಾರ್ಡಿನ ಹೊರಗೆ ಬಿಟ್ಟು ಸೋಮಶೇಖರನೊಬ್ಬನೇ ತುಂಗಮ್ಮನೆಡೆಗೆ ಬಂದ.

ಇದೆಲ್ಲವೂ ಕನಸೆ? ಎಂದು ಭ್ರಮಿಸಿದಳು ತುಂಗಮ್ಮ.

ಸಮೀಪಿಸಿದ ಸೋಮಶೇಖರ ಹೇಳಿದ:

" ನಾಳೆ ಆ ಕೊನೇ ಬೆಡ್ಡಿಗೆ ಬದಲಾಯಿಸ್ತಾರೆ. ಅಲ್ಲಿ ಅನುಕೂಲ ವಾಗಿರುತ್ತೆ."

ತುಂಗಮ್ಮನ ಕಣ್ಣುಗಳಲ್ಲಿ ಕೃತಜ್ಞತೆಯಿತ್ತು. ಮಾತು ಮಾತ್ರ ಆತನೇ ಮುಂದುವರಿಸ ಬೇಕಾಯಿತು.

" ಟೈಫಾಯ್ಡೇನೂ ದೊಡ್ಡ ವಿಷಯವೇ ಅಲ್ಲ. ಆರೈಕೆ ಚೆನ್ನಾಗಿದ್ರೆ ಸುಲಭವಾಗಿ ಗುಣವಾಗುತ್ತೆ."

" ಹೌದು."

ಸಂದರ್ಶಕರೆಲ್ಲ ಹೊರಡಲು ಆದೇಶವೀಯುವ ಗಂಟೆ ಬಾರಿಸುವುದಕ್ಕೆ ಮುಂಚೆಯೇ ಸೋಮಶೇಖರ ಮತ್ತು ತುಂಗಮ್ಮ ಹೊರಬಿದ್ದರು.

" ಸ್ಪೆಷಲ್‌ವಾರ್ಡಿನಲ್ಲಿ ಇರಿಸ್ಬೇಕಾಗಿತ್ತು."

" ಆಗ್ಲಿಲ್ಲ...."

" ಇಲ್ಲೂ ಪರವಾಗಿಲ್ಲ. ಇನ್ನೇನು ಆ ಡಾಕ್ಟರೂ ಚೆನ್ನಾಗಿ ನೊಡ್ಕೋ ತಾರೆ."

" ನಿಮ್ಮ ಸ್ನೇಹಿತರು ಅಲ್ವೆ?"

—ತುಂಗಮ್ಮನ ನಾಲಿಗೆ ಚಲಿಸತೊಡಗಿತ್ತು ಅಂತೂ!

" ನಾಗರಾಜ? ಹೌದು."

" ಆ ಲೇಡಿ ಡಾಕ್ಟರು?"

ಸೋಮಶೇಖರ ತುಂಗಮ್ಮನ ಮುಖ ನೋಡಿದ. ಅಲ್ಲೇನೂ ಇರಲಿಲ್ಲ. ಆದರೂ ಆ ನೋಟದ ಹಿಂದೆ—?

" ನಮ್ಮ ನಾಗರಾಜನ ಸ್ನೇಹಿತೆ."

ಆ ಉತ್ತರದಿಂದ ತೃಪ್ತಿಗೊಂಡವಳಂತೆ ತುಂಗಮ್ಮ ಸುಮ್ಮನಾದಳು.

"ನಾನು ಮೆಡಿಕಲ್ ಕಾಲೇಜಿಗೆ ಸ್ವಲ್ಪ ದಿವಸ ಮಣ್ಣು ಹೊತ್ತಿದ್ದೆ."

"ಓ!"

"ಇಷ್ಟರೊಳಗೆ ನಾನು ಈ ನಾಗರಾಜನಹಾಗೆ ಇಲ್ಲಿ ಹೌಸ್ ಸರ್ಜನ್ ಆಗಬೇಕಾಗಿತ್ತು. ಆದರೆ ಅದೇನೋ ಅಂತಾರಲ್ಲ—ವಿಧಿ ಬರೆದಿರ್ಲಿಲ್ಲ ಅಂತ!"

ತುಂಗಮ್ಮ, ಸೋಮಶೇಖರನನ್ನು ಡಾಕ್ಟರಾಗಿ ಚಿತ್ರಿಸಿಕೊಂಡಳು. ಕಾಹಿಲೆಗಳನ್ನೆಲ್ಲ ಗುಣಮಾಡಬಲ್ಲ ವಿಚಕ್ಷಣ ಡಾಕ್ಟರು. ಕೆನ್ನೆಗಳು ಬಿರಿಯುವಂತೆ ತೋರುತಿದ್ದ ಆ ಮೋಹಕ ನಗೆಯೊಂದೇ ಸಾಕು, ರೋಗಿಗಳನ್ನು ಹರ್ಷಚಿತ್ತರಾಗಿಮಾಡಲು.

"ಮೆಡಿಕಲ್ ಕಾಲೇಜು ಬಿಟ್ಬಿಟ್ರಾ?"

"ಹೂಂ ಕಣ್ರೀ. ಪ್ರಿ-ಮೆಡಿಕಲ್ನಲ್ಲೇನೋ ಪಾಸಾಯ್ತು. ಫಸ್ಟ್ ಈಯರ್ ಆಗೋ ಹೊತ್ಗೆ ಬೇಜಾರಾಯ್ತು ನಂಗೆ-ಹೆಣ ಕುಯ್ದು ಕುಯ್ದು!"

ಪ್ರಿ-ಮೆಡಿಕಲೆಂದರೇನೋ ತುಂಗಮ್ಮನಿಗೆ ಗೊತ್ತಿರಲಿಲ್ಲ. ಏನೆಂದು ಕೇಳಿ ತನ್ನ ಅಜ್ಞಾನವನ್ನು ತೋರಿಸಿಕೊಳ್ಳುವುದಕ್ಕೂ ಆಕೆ ಸಿದ್ಧಳಿರಲಿಲ್ಲ. ಆದರೆ ಹೆಣಕೊಯ್ಯುವ ಆ ವಿಷಯ! ಅವಳ ಮೈ ಜುಮ್ಮೆಂದಿತು.

"ಆಮೇಲೆ? ಕಾಲೇಜು ಬಿಟ್ಬಿಟ್ರಾ?"

—ವಿಷಾದದ ಛಾಯೆಯಿತ್ತು ಆ ಪ್ರಶ್ನೆಯಲ್ಲಿ.

"ಹೂಂ. ಆದಾದ್ಮೇಲೆ ಜಾಸ್ತಿ ಶ್ರಮವಹಿಸ್ದೇನೆ ಬಿ. ಎ. ಮಾಡ್ಕೊಂಡೆ. ವಕೀಲನಾಗೋದು ವಾಸಿ ಅನಿಸ್ತು. ಪೂನಾಗೆ ಹೋಗಿ ಎಲ್‌ಎಲ್. ಬಿ.ಗೆ ಕೂತೆ. ಅದರ ಜತೇಲೆ ಎಂ.ಎ.ನೂ ಮಾಡ್ಕೊಂಡೆ."

ಈ ಸೋಮಶೇಖರ್ ವಕೀಲ ಹಾಗಾದರೆ....ಕರಿಯಕೋಟು ಹಾಕಿಕೊಂಡು ನ್ಯಾಯಾಸ್ಥಾನದಲ್ಲಿ ವಾದಿಸುವ ಚಿತ್ರ....ತುಮಕೂರಿನಲ್ಲಿ ಯಾವುದೋ ತಮಿಳು ಸಿನಿಮಾದಲ್ಲಿ ನೋಡಿದ ಹಾಗೆ.

ಆಸ್ಪತ್ರೆಯ ಹೆಬ್ಬಾಗಿಲ ಬಳಿ ಸೋಮಶೇಖರ ಕೇಳಿದ:

"ನೀವು ಬಸ್ನಲ್ಲಿ ಹೋಗ್ತೀರಾ?"

"ಹೌದು. ನೀವು?"

—ಆ ಪುಟ್ಟಕಾರು ಎಲ್ಲಿಯೋ ನಿಂತುಕೊಂಡಿರಬೇಕು ಎಂದಿದ್ದಳು ತುಂಗಮ್ಮ. ಅದಿರಲಿಲ್ಲ.

“ನನಗೆ ಸೈಕಲ್ಲಿದೆ. ತಾಳಿ, ಬಂದ್ಬಿಟ್ಟೆ.”

ಅಲ್ಲೇ ಗುರುತುಚೀಟಿ ಅಂಟಿಸಿಕೊಂಡು ನಿಂತಿದ್ದ ತನ್ನ ಒಳ್ಳೆಯ ಹೊಸ ಸೈಕಲನ್ನು ಸೋಮಶೇಖರ ತಳ್ಳಿಕೊಂಡು ಬಂದ. ಆಗ ತುಂಗಮ್ಮನ ಮನಸಿನಲ್ಲಿದ್ದುದನ್ನು ಊಹಿಸುವುದೇನೂ ಆತನಿಗೆ ಕಷ್ಟವಾಗಲಿಲ್ಲ.

“ಆ ಪುಟುಕೋಸು ಕಾರು ನಮ್ಮ ಭಾವನ್ದು. ಎಲ್ಲಿಗಾದರೂ ಅದರಲ್ಲಿ ಕೂತುಹೋಗೋದಕ್ಕಿಂತಾನೂ ನಡಕೊಂಡು ಹೋಗೋದೇ ವಾಸಿ.”

ಕಾರಿನಂತಹ ಬೆಲೆ ಬಾಳುವ ವಸ್ತುಗಳ ಬಗೆಗೆ ಸೋಮಶೇಖರ ಅಷ್ಟು ಲಘುವಾಗಿ ಮಾತನಾಡಿದುದನ್ನು ಕಂಡು ತುಂಗಮ್ಮನಿಗೆ ಸಂತೋಷವಾಯಿತು.

....‘ನಮಸ್ತೆ’ ಎಂದು ವಂದಿಸಿ ಆಕೆ ಬಸ್ಸಿನಲ್ಲಿ ಕುಳಿತಳು.

ಬಸ್ ಓಡುತಿದ್ದಂತೆ ರುಂಯ್‌ರುಂಯ್ಯನೆ ಶೀತಲಗಾಳಿ ತುಂಗಮ್ಮನ ಮುಖಕ್ಕೆ ಬೀಸಿತು. ಅದು ಆಹ್ಲಾದಕರವಾಗಿತ್ತು. ಹೃದಯಬನದಲ್ಲಿ ಕೋಗಿಲೆ ‘ಕೂ ಹೂ’ ಎನ್ನುತಿತ್ತು.

‘ಛಿ! ಹೀಗಾಗಬಾರದು!”

—ಎಂದು ತನ್ನನ್ನು ತಾನೆ ಟೀಕಿಸಿಕೊಂಡಳು ತುಂಗಮ್ಮ.

ಆ ನಾರಾಯಣಮೂರ್ತಿ....ಇಷ್ಟೆಲ್ಲ ಅನುಭವಿಸಿದಮೇಲೆಯೂ ಇಷ್ಟು ಬೇಗನೆ ಗಂಡಸಿನ ಸ್ವರಕೇಳಿಯೇ ತಾನು ಮರುಳಾಗುತ್ತಿರುವೆನಲ್ಲ— ಥೂ! ಥೂ!

ಆದರೆ ಸೋಮಶೇಖರ ಒಳ್ಳೆಯವನು. ಆ ಮುಖದಲ್ಲಿ ಕಪಟ ಕಿಂಚಿತ್ತಾದರೂ ಇತ್ತೆ?

ಆದರೇನಂತೆ? ತಾನು ಆತನ ಬಗೆಗೆ ಚಿಂತಿಸಕೂಡದು. ಅದು ಸರಿಯಲ್ಲ.

....ಬಸ್ಸಿನಿಂದಿಳಿದು ನಡೆದು ಅಭಯಧಾಮ ಸಮೀಪಿಸಿ ಬಾಗಿಲು ತಟ್ಟುತ್ತಾ ತುಂಗಮ್ಮ ಅಂದುಕೊಂಡಳು:

‘ಈ ಲಲಿತಾ ಕಾಹಿಲೆ ಬೀಳ ಬಾರದಾಗಿತ್ತು....ಥೂ....ಇನ್ನು ಈ ಹಾಳು ಯೋಚನೆ ಬೇರೆ!’

ತಾನು ಅಭಯಧಾಮಕ್ಕೆ ಹೋಗಿ ಆಸ್ಪತ್ರೆಗೆ ಬಂದೆನೆಂದು ಆತ ಹೇಳಿದನಲ್ಲವೆ? ಸರಿಯಿನ್ನು. ಸರಸಮ್ಮನಿಗೆ ತಾನು ಹೇಳಲೇಬೇಕು. ಅವರಾಗಿ ಕೇಳುವ ಮುಂಚೆಯೇ....

"ದೊಡ್ಡಮ್ಮ, ಇವತ್ತು ಇಲ್ಲಿಗೆ ಯಾರೋ ಬಂದಿದ್ದರಂತಲ್ಲ, ಅವರು ಆಸ ಗೆ ಬಂದಿದ್ರು."

—ಯಾರೋ ತನಗೆ ಪರಿಚಯವೇ ಇಲ್ಲದ ದೂರದ ವ್ಯಕ್ತಿ ಎಂಬಂತೆ.

"ಯಾರು ಸೋಮಶೇಖರ ತಾನೆ?—ಸುಂದ್ರಮ್ನವರ ತಮ್ಮ?"

"ಹೌದೂಂತ ಕಾಣುತ್ತೆ—ಅವರೇ!"

"ಏನಂದರು?"

"ವಾರ್ಡ್‌ಕೊನೇಲಿ ಕಿಟಕೀ ಹತ್ತಿರ ಲಲಿತಾಗೆ ಬೆಡ್ ಮಾಡಿಸಿ ಕೊಟ್ರು. ನಾಳೆ ಬೆಳಿಗ್ಗೆ ಬದಲಾಯಿಸ್ತಾರೆ."

"ಒಳ್ಳೆಯವರು ಪಾಪ!"

....ತುಂಗಮ್ಮ ರಾತ್ರೆಯ ಊಟ ಮುಗಿಸಿ ನಿದ್ದೆ ಹೋಗಲೆತ್ನಿಸಿದಳು. ಸ್ವಲ್ಪ ಹೊತ್ತು ನಿದ್ದೆ ಬರದೆ ಕಾಡಿಸಿತು.

ದೊಡ್ಡಮ್ಮ ಹಾಗೆ ಆತನನ್ನು ಹೊಗಳಬಾರದಿತ್ತು....

ಈಗ—ಕಣ್ಣ ಮುಂದೆಯೇ ಇದ್ದಂತಿದ್ದ ಆ ನಗು....

ಒಮ್ಮೆಲೆ ತುಂಗಮ್ಮನಿಗೆ ಭಯವಾಯಿತು. ಎಂಥೆಂಥ ಯೋಚನೆ ಗಳನ್ನು ಮಾಡುತಿದ್ದಳು ಆಕೆ.!

ತುಂಗಮ್ಮನೆಂದುಕೊಂಡಳು: 'ಏನೇ ಆಗಲಿ, ನಾಳೆ ನಾನು ಆಸ್ಪತ್ರೆಗೆ ಹೋಗಬಾರದು.'

................

ಬೆಳಿಗ್ಗೆ ಎದ್ದ ಸರಸಮ್ಮ ಹಾಸಿಗೆಯ ಮೇಲೆಯೇ ಸ್ವಲ್ಪ ಹೊತ್ತು ಕುಳಿತುಕೊಂಡರು. ರಾತ್ರೆ ಬಹಳ ಹೊತ್ತು ಯೋಚಿಸಿದ್ದರು ನಿಜ. ಆದರೆ ಸಮಸ್ಯೆ ಬಗೆ ಹರಿದಿರಲಿಲ್ಲ.

ಬೆಳಗಾದಮೇಲೂ ಅದೇ ಯೋಚನೆ.

ಸುಂದರಮ್ಮ, ಆಡಳಿತ ಸಮಿತಿಯ ಪ್ರಮುಖ ಸದಸ್ಯೆಯಾಗಿದ್ದರು. ಬಾಲ ಆಶ್ರಮದ ಯೋಜನೆಗೆ ಅವರ ಬೆಂಬಲವಿತ್ತು. ಅವರದು ಸಾಧಾರಣ

ಮಧ್ಯಮವರ್ಗ. ಹೇಳಿಕೊಳ್ಳುವ ಆಸ್ತಿಪಾಸ್ತಿ ಇರಲಿಲ್ಲ. ಆದರೆ ದಕ್ಷ ಇಂಜನಿಯರಾದ ಅವರ ಗಂಡ ವೆಚ್ಚಕ್ಕೆ ಬೇಕಾದಷ್ಟು ಸಂಪಾದಿಸುತಿದ್ದರು. ವಿಧವೆಯಾದ ಅವರ ತಾಯಿ ಮಗಳ ಮನೆಯಲ್ಲೇ ಉಳಿದಿದ್ದರು. ಒಬ್ಬನೇ ಗಂಡು ಮಗನಾದ ಸೋಮಶೇಖರ ತಂದೆಯ ಅಳಿದುಳಿದ ಆಸ್ತಿಯನ್ನೂ ತನ್ನ ವಿದ್ಯಾಭ್ಯಾಸಕ್ಕಾಗಿ ಕರಗಿಸಿದ. ಆತ ಪೂನಾದಿಂದ ಹಿಂತಿರುಗಿ ಪ್ರಾಕ್ಟೀಸು ಆರಂಭಿಸಿದುದೂಅದೇ ವರ್ಷ....

—ಇದೀಗ ಕಾರ್ಯದರ್ಶಿನಿಯ ಮನೆಯಲ್ಲಿ ಯಾವುದೋ ಸಂದರ್ಭ ದಲ್ಲಿ ಅನಿರೀಕ್ಷಿತವಾಗಿ ಸರಸಮ್ಮನಿಗೆ ತಿಳಿದು ಬಂದಿದ್ದ ವಿಷಯ.

ಆತನೆಲ್ಲಾದರೂ ತುಂಗಮ್ಮನನ್ನು ಪ್ರೀತಿಸುತ್ತಿರಬಹುದೆ? ಆಧುನಿಕ ಬೆಡಗಿನ ವಿದ್ಯಾವತಿಯರು, ದುಡ್ಡಿದ್ದವರು, ಸ್ವಜಾತಿ—ಸ್ವಗೋತ್ರದವರು ಎಷ್ಟೋಜನ ಸಿಗುವಾಗ ಆತ ತುಂಗಮ್ಮನನ್ನು ಮೆಚ್ಚಿಕೊಳ್ಳುವುದೆಂದರೇನು?

ಅಥವಾ ಅವನೆಲ್ಲಾದರೂ ದುರುದ್ದೇಶದಿಂದ ಹುಡುಗಾಟವಾಡುತ್ತಿರ ಬಹುದೆ? ಆತನ ಗುಣವೆಂಥದೋ!

'ಇಲ್ಲಿಗೆ ಬರಬೇಡ' ವೆಂದು ನೇರವಾಗಿ ಸೋಮಶೇಖರನಿಗೆ ಹೇಳುವ ಹಾಗಿಲ್ಲ. ಮೊದಲು ಸುಂದರಮ್ಮನಿಗೆ ದೂರು ಕೊಡಬೇಕು. 'ಯಾಕೆ?' ಎಂದು ಅವರು ಕೇಳಿದರೆ? ಆಗ ತಮಗೆ ಮುಖ ಭಂಗವಾಗುವುದು....ಹಾಗೆ ಮಾಡುವುದೂ ಸರಿಯೆನಿಸದು.

ಇದೊಳ್ಳೆಯ ಉಭಯ ಸಂಕಟ!

ಹಾಗಲ್ಲದೆ, ಸೋಮಶೇಖರ ನಿಜವಾಗಿಯೂ ತುಂಗಮ್ಮನನ್ನು ಪ್ರೀತಿ ಸುವುದೇ ಹೌದಾದರೆ? ಅದು ಇನ್ನೊಂದು ಸಮಸ್ಯೆ—ಅದನ್ನು ಕುರಿತು ಚಿಂತಿಸಲು ಸರಸಮ್ಮ ಇಷ್ಟಪಡಲಿಲ್ಲ. ತುಂಗಮ್ಮನೆಲ್ಲಾದರೂ ಮದುವೆಯಾಗಿ ತಮ್ಮನ್ನು, ಅಭಯಧಾಮವನ್ನು, ಬಿಟ್ಟು ಹೋಗಬಹುದೆಂಬುದು ಅವರು ಯೋಚಿಸಲು ಇಚ್ಛಿಸದ ವಿಷಯ.

ಅವರೆದ್ದರು. ಆದರೆ ಮುಖ ಗಂಟಿಕ್ಕಿಕೊಂಡಿತು.

ಆ ಬಳಿಕ, ಕಸ ಸರಿಯಾಗಿ ಗುಡಿಸಲಿಲ್ಲವೆಂದು, ಆದಿನ ಕಸಗುಡಿಸುವ ಬ್ಯಾಚಿನವರನ್ನು ಬಯ್ದರು.

ತುಂಗಮ್ಮನಿಗೂ ಜಲಜೆಗೂ ಇತರ ಹುಡುಗಿಯರು ಹಲವರಿಗೂ

ಸರಸಮ್ಮನ ವರ್ತನೆಯಿಂದ ವ್ಯಥೆಯಾಯಿತು. ತಾನೇನು ತಪ್ಪು ಮಾಡಿದೆನೋ ಎಂದು ಪ್ರತಿಯೊಬ್ಬರೂ ಚಿಂತಿಸಿದರು.

ಜಲಜ ಕೇಳಿದಳು:

"ಯಾಕೆ ತುಂಗಕ್ಕ ದೊಡ್ಡಮ್ಮ ಹೀಗಿದಾರೆ?"

ತುಂಗಮ್ಮನಿಗೆ ಉತ್ತರ ಗೊತ್ತಿತ್ತು. ಸೋಮಶೇಖರ ಬಂದು ಹೋದುದೇ ಅದಕ್ಕೆ ಕಾರಣವಿರಬೇಕು; ತಪ್ಪು ತನ್ನದೇ; ಎಂದು ಆಕೆ ತಿಳಿದಿದ್ದಳು. ಆದರೆ ಹಾಗೆಂದು ಬಹಿರಂಗವಾಗಿ ಒಪ್ಪಿಕೊಳ್ಳುವ ಹಾಗಿರಲಿಲ್ಲ.

"ಏನೋ ಗೊತ್ತಿಲ್ಲವ್ಮ."

ಜಲಜ ಬೆಳಿಗ್ಗೆ, ಆಸ್ಪತ್ರೆಗೆ ಹೋಗಿ ಬಂದಳು

"ಜ್ವರ ಇಳಿದಿದೆ ದೊಡ್ಡಮ್ಮ; ಕಿಟಕಿಯ ಹತ್ತಿರ ಮಲಗಿಸಿದ್ದಾರೆ."

—ಎಂದು ವರದಿಮಾಡಿದಳು.

ಮತ್ತೆ, ಕಿಟಕಿಯ ಹತ್ತಿರ ಮಲಗಿಸಲು ಕಾರಣರಾದವರ ನೆನಪು.

ಸಂಜೆ, ತಾವೂ ತುಂಗಮ್ಮನ ಜತೆಯಲ್ಲಿ ಹೊರಡ ಬೇಕೆಂದುಕೊಂಡರು ಸರಸಮ್ಮ. ಆ ಸೋಮಶೇಖರ ಬರಬಹುದು. ತಮಗೆ ತಿಳಿದೂ ತಿಳಿದೂ ತಮ್ಮ ಕಣ್ಣೆದುರಲ್ಲೇ ಅಚಾತುರ್ಯವಾಗಬಾರದು.

ಆದರೆ ತುಂಗಮ್ಮ ಅಂದಳು:

"ಇವತ್ತು ಸಾಯಂಕಾಲ ನಾನು ಆಸ್ಪತ್ರೆಗೆ ಬರೋಲ್ಲ ದೊಡ್ಡಮ್ಮ; ಯಾಕೋ ಬೇಜಾರು."

ಹಾಗನ್ನ ಬಾರದಿತ್ತು ಎಂದಿತು ಮನಸ್ಸು. ಎಲ್ಲಿಯಾದರೂ 'ಬೇಡ ಹಾಗಾದರೆ' ಎಂದು ದೊಡ್ಡಮ್ಮನೆಂದರೆ—ಎಂದು ಮಿಡುಕಿತು.

"ಯಾಕೆ? ನಾನೂ ಬರ್ತೀನಿ. ನಡೀ ಹೋಗೋಣ."

ಅದೊಳ್ಳೆಯ ಪರಿಹಾರ. ತಾನು ಹೋಗುವುದು ತಪ್ಪಲಿಲ್ಲ, ಜತೆಗೆ ದೊಡಮ್ಮನ ರಕ್ಷಣೆ ಬೇರೆ.

................

ವಿಚಿತ್ರ ಮನೋವೃತ್ತಿಯ ಯುವಕನಾಗಿದ್ದ ಸೋಮಶೇಖರ. ಎಷ್ಟೋ ಹುಡುಗಿಯರನ್ನು ಕಣ್ಣಲ್ಲಿ ಕಂಡವನು. ಪೂನಾದಲ್ಲಿ ಓದುತಿದ್ದಾಗ ಪ್ರಣಯದ

ಚೆಲ್ಲಾಟವನ್ನೂ ಒಂದಿಷ್ಟು ಅನುಭವಿಸಿದವನು. ಆದರೆ ಆತ ಕೆಟ್ಟವನಾಗಿರಲಿಲ್ಲ; ಮೋಸಗಾರನಾಗಿರಲಿಲ್ಲ.

ಅಭಯಧಾಮದ ವಾರ್ಷಿಕೋತ್ಸವದ ವಾತಾವರಣ ಆತನಿಗೆ ನೂತನ ಅನುಭವವನ್ನು ಕೊಟ್ಟಿತ್ತು. ತುಂಗಮ್ಮನನ್ನು ಮೊದಲು ಕಂಡಾಗ ಅವನ ಹೃದಯವನ್ನು ಯಾರೋ ಹಿಡಿದು ಕುಲುಕಿದ ಹಾಗಾಯಿತು. ಅಕ್ಕನನ್ನು ಪೀಡಿಸಿ ಆ ಹುಡುಗಿಯ ವಿಷಯ ಆತ ಕೇಳಿ ತಿಳಿದ—ಎಲ್ಲವನ್ನೂ.

ಎಲ್ಲವನ್ನೂ ಕೇಳಿದಮೇಲೂ ಮನಸ್ಸು ತುಂಗಮ್ಮನನ್ನು ಬಿಟ್ಟಿರಲು ಒಪ್ಪಲಿಲ್ಲ.

ಯಾಕೆ ಈ ವಾತ್ಸಲ್ಯ? ಇದಕ್ಕೇನು ಕಾರಣ? ಕನಿಕರವೆ? ಪ್ರೀತಿಯೆ?—ಅದೇನೊ ನಿರ್ಧಾರವಾಗಿ ಅವನಿಗೆ ತಿಳಿಯಲಿಲ್ಲ. ಆದರೆ ಇಷ್ಟು ಮಾತ್ರ ನಿಜ. ತುಂಗಮ್ಮನ ನೆನಪಾದಾಗಲೆಲ್ಲ ಆಕೆಯನ್ನು ತನಗಿಂತ ಕೀಳಾಗಿ ಕಾಣುವುದು ಆತನಿಂದ ಸಾಧ್ಯವಾಗಲಿಲ್ಲ.

...............

ಆ ಸಂಜೆಯೂ ಸೋಮಶೇಖರ ಬಂದಿದ್ದ. ಉಣ್ಣೆಯ ಉಡುಪಿರಲಿಲ್ಲ. ತುಂಗಮ್ಮನ ಜತೆಯಲ್ಲಿ 'ಪ್ರತ್ಯೇಕ'ವಾಗಿ ತೋರಬಾರದೆಂದು ಹತ್ತಿಬಟ್ಟೆಯ ಪ್ಯಾಂಟು ಷರಟು ಧರಿಸಿದ್ದ.

ಆತನ ವಂದನೆಯನ್ನು ಸ್ವೀಕರಿಸುತ್ತ ಸರಸಮ್ಮ ಬಲು ಸೂಕ್ಷ್ಮವಾಗಿ ಆ ಮುಖವನ್ನು ದಿಟ್ಟಿಸಿದರು. ಅದು ನಿಷ್ಕಳಂಕವಾಗಿಯೇ ತೋರಿತು.

ಆತನೊಡನೆ ಇಲ್ಲವೆ ಸುಂದರಮ್ಮನೊಡನೆ ಮಾತನಾಡಬೇಕೆಂಬ ಯೋಚನೆಯನ್ನೇ ಸರಸಮ್ಮ ಬಿಟ್ಟು ಕೊಟ್ಟರು.

...............

ಲಲಿತಾ ಗುಣಮುಖಳಾದಳು ಮೆಲ್ಲನೆ. ತುಂಗಮ್ಮ ತಪ್ಪದೆ ಪ್ರತಿ ಸಂಜೆಯೂ ಬರುತಿದ್ದಳು.

ಸೋಮಶೇಖರ ಬರದೇ ಇದ್ದರೆ ಅವಳಿಗೆ ಸಂಕಟವಾಗುತಿತ್ತು.

ಲಲಿತಾ ನಕ್ಕು ಕೇಳುತಿದ್ದಳು:

"ಬರಲಿಲ್ವಾ?"

"ಯಾರು?"

" ನಿನ್ನ ಅವರು.

" ಥೂ! ಹಾಗನ್ಬಾರದು ಲಲಿತಾ."

" ತಪ್ಪಾಯ್ತು."

ತುಂಗಮ್ಮ, 'ಹಾಗನ್ಬಾರದು' ಎಂದು ಹೇಳಲು ಕಾರಣ, ಹಾಗೆ ಆಗಲಾರದು ಎಂಬ ಭಯ.

ತಡವಾದ ದಿನ ಸೋಮಶೇಖರ ಕ್ಷಮಾಯಾಚನೆಯ ನಗೆಯೊಡನೆ ಬರುತಿದ್ದ. ಸೇಬು, ಕಿತ್ತಳೆ, ಇತ್ಯಾದಿಗಳನ್ನು ಆವನು ತರುತಿದ್ದ.

'ನನ್ನ ತುಂಗಕ್ಕನಿಂದಾಗಿ ಇಷ್ಟೆಲ್ಲಾ—'

ಎಂದುಕೊಂಡಳು ಲಲಿತಾ.

## ೨೦

ಬೆಳಿಗ್ಗೆ ಐದು ಘಂಟೆಗೇ ಎಚ್ಚರವಾಯಿತು ತುಂಗಮ್ಮನಿಗೆ. ಆದರೆ ಏಳುವ ಮನಸ್ಸಾಗಲಿಲ್ಲ. ಬಲವಾಗಿ ತನ್ನನ್ನು ಆವರಿಸಿದ್ದ ಹಳೆಯ ಹೊಸ ಯೋಚನೆಗಳ ಮುಸಕನ್ನು ತೆರೆಯಲು ಆಕೆ ಸಮರ್ಥಳಾಗಲಿಲ್ಲ.

"ಕಳೆದ ಸಂಜೆ ಎಷ್ಟೋದಿನಗಳಿಂದ ನಿರೀಕ್ಷಿಸಿದ್ದ ಆ ಘಳಿಗೆ ಬಂದು ಬಿಟ್ಟಿತು.

................

ಸೋಮಶೇಖರ ಸಂಜೆ ಹೊತ್ತು ದಿನವೂ ಆಸ್ಪತ್ರೆಗೆ ಬರುತಲಿದ್ದಾಗ ಆತನ ಸಾಮಿಪ್ಯದಲ್ಲಿ ತುಂಗಮ್ಮ ಬಲು ಎಚ್ಚರದಿಂದ ವರ್ತಿಸುತಿದ್ದಳು. ಅವನು ಇಲ್ಲದೆ ಇದ್ದಾಗ ಹೊಯ್ದಾಡುತಿದ್ದ ಮನಸ್ಸು ಆತ ಬಂದೊಡನೆ ಸ್ಥಿಮಿತಕ್ಕೆ ಬರುತಿತ್ತು. ಅವನೆದುರು ಯಾವ ರೀತಿಯ ಮನೋವಿಕಾರ ಗಳನ್ನೂ ಆಕೆ ತೋರಿಸುತ್ತಿರಲಿಲ್ಲ. ಸೋಮಶೇಖರನೂ ಅಷ್ಟೆ. ಬಾಹ್ಯ ಗಾಂಭೀರ್ಯದ ಪ್ರದರ್ಶನದಲ್ಲಿ ತುಂಗಮ್ಮನಿಗಿಂತಲೂ ಆತ ಒಂದು ಗುಲ ಗಂಜಿಯಷ್ಟು ತೂಕ ಹೆಚ್ಚೇ ಎನ್ನ ಬೇಕು.

ಒಂದು ವಾರದ ಹಿಂದೆಯೇ ಬಡವರ ಹುಡುಗಿ ಲಲಿತಾ ಆಸ್ಪತ್ರೆಯಿಂದ ಹೋಗಬೇಕಾಗಿತ್ತು. ಆದರೆ ಸೋಮಶೇಖರ ಡಾಕ್ಟರಿಗೆ ಹೇಳಿ ಮತ್ತೂ ಒಂದು ವಾರ ಆಕೆ ಅಲ್ಲಿರುವಂತೆ ಮಾಡಿದ. ಪಾಪ! ಆ ಅಭಯಧಾಮದಲ್ಲಿ ಒಳ್ಳೆಯ ಆರೈಕೆ ಹೇಗೆ ಸಾಧ್ಯವಾಗಬೇಕು? ರೋಗಿ ಒಂದು ವಾರ ಇನ್ನೂ ಆಸ್ಪತ್ರೆಯಲ್ಲೇ ಇರಲೆಂದು ಸೋಮಶೇಖರ ಕೇಳಿದಾಗ ದೊಡ್ಡಡಾಕ್ಟರು ಹಾಗೆಯೇ ಆಗಲೆಂದರು. ಆದರೆ ಹೌಸ್ ಸರ್ಜನ್ ನಾಗರಾಜ ನಕ್ಕು ಕೀಟಲೆ ಮಾಡದಿರಲಿಲ್ಲ.

"ಇದೇನು ರೊಮಾನ್ಸ್ ಸೋಮೂ? ಇದೆಲ್ಲಿ ಅಂಟ್ಕೊಂಡ್ತೊ ನಿಂಗೆ?"

ಸೋಮಶೇಖರ ಮಾತ್ರ ನಾಗರಾಜನಿಗೂ ತನ್ನ ಮನೋಗತವನ್ನು ಹೇಳಿರಲಿಲ್ಲ.

ಇನ್ನೂ ಒಂದು ವಾರ ಇರುವುದೇದಾಗ ಲಲಿತೆಯೂ ನಕ್ಕಳು.

“ ತುಂಗಕ್ಕ, ಇವರೆಲ್ಲಾ ಏನು ತಿಳ್ಕೊಂಡಿವಾರೆ ಗೊತ್ತೊ ?”

“ ಏನು ?”

“ ಸೋಮಶೇಖರ್ ನನ್ನ ಪ್ರೀತಿಸ್ತಾರೆ ಅಂತ.”

ಆ ಉತ್ತರ ಕೇಳಿ ತುಂಗಮ್ಮನಿಗೆ ಹೇಗೆ ಹೇಗೋ ಆಯಿತು. ಮುಖದ ಚರ್ಯೆಗಳನ್ನು ಮುಚ್ಚಿಕೊಳ್ಳಲೆಂದು ನಗುತ್ತ ಆಕೆ ಅಂದಳು :

“ ಯಾರಂದರು ಹಾಗೆ ?”

“ ಆ ಕ್ರಿಶ್ಚಿಯನ್ ನರ್ಸ್ ಇದಾಳಲ್ಲಾ ಹೊಸಬಳು-ಬೆಳ್ಳಗೆ-ಕುಳ್ಳಿ ?”

“ ಅವಳು ಹಾಗಂದ್ಲೆ ?”

“ ಹೂಂ. ಡಾಕ್ಟರ್ ನಾಗರಾಜರೋ ಯಾರೋ ಹಾಗೆ ಮಾತ ನಾಡ್ತಿದ್ರಂತೆ.”

“ ನೀನು ಏನಂದೆ ಅದಕ್ಕೆ ?”

ತಡೆಯಲಾರದೆ ತುಂಗಮ್ಮ ಆ ಪ್ರಶ್ನೆ ಕೇಳಿದ್ದಳು. ಮರುನಿಮಿಷವೇ ಉತ್ತರ ಬಂದರೂ ನಡುವೆ ಒಂದು ಯುಗವೇ ಕಳೆದಹಾಗೆ ಆಕೆಗೆ ತೋರಿತು.

“ ನಾನಂದೆ : ಆ ಭಾಗ್ಯ ನನ್ನದಲ್ಲ—ಅಂತ.”

ತುಂಗಮ್ಮ ಮಾತನಾಡಲಿಲ್ಲ.

ಸ್ವರವಿಳಿಸಿ ಲಲಿತಾ ಪಿಸುಮಾತಿನಲ್ಲಿ ಅಂದಳು :

“ ಅವರೇನಾದರೂ ಹೇಳಿದರೆ ಅಕ್ಕ ?”

ತುಟಿಬಿಚ್ಚದೆಯೆ ತುಂಗಮ್ಮ ಇಲ್ಲವೆಂದು ತಲೆಯಾಡಿಸಿದಳು.

....ಅಂತೂ ಲಲಿತಾ ಹೊರಡುವ ದಿನ ಗೊತ್ತಾಯಿತು. ಅದಕ್ಕೆ ಹಿಂದಿನ ದಿನ ಸಂಜೆ ಆಸ್ಪತ್ರೆಗೆ ಬಂದ ಸೋಮಶೇಖರ, ಇತರ ದಿನಗಳಿಗಿಂತ ಭಿನ್ನವಾಗಿ ಮೌನವಾಗಿದ್ದ.

ಆತ ಮಂಚದ ಬಳಿ ಇದ್ದಾಗ ಲಲಿತಾ ಹೇಳಿದಳು :

“ ನಿಮ್ಮಿಂದ ತುಂಬ ಉಪಕಾರವಾಯ್ತು ಸಾರ್. ನಾಳೆ ಹೊರಟ್ಹೋಗ್ತೀನಿ. ಇನ್ನು ನಿಮ್ಮನ್ನು ಕಾಣ್ತೇನೋ ಇಲ್ವೊ ?”

ಘಾಟಿ ಹುಡುಗಿ. ನಿರಾಶೆಯಧ್ವನಿ ಬರಿಯನಟನೆ. ಕಣ್ಣುಗಳಲ್ಲಿ ತುಂಟತನ ಮಿಂಚುತಿತ್ತು.

ಆದರೆ ಸೋಮಶೇಖರ ವಿಮನಸ್ಕನಾಗಿದ್ದ. ಅವನಿಗೇನೂ ಅರ್ಥವಾಗಲಿಲ್ಲ.

"ಯಾಕೆ? ಅಭಯಧಾಮಕ್ಕೆ ಬಂದಾಗ ನಿಮ್ಮನ್ನ ಕಾಣ್ತೀನಲ್ಲ."

"ಓ! ಅಭಯಧಾಮಕ್ಕೆ ಬರ್ತ್ತಾನೇ ಇರ್ತ್ತೀರೇನು?"

ಆ ಪ್ರಶ್ನೆಯ ಜತೆಯಲ್ಲೆ ಅಣಕಿಸುವ ನಗುವಿತ್ತು. ಈಗ ಸೋಮಶೇಖರ ಎಚ್ಚರಗೊಂಡ. ಅವನ ಮುಖ ಕೆಂಪೇರಿತು.

ಆ ಸಂಭಾಷಣೆ ತುಂಗಮ್ಮನಿಗೆ ಬಲು ಪ್ರಿಯವಾಗಿ ಕಂಡಿತು.

ಆ ಸಂಜೆ ಆತ ಸೈಕಲು ತಂದಿರಲಿಲ್ಲ. ಆಸ್ಪತ್ರೆಯ ಹೆಬ್ಬಾಗಿಲು ದಾಟುತ್ತ ಅವನೆಂದ:

"ನಡಕೊಂಡು ಹೋಗೋಣವೆ?"

ಆಕೆ ಬೇಡವೆನ್ನಲಿಲ್ಲ. ಇಬ್ಬರೂ ಬೀದಿಯುದ್ದಕ್ಕೂ ನಡೆದರು. ತುಂಗಮ್ಮನ ಎದೆ ಡವಡವನೆ ಹೊಡೆದುಕೊಂಡಿತು. ಗುರುತಿನವರು ಈಗ ಯಾರಾದರೂ ತಮ್ಮನ್ನು ಕಂಡರೆ? ಮಾವಳ್ಳಿ ಮನೆಯವರು? ಅಥವಾ ತುಮಕೂರಿನವರು ಯಾರಾದರೂ?

ದೀಪಗಳು ಹತ್ತಿಕೊಂಡು, ಇನ್ನು ಕತ್ತಲು—ಎಂದು ಸೂಚಿಸಿದುವು.

ಸೋಮಶೇಖರ, ನಡೆಯುತ್ತಲಿದ್ದ ತುಂಗಮ್ಮನ ಪಾದಗಳನ್ನೆ ದಿಟ್ಟಿಸಿ ಹೇಳಿದ:

"ನೀವು ಚಪ್ಪಲಿ ಯಾಕ್ರಿ ಹಾಕ್ಕೊಳ್ಳೊಲ್ಲ?"

ಅಭಯಧಾಮದಲ್ಲಿ ದೊಡ್ಡಮ್ಮನ್ನ ಬಿಟ್ಬಿಟ್ಟು ಬೇರೆ ಯಾರೂ ಹಾಕ್ಕೊಳ್ಳೊಲ್ಲ."

"ಸಹಾಯಿಕೇನೂ ಹಾಕ್ಕೋಬಾರದೂಂತ ನಿಯಮ ಇದೆಯೇನು?"

"ಛೆ! ಛೆ! ನಾವು ಏನುಬೇಕಾದರೂ ಕೊಂಡ್ಕೋಬಹುದೂಂತ ದೊಡ್ಡಮ್ಮ ಹೇಳಿದಾರೆ. ನಾನೇ ಬೇಡ ಅಂತ ಸುಮ್ಮನಿದೀನಿ."

ಸೋಮಶೇಖರನಿಗೆ ಅರ್ಥವಾಯಿತು. ಅದು ಜಿಪುಣತನವಾಗಿರಲಿಲ್ಲ.

"ಕೆಲಸದ ಮೋಚಿಗಳನ್ನ ಕರಕೊಂಡ್ಬಂದು ಅಭಯಧಾಮದ ಎಲ್ಲರಿಗೂ ಹೊಲಿಸಿಬಿಡೋಣ, ಏನಂತೀರ?"

"ಓಹೋ! ನಿಮ್ಮಂಥ ದಾನಶೀಲರು ಹಾಗೆ ಅಂದಾಗ ಬೇಡ ಅಂತೇನೆಯೆ?''

ಅವರೆಲ್ಲೋ ಸುತ್ತು ಬಳಸಿಕೊಂಡು ಹೋದರು. ನಿರ್ಜನವಾದ ರಸ್ತೆಗೇ ಬಂದಿದ್ದ ಸೋಮಶೇಖರ, ಮಾತನಾಡಲು ಅನುಕೂಲವಾಗಲೆಂದು. ಆದರೆ ಅಲ್ಲಿಯೇ ಮಾತು ಹೃದಯದ ಬಿಲದೊಳಕ್ಕೆ ಸೇರಿಕೊಂಡಿತು.

ಆ ಮೌನ ಅಸಹನೀಯವಾಗಿತ್ತು ಇಬ್ಬರಿಗೂ.

'ಥೂ! ನಾನು ಇಂಥ ಗುಗ್ಗು ಎಂದು ತಿಳಿದುಕೊಂಡಿಲಿಲ್ಲ'—ಎಂದು ಸೋಮಶೇಖರ ತನ್ನನ್ನು ತಾನೇ ನಿಂದಿಸಿದ.

ಆ ನಿಂದೆಗೆ ಬೆದರಿಯೋ ಏನೋ, ಒಮ್ಮೆಲೆ, ಏನು ಮಾತನಾಡುತ್ತಿದ್ದನೆಂದು ಊಹಿಸುವುದಕ್ಕೆ ಮುಂಚೆಯೇ, ಸ್ವರ ಹೊರಟಿತು.

"ತುಂಗಾ, ಬಹಳ ದಿವಸದಿಂದ ನಿನಗೊಂದು ವಿಷಯ ಹೇಳ್ಬೇಕೊಂತಿದ್ದೆ.

ತುಂಗಮ್ಮ ತಲೆ ಎತ್ತಲಿಲ್ಲ. ಎದೆ ಗುಂಡಿಗೆಯ ಬಡಿತ ತೀವ್ರವಾಯಿತು. ಸಲಿಗೆಯ ಸಂಬೋಧನೆ....ಕೊಳಲಿನ ಧ್ವನಿಯನ್ನೂ ಮೀರಿಸುವ ಸುಸ್ವರ.

"ಒಂಟಿ ಬದುಕೇವಾಸೀಂತ ಇಷ್ಟುದಿನ ಭಾವಿಸಿದ್ದವನು ನಾನು. ಆದರೆ ನಿಮ್ಮ ಅಭಯಧಾಮದ ವಾರ್ಷಿಕೋತ್ಸವದ ದಿವಸದಿಂದ ನನ್ನ ಭಾವನೆ ಬದಲಾಗಿದೆ. ಅಲ್ಲಿ ಒಬ್ಬಳನ್ನ ನೋಡಿದ್ಮೇಲೆ, ಮದುವೆ ಮಾಡ್ಕೋಬೇಕು ಅನ್ನೋ ತೀರ್ಮಾನಕ್ಕೆ ಬಂದೆ. ಆಕೆ ಯಾರು ಗೊತ್ತೆ ತುಂಗ?"

ಎಷ್ಟೋ ಕಾಲವಾದಮೇಲೆ ತುಂಗಮ್ಮನ ಕಣ್ಣುಗಳು ತೇವಗೊಂಡು ಹೊರಕ್ಕೆ ಕಂಬನಿ ಪುಟಪುಟಿಯಿತು.

"ಹೇಳು! ಗೊತ್ತೆ ನಿಂಗೆ?"

ಆಕೆಗರಿಯದ ಯಾವುದೋ ವೇದನೆಯಿಂದ ಏನನ್ನೋ ಹೇಳಬೇಕೆಂದು ತುಟಿಗಳು ಚಲಿಸಿದುವು. ಆದರೆ ಸ್ವರ ಹೊರಡಲಿಲ್ಲ.

"ತುಂಗ! ಇಲ್ನೋಡು!"

ತುಂಗಮ್ಮ ಮುಖವೆತ್ತಿ ಅರೆಕ್ಷಣ ಸೋಮಶೇಖರನನ್ನು ನೋಡಿದಳು.

ಎರಡು ಕಪೋಲಗಳ ಮೇಲಿಂದಲೂ ಕಣ್ಣೀರಧಾರೆ ಹರಿದಿತ್ತು. ಸೋಮ ಶೇಖರನ ದೃಷ್ಟಿಗಳನ್ನು ಸಂಧಿಸಿದಮೇಲೆ ತುಂಗಮ್ಮನ ದೃಷ್ಟಿ ಮತ್ತೆ ಹಾದಿಯಮೇಲೆ ನೆಟ್ಟಿತು.

ಸೋಮಶೇಖರ ಅತಿ ಸಮೀಪದಲ್ಲಿ ನಡೆದ ಅವನ ಒಂದು ಕೈ ಆಕೆಯ ಅಂಗೈಯನ್ನು ಭದ್ರವಾಗಿ ಹಿಡಿದುಕೊಂಡು ಮೃದುವಾಗಿ ಅದುಮಿತು.

ಎದುರುಗಡೆಯಿಂದ ಬರುತಿದ್ದ ಬಿ. ಟಿ. ಸಿ. ಬಸ್ಸಿನ ಬೆಳಕು ತಮ್ಮ ಮೇಲೆ ಬಿದ್ದಾಗ ಮಾತ್ರ ಸೋಮಶೇಖರ ಆಕೆಯ ಕೈಯನ್ನು ಬಿಟ್ಟ. ಆಗ, ಯಾವುದೋ ಆಧಾರ ತಪ್ಪಿದಂತೆ ತುಂಗಮ್ಮನಿಗೆ ಅನಿಸಿತು.

ಆಗ ತುಂಗಮ್ಮ ಏನನ್ನೂ ಯೋಚಿಸುತ್ತಿರಲಿಲ್ಲ. ಆವರೆಗೂ ಚಿಟ್ ಚಿಟ್ಟೆಂದು ಸಿಡಿಯುತಿದ್ದ ಮೆದುಳು ಶಾಂತವಾಯಿತು. ಎದೆಗುಂಡಿಗೆ ಸದ್ದು ಕಡಿಮೆಮಾಡಿತು. ಶಾಂತವಾದೊಂದು ಮಧುರವಾದೊಂದು ಶೂನ್ಯ ಆಕೆ ಯನ್ನು ಸುತ್ತುವರಿಯಿತು.

ಆದರೆ ಹಾಗೆಯೇ ಸದಾಕಾಲವೂ ಇರುವುದು ಸಾಧ್ಯವಿರಲಿಲ್ಲ. ಮೆದುಳು ನಿದ್ದೆ ಹೋಗಿರಲಿಲ್ಲ. ಮತ್ತೆ ಯೋಚನೆಗಳು....

ಇದು ಸರಿಯೆ ? ಹೀಗಾಗುವುದು ನ್ಯಾಯವೆ ? ಸೋಮಶೇಖರನ ಕೈ ಹಿಡಿಯುವ ಅರ್ಹತೆ ತನಗುಂಟೆ ? ತನ್ನ ಗತ ಜೀವನದ ಅರಿವಿಲ್ಲವೆ ಆತನಿಗೆ? ಈಗ ಹೀಗೆ ಹೇಳಿ, ನಾಳೆ ಎಲ್ಲವೂ ತಿಳಿದಾಗ ತಾನು ಅವಮಾನಕ್ಕೆ ಗುರಿಯಾಗಬೇಕೆ ?

ನಡೆದು ನಡೆದು ಅವರು ಅಭಯಧಾಮದ ಸಮೀಪಕ್ಕೆ ಬಂದಿದ್ದರು.

ಸೋಮಶೇಖರ ಅಲ್ಲಿ ನಿಂತ. ತುಂಗಮ್ಮನೂ ನಿಂತಳು.

" ತುಂಗ, ನೀನು ಏನೂ ಹೇಳ್ಲೇ ಇಲ್ಲ."

ಮಾತನಾಡದೆ ಇರುವುದು ತಪ್ಪೆಂದು ತಿಳಿದು, ಧೈರ್ಯ ತಂದು ಕೊಂಡು, ತುಂಗಮ್ಮ ಅಂದಳು :

" ಏನು ಹೇಳ್ಲಿ ?"

" ನನ್ನನ್ನು ಮದುವೆಯಾಗೋದು ನಿನಗೆ ಇಷ್ಟವೆ ಹೇಳು ?"

ಆಕೆಯ ಮನಸಿನೊಳಗೇ ಇದ್ದ ವಿಚಾರಗಳು ಅಂತೂ ಹೊರಗೆ ಬಂದುವು :

"ನನ್ನ ವಿಷಯ ಪೂರ್ತಿಯಾಗಿ ನಿಮಗೆ ಗೊತ್ತೆ?"

"ಗೊತ್ತು. ಎಲ್ಲಾ ಗೊತ್ತು. ಅದನ್ನು ಮರೆತು ಬಿಡು."

ತುಂಗಮ್ಮನಿಗೆ ಮತ್ತೆ ಅಳು ಬಿಕ್ಕಿ ಬರುವಂತಾಯಿತು.

"ತುಂಗಾ! ಇದು ಅರ್ಥವಿಲ್ಲದ ಹಿಂಸೆ. ಯಾಕೆ ಮಾತಾಡ್ದೆ ನಿಂತಿದೀಯ ನೀನು?"

"ಏನು ಹೇಳಿ?"

"ದೊಡ್ಡಮ್ಮನ ಕೈಲಿ ಮಾತಾಡ್ಲಾ?"

"ಹೂಂ...."

"ನಿಮ್ಮ ತಂದೆಗೆ ಕಾಗದ ಬರೆದು ಕರಿಸ್ತೀಯಾ?

"ಹೂಂ...."

ಸೋಮಶೇಖರ ಮತ್ತೊಮ್ಮೆ ತುಂಗಮ್ಮನ ಅಂಗೈಯನ್ನು ಅದುಮಿದ.

ಆತ ಅಭಯಧಾಮದ ಬಾಗಿಲವರೆಗೂ ಬರಲಿಲ್ಲ.

ಕದತೆರೆದು ತುಂಗಮ್ಮನನ್ನು ಒಳಕ್ಕೆ ಬಿಟ್ಟ ಸರಸಮ್ಮ ಕೇಳಿದರು:

"ಬಸ್ಸು ಸಿಗಲಿಲ್ವೇನೆ?"

"ಇಲ್ಲ ದೊಡ್ಡಮ್ಮ."

ಪ್ರೀತಿ - ಪ್ರೇಮಗಳ ಸಂಬಂಧದಲ್ಲಿ ಇಂತಹ ಸುಳ್ಳುಗಳ ಸರಮಾಲೆ ಹೊರಡುವುದು ಎಷ್ಟು ಸ್ವಾಭಾವಿಕ - ಸುಲಭ!

"ನಡಕೊಂಡೇ ಬಂದಿಯಾ?"

"ಹೂಂ."

"ಒಬ್ಬಳೇ?"

ಆಗ ತುಂಗಮ್ಮ ಸುಳ್ಳಾಡಲಿಲ್ಲ. ಅವಳೆಂದಳು:

"ಸುಂದರಮ್ಮನ ತಮ್ಮ ಬಂದಿದ್ದರು ಇಷ್ಟು ದೂರ."

ಆತನ ಹೆಸರು ಹೇಳಿದರೆ ಮುಖವೆಲ್ಲಿ ಕೆಂಪಾಗುವುದೋ ಎಂದು ಅಂಜಿ ಹುಡುಗಿ. 'ಸುಂದರಮ್ಮನ ತಮ್ಮ' ಎಂದಳು.

ಸ್ವಲ್ಪ ತಡೆದು ಸರಸಮ್ಮ ಕೇಳಿದರು:

ನಾಳೆ ಎಷ್ಟು ಹೊತ್ತಿಗೆ ಲಲಿತಾನ ಡಿಸ್‌ಛಾರ್ಜ್ ಮಾಡ್ತಾರೆ?"

"ಬೆಳಿಗ್ಗೆ."

"ನಾನೇ ಹೋಗಿ ಕರಕೊಂಡು ಬರ್‍ತೀನಿ."

....ಅಷ್ಟು ಹಿಂದಿನ ದಿನ ಸಂಜೆ—ರಾತ್ರಿಯ ಘಟನೆಗಳು.

................

ಬೆಳಕು ಹರಿಯುತಿತ್ತು. ತುಂಗಮ್ಮ ಪೂರ್ತಿ ಕಣ್ಣು ಬಿಟ್ಟು ಸುತ್ತಲೂ ನೋಡಿದಳು. ಹುಡುಗಿಯರು ಒಬ್ಬೊಬ್ಬರಾಗಿ ಏಳುತಿದ್ದರು. ಸ್ವತಃ ದೊಡ್ಡಮ್ಮನೇ ತಮ್ಮ ಕೊಠಡಿಯಿಂದ ಹೊರಬಂದು ಗಂಟೆ ಬಾರಿಸಿದರು. ಅಲ್ಲಿ ಹಾಗೆ ನಿಂತು ಅವರು ತುಂಗಮ್ಮನನ್ನು ನೋಡಿ ಅಂದರು:

"ಎದ್ದಿಯಾ ತುಂಗ?"

ಏಳುತ್ತ ತುಂಗಮ್ಮ ಉತ್ತರವಿತ್ತಳು:

"ಹೂಂ. ದೊಡ್ಡಮ್ಮ."

ಪ್ರಾತರ್ವಿಧಿಗಳು ಮುಗಿದುವು. ಸರಸಮ್ಮ, ಜಲಜೆಯೊಡನೆ, ಲಲಿತೆಯನ್ನು ಕರೆತರಲು ಆಸ್ಪತ್ರೆಗೆ ಹೋದರು. ತರಗತಿಗಳು ಆರಂಭವಾದುವು.

ತುಂಗಮ್ಮ ಅದೇನು ಪಾಠ ಹೇಳಿದಳೊ ಆದಿನ! ಹುಳು ಕೊರೆದಂತೆ ಒಂದೇ ವಿಷಯ ಆಕೆಯನ್ನು ಬಾಧಿಸುತಿತ್ತು: ತಾನು ಒಪ್ಪಿಕೊಂಡಿದ್ದು ತಪ್ಪಾಯಿತು; ಇದು ಸಾಧ್ಯವಿಲ್ಲವೆಂದು ಸೋಮಶೇಖರನಿಗೆ ತಿಳಿಸಬೇಕು; ಇವರನ್ನೆಲ್ಲ ಬಿಟ್ಟು, ಈ ಅಭಯಧಾಮವನ್ನು ಬಿಟ್ಟು, ತಾನು ಹೋಗುವುದೆಂದರೇನು?....ಹಾಗೆ ಹೃದಯವನ್ನು ಕಲ್ಲಾಗಿ ಮಾರ್ಪಡಿಸಿದಾಗ ತುಂಗಮ್ಮನಿಗೆ ತುಸು ಸಮಾಧಾನವೆನಿಸಿತು.

ಸೊರಗಿದ ಸುಂದರಿಯಾಗಿ ಬಂದ ಲಲಿತೆಗೆ ಅಪೂರ್ವ ಸ್ವಾಗತ ದೊರೆಯಿತು.

"ವಕೀಲರು ಬರಲಿಲ್ವಾ"

—ಎಂದು ಲಲಿತಾ, ಜಲಜೆಯನ್ನು ನೋಡಿ ಕಣ್ಣು ಮಿಟಕಿಸುತ್ತಾ ತುಂಗಮ್ಮನೆದುರು ಅಂದಳು.

"ಯಾರು—ರಾಜಕುಮಾರರೆ?"

—ಎಂದಳು ಏನೂ ತಿಳಿಯದ ಜಲಜ, ತಮಾಷೆಗೆ.

ಆದರೆ ತುಂಗಮ್ಮ ನಗಲಿಲ್ಲ. ಆಕೆಯ ಗಂಭೀರ ಮುಖಮುದ್ರೆ ಲಲಿತ ಜಲಜೆಯರು ಸುಮ್ಮನಾಗುವಂತೆ ಮಾಡಿತು.

ಎಂದಿನಂತೆ ಇರದ ತುಂಗಮ್ಮನನ್ನು ಕಂಡ ಸರಸಮ್ಮ, 'ಏನೋ ಆಗಿರಬೇಕು' ಎಂದು ಕೊಂಡರು. ತುಂಗಮ್ಮ ತನ್ನಿಂದ ಏನನ್ನೂ ಬಚ್ಚಿಡಲಾರಳು ಎಂಬ ಸಂಶಯಅವರಿಗೆ. ಸೋಮಶೇಖರ ತುಂಗಮ್ಮನನ್ನು ಪ್ರೀತಿಸುವುದು ನಿಜವೇ ಎಂದಾದರೆ, ತಮಗೆ ಬಲು ಪ್ರಿಯಳಾಗಿದ್ದವಳು ಅಭಯಧಾಮವನ್ನು ಬಿಟ್ಟು ಹೋಗಬೇಕಾಗುವುದಲ್ಲಾ ಎಂಬ ದುಃಖ. ಅದರಬದಲು ಅಚಾತುರ್ಯವೇನಾದರೂ ನಡೆದರೆ ತಮ್ಮ ಸಾಧನೆ ಮಣ್ಣು ಪಾಲಾಗುವುದಲ್ಲಾ ಎಂಬ ಭೀತಿ.

ಅಂತೂ ಅವರ ಮನಸ್ಸಿನ ನೆಮ್ಮದಿ ಕದಡಿ ಹೋಯಿತು.

................

ಮುಂದಿನ ಒಂದು ವಾರದ ಅವಧಿಯಲ್ಲಿ ಅಭಯಧಾಮದವರ ಪಾಲಿಗೆ ದೊಡ್ಡ ಘಟನೆಯೆಂದರೆ, ಹೊಸ ಹುಡುಗಿಯೊಬ್ಬಳ ಆಗಮನ. ಕಸಬಿನವಳು. ವಯಸ್ಸು ಹಂದಿನೆಂಟೇ ಆಗಿದ್ದರೂ ಮೇಹರೋಗ ಆವಳಿಗೆ ಅಂಟಿಕೊಂಡಿತ್ತು. ಆಕೆಯ ಆರೈಕೆಗಾಗಿ ಹೆಚ್ಚು ಶ್ರಮ ವಹಿಸಬೇಕಾಯಿತು. ಯಾರೂ ಮುಟ್ಟದ ತಾನೇ ತೊಳೆಯುವ ತಟ್ಟೆಯೊಡನೆ ಬಟ್ಟೆಬರೆಗಳೊಡನೆ ಒಂದು ಮೂಲೆಯಲ್ಲಿ ಆಕೆ ಬೀಡು ಬಿಟ್ಟಳು.

................

ಎರಡುವಾರಗಳಾದರೂ ಸೋಮಶೇಖರ ಬರಲಿಲ್ಲ. ಸುಂದರಮ್ಮನ ಸುದ್ದಿಯೂ ಇರಲಿಲ್ಲ.

ಏನೂ ನಡೆದೇ ಇಲ್ಲವೇನೋ ಎಂಬಂತೆ ತುಂಗಮ್ಮ ಹಿಂದಿನಂತೆ ನಗುನಗುತ್ತ ಇರಲು ಯತ್ನಿಸಿದಳು. ಆದರೆ ದೀಪ ಆರಿದ ಬಳಿಕ ಕತ್ತಲಿನಲ್ಲಿ ಆಕೆಯೊಬ್ಬಳೇ ಉಳಿದಾಗ, ಅಂತರ್ಮುಖಿಯಾದಾಗ, ಯೋಚನೆಯ ಕುದುರೆಗಳಿಗೆ ಹುಚ್ಚುಹಿಡಿಯುತಿತ್ತು. ಹೃದಯದ ನೋವು ಅಂಗಾಂಗವನ್ನೆಲ್ಲ ವ್ಯಾಪಿಸುತಿತ್ತು.

ಆಡಳಿತ ಸಮಿತಿಯ ಸಭೆ ಮುಗಿದ ಒಂದು ಸಂಜೆ, ಕಾರ್ಯದರ್ಶಿನಿ ಕಮಲಮ್ಮ ಮತ್ತು ಸದಸ್ಯೆ ಸುಂದರಮ್ಮ ಇಬ್ಬರೇ ಉಳಿದರು. ಅಭಯಧಾಮಕ್ಕೆ ಹೊರಟಿದ್ದ ಸರಸಮ್ಮನವರನ್ನು ಅವರು ಕರೆದರು.

"ಇರಿ ಸರಸಮ್ಮ, ಸ್ವಲ್ಪ ಇದ್ಬಿಟ್ಟು ಹೋಗಿ."

ಸರಸಮ್ಮ, ಇನ್ನು ಸೋಮಶೇಖರನ ಪ್ರಸ್ತಾಪ ಬರುವುದೇನೋ ಎಂದು ಪತ್ತೆ ಆಸೀನರಾದರು. ಆದರೆ ಮುಂದಿನ ಮಾತು ಕೇಳಿದಾಗ ಅವರಿಗೇ ಆಶ್ಚರ್ಯವಾಯಿತು.

"ನೋಡಿ ಸರಸಮ್ಮ, ನಮ್ಮ ಅಭಯಧಾಮದಿಂದ ಯಾವ ಪ್ರಯೊಜನವೂ ಇಲ್ಲಾಂತ ಯಾರೋ ಅಪಪ್ರಚಾರ ಮಾಡ್ತಿದ್ದಾರೆ."

—ಎಂದು ಕಾರ್ಯದರ್ಶಿ ಕಮಲಮ್ಮ ಹೇಳಿದರು.

"ಎಲ್ಲಿ? ಯಾರು?"

ಉತ್ತರ ರೂಪವಾಗಿ ಸುಂದರಮ್ಮನೆಂದರು :

"ಯಾರಾದರೇನು? ಒಬ್ಬ ಎಕ್ಸ್ ಎಂದಿಟ್ಟು ಕೊಳ್ಳೋಣ. ಆತನ ವಾದದ ಪ್ರಕಾರ, - ಸಮಾಜದಲ್ಲಿ ಹೆಣ್ಣುಗಂಡಿಗೆ ಸಂಬಂಧಿಸಿದ ಅನೀತಿ ಅಧರ್ಮ ಎಷ್ಟೊಂದಿಲ್ಲ? ಅದನ್ನೆಲ್ಲಾ ಇಂಥ ಒಂದೆರಡು ಅಭಯಧಾಮ ಗಳಿಂದ ಪರಿಹಾರ ಮಾಡೋಕೆ ಆಗುತ್ತೇನು? ನಮಗಂತೂ ಆತನ ಜತೇಲಿ ವಾದಿಸಿ ಸಾಕಾಯ್ತು. ನೀವೇನು ಉತ್ತರ ಕೊಡ್ತೀರೋ ಹೇಳಿ."

"ಪರಿಹಾರವೆಂದರೇನು? ನಮ್ಮ ಕೈಯಿಂದ ಎಷ್ಟಾಗುತ್ತೋ ಅಷ್ಟು ನಾವು ಮಾಡ್ತೀವಿ."

"ಅಷ್ಟನ್ನ ಎಲ್ಲರೂ ಮಾಡ್ತಾರೆ. ಆ ಉತ್ತರಸಾಲದು. ಈಗ, ರಾತ್ರೆ ಯಾವತ್ತಾದರೂ ಸಾಮಾನ್ಯ ಪೋಲೀಸರು ನಾಲ್ಕಾರು ಹುಡುಗೀರ್ನ ಅಟ್ಟಿ ಸ್ಕೊಂಡು ಅಭಯಧಾಮದ ದೊಡ್ಡಿಗೆ ಸೇರಿಸ್ತಾರೆ ಅಲ್ವೆ?"

ಆ ಮಾತುಕತೆ ಸ್ವಾರಸ್ಯವಾಗಿತ್ತು. ಸುಂದರಮ್ಮ ಉತ್ಸಾಹದಲ್ಲಿದ್ದರು. ಆ ಉತ್ಸಾಹ ಅಂಟುಜಾಡ್ಯದ ಹಾಗೆ ಸರಸಮ್ಮನವರಿಗೂ ತಗಲಿಕೊಂಡಿತು.

"ಹೌದು, ಸೇರಿಸ್ತಾರೆ. ನಾವು ಆ ಹುಡುಗೀರ್ನ ಸುಧಾರಿಸೋಕೆ ನೋಡ್ತೀವಿ."

"ಅವಲ್ರೀ! ಈ ಪೋಲೀಸ್ನೋರು ಕಿರೀಪೇಟೆ ಹಿರೀಪೇಟೆ ದೊಡ್ಡ ದೊಡ್ಡ ಹೊಟ್ಲುಗಳಲ್ಲಿ ಬಾಡಿಗೆಗೆ ಸಿಗೋ ಹುಡುಗೀರ್ನ ಯಾಕೆ ಹಿಡಕೊಂಡು ಬರೊಲ್ಲ?"

ಸರಸಮ್ಮ ಮುಗುಳ್ನಕ್ಕರು. ಆ ದೇಹದ ಮಾರಾಟದ ವಿಷಯ ಅವರಿಗೆ ಗೊತ್ತಿತ್ತು. ನಗರದ 'ಗಣ್ಯರು' ಕೆಲವರು ಅಂಥ ಏರ್ಪಾಟಿನ

ಹಿಂದಿರುವುದನ್ನೂ ಹಿರಿಯ ಪೋಲೀಸ್ ಅಧಿಕಾರಿಗಳೇ ನೋಡಿಯೂ ನೋಡದಂತೆ ಸುಮ್ಮನಿರುವುದನ್ನೂ ಅವರು ತಿಳಿದಿದ್ದರು.

"ಅದು ನಮ್ಮ ಕೈಲಿಲ್ವಲ್ಲಾ !"

"ಸರಿ. ಅದು ನಮ್ಮ ಕೈಲಿಲ್ಲ. ಸೂಳೆಯರ ಮನೆಗಳು ಇಲ್ಲದಂತೆ ಮಾಡುವುದೂ ನಮ್ಮ ಕೈಲಿಲ್ಲ ತಾನೆ? ವ್ಯಭಿಚಾರಕ್ಕೆ ಕಾರಣವಾಗೋ ವಿಷಮ ದಾಂಪತ್ಯಗಳನ್ನು ಬಗೆ ಹರಿಸುವುದೂ ನಮ್ಮ ಕೈಲಿಲ್ಲ. ನಮ್ಮ ಹುಡುಗೀರು ಹಾದಿ ತಪ್ಪೋದಕ್ಕೆ ಆರ್ಥಿಕ ಸಾಮಾಜಿಕ ಕಾರಣಗಳಿವೆ. ಜೀವನದ ಸರಿಯಾದ ಮೌಲ್ಯಗಳನ್ನು ಪ್ರತಿಪಾದಿಸಲಾರದ ವಿದ್ಯಾಭ್ಯಾಸ ಪದ್ಧತಿಯಿದೆ. ನಮ್ಮ ನೈತಿಕ ಮಟ್ಟ ಮತ್ತಷ್ಟು ಕೆಳಗೆ ಇಳಿಯೋಕೆ ಕಾರಣವಾಗೋ ಕೆಟ್ಟ ಚಲಚಿತ್ರ ಕೆಟ್ಟ ಪುಸ್ತಕಗಳಿವೆ. ಗೊತ್ತುಗುರಿಇಲ್ಲದ ನಂಬುಗೆಶ್ರದ್ಧೆ ಇಲ್ಲದ ಬದುಕು ಯಾವಾಗಲೂ ಛಿದ್ರವಾಗುತ್ತೆ - ಅಲ್ವೆ ?"

"ಹೌದು ?"

"ಹಾಗಾದರೆ ಆ ಮೂಲ ಕಾರಣಗಳ್ನ ಮೊದಲು ಹೋಗಲಾಡಿಸಿ - ಅಂತಾನೆ ಆತ."

"ಅದು ನಮ್ಮ ಕೈಲಿದೆಯೆ ? ಆ ಕೆಲಸ ಸರ್ಕಾರ ಮಾಡ್ಬೇಕು; ಜನರು ಮಾಡ್ಬೇಕು....ಸಮಾಜದ ಪುನರ್ಘಟನೆ ದೊಡ್ಡ ವಿಷಯವಾಯ್ತು."

"ಹಾಗಾದರೆ, ಎಲ್ಲಿಯೋ ಸಿಕ್ಕಿದ ಯಾವುದೋ ಹುಡುಗಿ ಒಬ್ಬಳ್ನ ಸುಧಾರಿಸಿ ಏನ್ರೀ ಬರೋದು ?

"ನಮ್ಮ ಕೈಲಿ ಎಷ್ಟಾಗುತ್ತೋ ಅಷ್ಟನ್ನು ಮಾಡ್ತೀವಿ."

"ಪುನಃ ಅಲ್ಲಿಗೇ ಬಂತು ಚಕ್ರ !—"

ಒಳಗೆ ಯಾರೋ ಬಂದರೆಂದು ಸುಂದರಮ್ಮ ಮಾತು ನಿಲ್ಲಿಸಿದರು. ಬಂದವನು ತೆಳು ನೀಲಿಯ ಉಣ್ಣೆಯ ಪ್ಯಾಂಟಿನಮೇಲೆ ಚಕಚಕಿಸುವ ಬಿಳಿಯ ಲಿನನ್ ಬುಷ್ ಷರ್ಟು ತೊಟ್ಟುಕೊಂಡಿದ್ದ, ಸೋಮಶೇಖರ.

ಬಂದವನೇ, "ಓ!" ಎಂದ. "ಇನ್ನೂ ಮುಗ್ದೇ ಇಲ್ವಾ ನಿಮ್ಮ ಸಭೆ ?"

ಹೊರಡಲೆಂದು ಹಿಂದಕ್ಕೆ ತಿರುಗಿದವನನ್ನು ಕಮಲಮ್ಮ ಕರೆದರು:

"ಇಲ್ಲಿ ಬನ್ನಿ ಮಿ. ಸೋಮಶೇಖರ್ - ಒಂದ್ನಿಮಿಷ."

ಸೋಮಶೇಖರ ಬಂದ. ದೊಡ್ಡಮ್ಮನಿಗೆ ನಮಸ್ಕರಿಸಿ, ಅಕ್ಕನ ಬಳಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

ಸುಂದರಮ್ಮ ಏಕಪ್ರಕಾರವಾದ ಸ್ವರದಲ್ಲಿ ಅಂದರು :

" ನಾನು ಹೇಳ್ತಾ ಇದ್ನೆಲ್ಲ ಸರಸಮ್ಮ? ಆ ಎಕ್ಸ್ ಮಹಾಶಯ ಈತನೇ !"

ಸರಸಮ್ಮ ದಂಗುಬಡೆದವರಂತೆ ಕುಳಿತರು. ತನ್ನ ಮದುವೆಯ ಪ್ರಸ್ತಾಪವೇನಾದರೂ ಬಂದಿತ್ತೇನೋ ಎಂದು ಸೋಮಶೇಖರನ ಮುಖ ರಂಗೇರಿತು.

" ಅದೇನಕ್ಕ ಎಕ್ಸ್, ವೈ, ಜೆಡ್ಡು ?"

" ಅಭಯಧಾಮದಿಂದ ಪ್ರಯೋಜನ ಇಲ್ಲಾಂತ ನೀನು ಹೇಳ್ತಿದ್ದೆ ನೋಡು. ಆ ವಿಷಯ ಮಾತಾಡ್ತಿದ್ವಿ."

" ಓ ಅದಾ !"

ತೋರಿಕೆಗೆ ಅದೇನೋ ಅಕ್ಕ-ತಮ್ಮಂದಿರ ನಡುವಿನ ತಮಾಷೆಯ ಜಗಳವಾಗಿತ್ತು. ಆದರೆ ಸೋಮಶೇಖರನ ವಾದದಲ್ಲಿ ಸತ್ಯಾಂಶವೂ ಇತ್ತಲ್ಲವೆ ?

ಸರಸಮ್ಮ, ವಿಚಾರಿಯಾದ ಆ ತರುಣನ ಸುಂದರ ಮುಖವನ್ನು ನೋಡುತ್ತ ತುಂಗಮ್ಮನನ್ನು ಜ್ಞಾಪಿಸಿಕೊಳ್ಳುತಿದ್ದಾಗಲೆ, ಕೇಳಿಬಂದಮಾತು ಅವರನ್ನು ಎಚ್ಚರಗೊಳಿಸಿತು.

"ಈ ದಿನ ನಿಮಗೆ ಹೇಳ್ಬೇಕೊಂತಲೇ ಮಾಡಿದ್ವಿ ಸರಸಮ್ಮ. ಅದಕ್ಕೇ ಇವನೂ ಬಂದಿರೋದು. ತನ್ನನ್ನ ಅಳಿಯನಾಗಿ ಮಾಡ್ಕೋ ಬೇಕೊಂತ ಸೋಮಶೇಖರ ನಿಮ್ಮನ್ನ ಕೇಳ್ತಿದಾನೆ."

ಅನಿರೀಕ್ಷಿತವಾಗಿ ಬಂದಿದ್ದ ಆ ಮಾತುಕೇಳಿ ಸರಸಮ್ಮ ಕಕ್ಕಾವಿಕ್ಕಿಯಾದರು.

" ತಮಾಷೆ ಮಾಡ್ತೀರಾ !"

" ಇಲ್ಲ ಸರಸಮ್ಮ ಇವನ್ನೇ ಕೇಳಿ ಬೇಕಾದ್ರೆ. ಹೇಳೋ ಸೋಮು."

ಕಮಲಮ್ಮನ್ನೂ ಧ್ವನಿ ಕೂಡಿಸಿದರು :

" ಸಮಾಜ - ಸರಕಾರ - ಪುನರ್ಘಟನೆ ಅಂತ ವಾದಿಸ್ತೀರಾ, ಇಷ್ಟು ಹೇಳೋದಕ್ಕೇನ್ರಿ?"

ಸುಂದರಮ್ಮ ನಗುತ್ತ ಅಂದರು :

"ಹೋಗಲಿಬಿಡಿ. ನನ್ತಮ್ಮನಿಗೆ ನಾಚಿಕೆ ಜಾಸ್ತಿ. ನಾನೇ ಕೇಳ್ತೀನಿ. ನನ್ನ ತಮ್ಮನ್ನ ಅಳಿಯನಾಗಿ ನೀವು ಸ್ವೀಕರಿಸಿಬೇಕು."

"ಅದಕ್ಕೆ, ಯಾರೇ ಆಗಲಿ ಭಾಗ್ಯ ಮಾಡಿರಬೇಕು ಸುಂದರಮ್ಮ."

"ಆ ಭಾಗ್ಯ ನೀವು ಮಾಡಿದ್ದೀರಿ. ಇಷ್ಟು ವರ್ಷ ಈತ ಮದುವೆ ಯಾಗೊಲ್ಲ ಅಂದಿದ್ದ. ಈಗ ಮದುವೆಯಾದರೆ ನಿಮ್ಮ ಹುಡುಗಿ ಒಬ್ಬಳನ್ನೇ ಅಂತ ಹಟ ಹಿಡಿದಿದ್ದಾನೆ. ಎಲ್ಲದಕ್ಕೂ ಹೆಚ್ಚಾಗಿ ತಾಯಿನಾನ ಒಪ್ಪಿಸಿದ್ದಾನೆ."

"ನಿಮ್ಮ ತಮ್ಮ ಯಾವ ಹುಡುಗಿ ವಿಷಯ ಹೇಳಿದ್ದಾರೆ ?"

"ಅಷ್ಟೂ ಊಹಿಸ್ಕೊಳ್ಳೋಕೆ ಆಗೊಲ್ವೇನ್ರಿ ? ನಿಮ್ಮ ಅಸಿಸ್ಟೆಂಟ್ ಮೇಲೆಯೇ ಅವನಿಗೆ ಕಣ್ಣು. ತುಂಗಮ್ಮನ್ನ ನಿಮ್ಮಿಂದ ತಪ್ಪಿಸ್ಬಿಟ್ರೆ ಅಭಯ ಧಾಮ ಹ್ಯಾಗೆ ನಡಿಯುತ್ತೆ ನೋಡ್ಬೇಕೂಂತ ಆತನ ಹಟ. ಹ್ಯಾಗೂ ಅಭಯ ಧಾಮದಿಂದ ಪ್ರಯೋಜನ ಇಲ್ಲ ನೋಡಿ !"

ದುಃಖದ ಸಂತೋಷದ ಭಾವನೆಗಳನ್ನೆಲ್ಲ ಮರೆಸಲು ಸರಸಮ್ಮ ಗಟ್ಟಿ ಯಾಗಿ ನಕ್ಕರು. ಸೋಮಶೇಖರನೂ ನಕ್ಕ. ಸರಸಮ್ಮ ಕಾರ್ಯದರ್ಶಿನಿಯ ಕಡೆಗೆ ತಿರುಗುತ್ತ ಕೇಳಿದರು :

"ಇದೊಂದೂ ತಮಾಷೆ ಅಲ್ಲಾಂತ್ಲೇ ತಿಳಕೊಳ್ಲಾ ?"

"ಹೌದು ಸರಸಮ್ಮ. ಯುಗಾದಿ ಹೊತ್ತಿಗೆ ಮದುವೇಂತ ಗೊತ್ತು ಮಾಡಿದ್ದಾರೆ. ಹುಡುಗೀನ ಒಪ್ಪಿಸಿ. ಆಕೆ ತಂದೇನ ಕರೀರಿ."

ತುಂಗಮ್ಮ ತಮ್ಮ ಕೈ ಬಿಟ್ಟು ಹೋಗುವಳೆಂಬುದು ಸರಸಮ್ಮನಿಗೆ ಖಚಿತವಾಯಿತು. ಭಾರವಾದ ಹೃದಯದೊಡನೆ ಅವರು ಎದ್ದು ನಿಂತರು.

"ಆಗಲಿ. ಇವತ್ತೇ ತುಂಗನ ಕೂಡೆ ಮಾತಾಡ್ತೀನಿ. ನಾಳೆ ಬೆಳಿಗ್ಗೆ ಅವರ ತಂದೆಗೆ ಬರೀತೀನಿ."

"ಅಂತೂ ನಮ್ಮ ಬೀಗರಾದಿರಿ. ಮನೆಕಾರಿನಲ್ಲೇ ಹೋಗೋಣ ಬನ್ನಿ"

—ಎಂದರು ಸುಂದರಮ್ಮ ನಗುತ್ತ.

ತನ್ನ ಭಾವನ ಆ ಕಾರನ್ನು ಪುಟುಕೋಸು ಕಾರೆಂದು ತುಂಗಮ್ಮ ನೊಡನೆ ತಾನು ಅಂದುದು ನೆನಪಾಗಿ ಸೋಮಶೇಖರ ತನ್ನಷ್ಟಕ್ಕೇ ಮುಗುಳ್ನಕ್ಕ.

## ೨೧

ಅಂತೂ ಜಲಜೆಗೆ ಗೊತ್ತಾಯಿತು; ಸಾವಿತ್ರಿಗೂ ತಿಳಿದು ಹೋಯಿತು. ಆದರೂ ಆ ವಿಷಯ ರಹಸ್ಯವಾಗಿಯೇ ಮತ್ತೂ ಉಳಿಯಿತು.

ದೊಡ್ಡಮ್ಮ, ತುಂಗಮ್ಮನನ್ನು ಕರೆದುಕೊಂಡು ಸುಂದರಮ್ಮನ ಮನೆಗೆ ಹೋಗಿ ಸೋಮಶೇಖರನ ವೃದ್ಧ ತಾಯಿಯನ್ನು ಕಂಡುಬಂದರು. ಆ ವೃದ್ಧೆಗೆ ಅಸಮಾಧಾನವಿತ್ತು. ಆದರೆ ಅದೆಲ್ಲಾ ಆಕೆ ನುಂಗಿದ ಉಗುಳು. ಮಗನ ಹಟಮಾರಿತನದ ಮುಂದೆ ಆಕೆಯದೇನೂ ನಡೆಯುವಂತಿರಲಿಲ್ಲ.

ತುಂಗಮ್ಮನ ತಂದೆ ಬಂದರು. ಅವರಿಗೆ ಸಂತೋಷಕ್ಕಿಂತಲೂ ಆಶ್ಚರ್ಯವೇ ಹೆಚ್ಚಾಗಿತ್ತು. ಬರುತ್ತ, ಇದರಲ್ಲೇನೋ ಮೋಸವಿದ್ದರೂ ಇರಬಹುದೆಂಬ ಶಂಕೆ ಇತ್ತು ಅವರಿಗೆ.

ಆದರೆ ಇಲ್ಲಿ ಯಾವ ಮೋಸವೂ ಇರಲಿಲ್ಲ.

ಸುಂದರಮ್ಮ—ಅನಂತರಾಮಯ್ಯ ದಂಪತಿಗಳ ಅತಿಥಿಯಾಗಿ ಅವರು ಉಳಿದರು. ಇಂತಹ ಗಂಡ ದೊರೆಯ ಬೇಕಾದರೆ ತುಂಗಮ್ಮನ ಜೀವನದಲ್ಲಿ ಹೀಗೂ ಆಗಬೇಕಾಗಿತ್ತೇನೋ—ಎಂದು ಅವರಿಗೆ ಅನಿಸದಿರಲಿಲ್ಲ. ಇದೆಲ್ಲ ವಿಧಿಯ ಆಟ—ಎಂಬ ಉದ್ಗಾರವೂ ಅವರ ಬಾಯಿಂದ ಬಂತು.

ಅಭಯಧಾಮಕ್ಕೆ ಬಂದು ಅಲ್ಲಿ ಆಫೀಸು ಕೊಠಡಿಯಲ್ಲಿ ಸರಸಮ್ಮನೊಡನೆ ಕುಳಿತಾಗ, ಅವರ ಕಂಠ ಉಮ್ಮಳಿಸಿ ಸ್ವಲ್ಪಹೊತ್ತು ಮಾತೇ ಹೊರಡಲಿಲ್ಲ.

"ನನಗೊಂದೂ ಅರ್ಥವಾಗ್ತಿಲ್ಲ ಸರಸಮ್ಮನವರೆ. ಇದೆಲ್ಲಾ ನಿಜವೆ ಅಂತ ಗಾಬರಿಯಾಗುತ್ತೆ ಒಮ್ಮೊಮ್ಮೆ. ಅಂತೂ ನಾನು ಕಣ್ಮುಚ್ಕೋಕ್ಮುಂಚೆ ಮನಶ್ಶಾಂತಿ ಸಿಗೋಹಾಗೆ ಮಾಡಿದ್ರಿ. ನಿಮ್ಮ ಉಪಕಾರಾನ ಈ ಜನ್ಮದಲ್ಲಿ ತೀರಿಸೋಕಾಗುತ್ತೊ ಇಲ್ವೋ."

ಅವರು ಅಷ್ಟಾದರೂ ಅಂದರು. ಆದರೆ ಸರಸಮ್ಮ ಮಾತನಾಡುವ

ಸ್ಥಿತಿಯಲ್ಲೇ ಇರಲಿಲ್ಲ. ಅವರು ಕಿಟಕಿಯ ಆಚೆ ಆಕಾಶದತ್ತ ಶೂನ್ಯ ನೋಟ ಬೀರುತ್ತ ಕುಳಿತರು.

ತುಂಗಮ್ಮನ ತಂದೆ ಬಂದು ಹೋದಮೇಲೆ, ಮದುವೆಯ ಮಾತು ಅಭಯಧಾಮದ ಪ್ರತಿಯೊಬ್ಬರಿಗೂ ತಿಳಿದು ಹೋಯಿತು. ಬಹಳ ಜನರಿಗೆ ಸಂತೋಷವಾಯಿತು. ಕೆಲವರಿಗೆ ಅಸೂಯೆಯಾಗದಿರಲಿಲ್ಲ.

ಕುರುಡಿ ಸುಂದ್ರಾ ಜಲಜೆಯನ್ನು ಕೇಳಿದಳು:

"ಅವರು ಎಂಗಿದಾರೆ ನೋಡಕ್ಕೆ ?"

"ಯಾರು ?"

"ತುಂಗಕ್ಕನ ಅವರು ಕಣೇ"

"ಎಂಗಿದಾರೆ ಅನ್ನೇ ?"

—ಆ ಬಳಿಕ ಸುಂದ್ರಾಳ ಪ್ರಶ್ನೆಗೆ ಉತ್ತರವಾಗಿ, ಜಲಜ ತಾನು ಮನಸ್ಸಿನಲ್ಲಿ ಚಿತ್ರಿಸಿಕೊಂಡಿದ್ದ ರಾಜಕುಮಾರನನ್ನು ವರ್ಣಿಸಿದಳು....

... ... ... ...

ಯುಗಾದಿ ಹಬ್ಬದತನಕ ಕಾದು ಕೂತಿರಲು ಸೋಮಶೇಖರ ಒಪ್ಪಲಿಲ್ಲ.

ಬೆಳಗಾಂವಿಗೆ ಹಿಂತಿರುಗಿದ್ದ ತುಂಗಮ್ಮನ ತಂದೆ ದೊಡ್ಡ ಮಗಳೊಡನೆಯೂ ಅಳಿಯನೊಡನೆಯೂ ಬಂದರು. ಪರೀಕ್ಷೆಯ ಸಿದ್ಧತೆಯಲ್ಲಿದ್ದ ತುಂಗಮ್ಮನ ತಮ್ಮ ಮಾತ್ರ ಬರಲಿಲ್ಲ. ಆದರೆ ಒಲವಿನ ಅಕ್ಕನಿಗೆ ಮುದ್ದಾದ ಒಂದು ಕಾಗದವನ್ನು ಆತ ಬರೆದ.

ಮದುವೆ ಎಲ್ಲಿ ಜರಗಬೇಕೆಂಬುದರ ಬಗೆಗೆ ಸ್ವಲ್ಪ ರಂಪವೇ ಆಯಿತು. ದೇವಸ್ಥಾನದಿಂದ ಸ್ಥಳ ಆರ್ಯಸಮಾಜಕ್ಕಿಳಿಯಿತು. ಆದರೂ ಜಪ್ಪಯ್ಯ ಎನ್ನಲಿಲ್ಲ ಸೋಮಶೇಖರ. ತುಂಗನೋ, "ಅವರು ಹೇಳಿದ ಹಾಗೆ" ಎಂದಳು ಮಾತ್ರ.

'ಅವರು' ರೆಜಿಸ್ಟ್ರಾರರಮುಂದೆ ಸಹಿ-ಸಾಕ್ಷ್ಯಗಳ ಹಿನ್ನೆಲೆಯಲ್ಲಿ ಮದುವೆಯಾಗಲೆಂದರು.

ಹಾಗೆಯೇ ಆಯಿತು.

ಅಭಯಧಾಮದಲ್ಲಿ ಭಾರಿ ಭೋಜನವೇರ್ಪಟ್ಟಿತು. ವಧೂವರರು

ಆ ಸಂದರ್ಭದಲ್ಲಿ ಅಭಯಧಾಮದ ಪ್ರತಿಯೊಬ್ಬರಿಗೂ ಒಂದೊಂದು ಒಳ್ಳೆಯ ಸೀರೆ, ರವಕೆ ಕಣ, ಮತ್ತು ತಮಗೆ ಬೇಕಾದ ಒಂದೊಂದು ಜತೆ ಚಪ್ಪಲಿಗಾಗಿ ಐದೈದು ರೂಪಾಯಿ ಕೊಟ್ಟರು.

ಹುಡುಗಿಯರು ತಾವು ಹೊಲಿದಿದ್ದ ಚಾಪೆ, ಸೀರೆ, ಶಾಲುಗಳನ್ನು ವಧೂವರರಿಗೆ ಓದಿಸಿದರು.

ಆದರೆ ಜಲಜ—ಲಲಿತ—ಸಾವಿತ್ರಿಯರೇನನ್ನೂ ಕೊಡಲಿಲ್ಲ. ಅದು ಅವರ ಅಕ್ಕನ ಮದುವೆಯಾಗಿತ್ತಲ್ಲವೆ? ಸರಸಮ್ಮನೂ ಉಡುಗೊರೆ ಕೊಡಲಿಲ್ಲ. ಅದು ಅವರ ಮಗಳ ಮದುವೆಯಾಗಿತ್ತಲ್ಲವೆ?

ವಧು ಗಂಡನ ಮನೆಗೆ ಹೊರಡುವ ಮಾತು.

ಸೋಮಶೇಖರ ತುಂಗಮ್ಮನೊಡನೆ ಆಫೀಸು ಕೊಠಡಿಗೆ ಬಂದ. ಆತನ ಅಪೇಕ್ಷೆಯಂತೆ ತುಂಗಮ್ಮ ಹೊಸ ಷೀಫಾನ್ ಸೀರೆಯುಟ್ಟಿದ್ದಳು. ಆಧುನಿಕ ಬ್ಲೌಸು ತೊಟ್ಟಿದ್ದಳು. ಕಿವಿಗೆ ಓಲೆ, ಕತ್ತಿಗೆ ಸರ, ಕೈಗೆ ಬಳೆ. ಅರಳಿದ ಮನಸ್ಸು—ಚಿಗುರಿದ್ದ ದೇಹ....ಲಾವಣ್ಯವತಿಯಾಗಿದ್ದಳು ತುಂಗಮ್ಮ. ಸುಮಾರು ಒಂದು ವರ್ಷದ ಹಿಂದೆ ಆಶ್ರಯ ಯಾಚಿಸಿಕೊಂಡು ಬಂದಿದ್ದ ಮುದುಡಿದ ಬಾಡಿದ ತುಂಗಮ್ಮನಾಗಿರಲಿಲ್ಲ ಈಕೆ.

ಬೀಳ್ಕೊಡಿರೆಂದು ಕೇಳಲು ಬಂದಿದ್ದಾಳೆ ಹುಡುಗಿ—ಎಂದುಕೊಂಡರು ಸರಸಮ್ಮ.

"ಏನಮ್ಮ ತುಂಗ, ಹೋಗ್ತೀಯಾ?"

"ಇವತ್ತು ಹೋಗ್ತೀನಿ. ನಾಳೆಯೇ ಬಂದುಬಿಡ್ತೀನಿ ದೊಡ್ಡಮ್ಮ."

ಸರಸಮ್ಮನಿಗೆ ಅರ್ಥವಾಗಲಿಲ್ಲ. ಆಶ್ಚರ್ಯವಾಯಿತು.

"ಅಂದರೆ?"

"ಅಮ್ಮ, ನೀವೇನೂಂತ ತಿಳಕೊಂಡಿದ್ರಿ? ತುಂಗ ನಿಮ್ಮನ್ನ ಬಿಟ್ಬಿಟ್ಟು ಹೋಗ್ತಾಳೇಂತ ಅಲ್ವೆ?"

—ಹಾಗೆ ಕೇಳಿದವನು ಸೋಮಶೇಖರ.

ಉತ್ತರ ಬರದೇ ಇದ್ದುದನ್ನು ಕಂಡು ಆತನೇ ಮಾತು ಮುಂದುವರಿಸಿದ:

"ಸಾವಿನ್ನೂ ಮನೆಮಾಡೋದು ತಡ. ಆಮೇಲೇನೋ ಜತೇಲಿ

ಇರ್ತೀವಿ. ಆದರೆ ಇಲ್ಲಿ ಸಹಾಯಿಕೆ ಅಧ್ಯಾಪಿಕೆ ಕೆಲಸಾನೆಲ್ಲಾ, ನೀವು ಮಾಡು ಅನ್ನೋ ವರೆಗೂ ತುಂಗ ಮಾಡ್ತಾಳೆ. ಅಲ್ವೆ ತುಂಗ?"

"ಹೌದು."

ತಮ್ಮ ಕಿವಿಗಳನ್ನೇ ತಾವು ನಂಬಲು ಸರಸಮ್ಮ ಸಿದ್ಧರಿರಲಿಲ್ಲ. ಆ ಕೆಲವು ದಿನಗಳಲ್ಲಿ ನಿಜವಾದ ಸಂತೋಷದ ಅನುಭವ ಅವರಿಗೆ ಆದುದು ಆಗ.

"ಇದಕ್ಕಿಂತ ಅಭಯಧಾಮಕ್ಕೆ ನೀವು ಮಾಡೋ ಉಪಕಾರ ಬೇರೆ ಇಲ್ಲ ಸೋಮಶೇಖರ್"

—ಎಂದು ಅವರು ಹೃತ್ಪೂರ್ವಕವಾಗಿ ನುಡಿದರು.

ಅಷ್ಟರಲ್ಲಿಯೇ ಜಲಜ ಲಲಿತೆಯರು ಬಂದರು. ಲಲಿತ, ಕಾಹಿಲೆ ಯಿಂದ ಎದ್ದಮೇಲೆ ಮೈತುಂಬಿಕೊಂಡಿದ್ದವಳು, ಬಾಗಿಲಲ್ಲೆ ನಿಂತಳು. ಜಲಜೆಯೊಬ್ಬಳೇ ಒಳಬಂದಳು. ತುಂಟತನ ಕುಣಿಯುತ್ತಲೆ ಇತ್ತು ಆಕೆಯ ತುಟಿಗಳ ಮೇಲೆ.

"ದೊಡ್ಡಮ್ಮ, ನಾನೊಂದು ಮಾತು ಹೇಳ್ಬಹುದೇ?"

ಇದೇನೋ ತಮಾಷೆಯ ವಿಷಯವೆಂದು ಕೊಠಡಿಯಲ್ಲಿದ್ದ ಮೂವ ರಿಗೂ ಹೊಳೆಯದೆ ಇರಲಿಲ್ಲ.

"ಹೇಳು, ಅದೇನು?"

—ಎಂದು ನಗಲು ಸಿದ್ಧರಾಗುತ್ತ ಅಂದರು ಸರಸಮ್ಮ.

"ಗಂಡನ ಮನೆಗೆ ಹೋದಮೇಲೆ ಹುಡುಗಿಗೆ ಬೇರೆ ಹೆಸರು ಇಡ್ತಾರೆ ಅಲ್ವೆ?"

"ಹೊಂ. ಹೌದು...."

"ಈಗ ನಮ್ಮ ಈ ಭಾವನವರು ತಮ್ಮ ಹೆಂಡತೀಗೆ ಒಳ್ಳೇ ಹೆಸರಿಡ್ಬೇಕೊಂತ—"

ಸೋಮಶೇಖರನಿಗೆ ನಗುಬಂತು.

"ಅದೇನು ಹೆಸರು ಬೇಕೋ ನೀವೇ ಹೇಳಿ"

—ಎಂದು ಆತ ಜಲಜ ಲಲಿತೆಯರತ್ತ ನೋಡಿದ.

ಜಲಜ ಅಂದಳು:

" ಪ್ರೇಮಲತಾನೋ ಪುಷ್ಪಲತಾನೋ— "

ಜಲಜೆಯ ಉತ್ತರಕೇಳಿ " ಥೂ ! " ಎಂದಳು ತುಂಗಮ್ಮ. ಆಕೆಗೆ ತುಮ್ಮಲೆ ಒಂದು ವರ್ಷದ ಹಿಂದಿನ ನೆನಪಾಯಿತು. ಬಂದ ಆರಂಭದಲ್ಲಿ ಜಲಜ ಹೇಳಿದ್ದಳು: ' ನಿಮ್ಮ ಹೆಸರು ಪ್ರೇಮಲತಾನೋ ಪುಷ್ಪಲತಾನೋ ಇರಬಹುದೂಂತಿದ್ದೆ. '

"ಆದರೆ ನನಗೇನೋ ತುಂಗಮ್ಮ ಅನ್ನೋ ಹೆಸರೇ ಬಹಳ ಇಷ್ಟ"

—ಎಂದ ಸೋಮಶೇಖರ.

ಗಂಡನ ಮಾತು ಕೇಳಿ ತುಂಗಮ್ಮ ತನಗೆ ನಾಚಿಕೆಯಾಯಿತೆಂದು ತೋರಿಸಿಕೊಂಡಳು.

....................

ಸಂಜೆಯಾದಮೇಲೆ ತುಂಗಮ್ಮ ಒಂದು ದಿನದಮಟ್ಟಿಗೆ ಪತಿಗೃಹಕ್ಕೆ ಹೊರಟಳು. ಪುಟಕೋಸು ಕಾರಿನ ಬದಲು ಒಳ್ಳೆ ಕುದುರೆಯನ್ನು ಹೂಡಿದ್ದ ಜಟಕಾಗಾಡಿ ನಿಂತಿತ್ತು.

ಹುಡುಗಿಯರೆಲ್ಲ ಆಫೀಸು ಕೊಠಡಿಯ ಕಿಟಕಿಯ ಎಡೆಯಿಂದಲೂ ಬಾಗಿಲಬಳಿಯೂ ನಿಂತು ಬೀಳ್ಕೊಟ್ಟರು. ಸರಸಮ್ಮ, ಜಲಜ, ಲಲಿತ ಮತ್ತು ಸಾವಿತ್ರಿ ಬೀದಿಯವರೆಗೂ ಬಂದರು.

ಗಾಡಿಯನ್ನೇರಲು ಹೊರಟ ತುಂಗಮ್ಮನನ್ನು ತಡೆದು ಜಲಜ ಕೇಳಿದಳು :

" ಅಕ್ಕ, ನನ್ನದೊಂದು ಮಾತಿದೆ. ಆಗೋಲ್ಲ ಅನ್ಬೇಡ. ದಯವಿಟ್ಟು ನಡೆಸ್ಕೊಡು. "

" ಅದೇನೇ ? "

" ಅಕ್ಕ, ನಿನ್ನ ಊಟದ ತಟ್ಟೇನ ನನಗೆ ಕೊಡೋಹಾಗೆ ದೊಡ್ಡಮ್ಮಿಗೆ ಹೇಳು. "

ಎಲ್ಲರಿಗೂ ಅದು ಕೇಳಿಸಿತು. ಅರ್ಥವಾಗದೆ ಇದ್ದ ಸೋಮಶೇಖರನ ಹೊರತಾಗಿ ಉಳಿದವರೆಲ್ಲರೂ ನಕ್ಕರು.

ತುಂಗಮ್ಮನ ಮುಖ ಕೆಂಪು ಕೆಂಪಗಾಯಿತು.

" ಅದೇನು ? ಅದೇನು ? "

—ಎಂದು ಕೇಳಿದ ಸೋಮಶೇಖರ ಪೆಚ್ಚು ಪೆಚ್ಚಾಗಿ.

"ನಡೀರಿ ಆಮೇಲೆ ಹೇಳ್ತೀನಿ"

—ಎಂದಳು ತುಂಗಮ್ಮ, ಗಾಡಿಯನ್ನೇರುತ್ತ.

ಜಟಕಾಗಾಡಿ ಹೊರಟಿತು. ತನ್ನನ್ನೇ ನೋಡುತ್ತ ನಿಂತಿ ದೊಡ್ಡಮ್ಮನನ್ನೂ ಗೆಳತಿಯರನ್ನೂ ತುಂಗಮ್ಮ ನೋಡಿದಳು—ತಿರುತಿರು ನೋಡಿದಳು.

— ಇತರ ಬರಹಗಾರರು —

ಶ್ರೀ ಬಸವರಾಜ ಕಟ್ಟೀಮನಿ

ಶ್ರೀ ನರೇಂದ್ರಬಾಬು

ಶ್ರೀ ದಾಶರಥಿ ದೀಕ್ಷಿತ್

ಶ್ರೀ ಉಮಾಪತಿ

ಶ್ರೀ ತಾ. ರಾ. ನಾಗರಾಜ

ಶ್ರೀಮತಿ ಶಕುಂತಲ ನಾಗರಾಜ

★

ಸುದರ್ಶನ ಪ್ರಕಾಶನ

'ತಾರಾನಿವಾಸ'' : : ತಿಪಟೂರು



★ ಸಣ್ಣಕತೆ ವಿಮರ್ಶೆ-ಕಾದಂಬರಿ ಪ್ರಕಾರಗಳಲ್ಲಿ ಈಗಾಗಲೇ ಒಳ್ಳೆಯ ಬರವಣಿಗೆಯನ್ನು ನೀಡಿರುವ **ನಿರಂಜನರು** ಕನ್ನಡದ ಹೊಸ ಪೀಳಿಗೆಯ ಪ್ರತಿಭಾವಂತ ಸಾಹಿತಿಯಾಗಿದ್ದಾರೆ. 'ಸಂಧಿಕಾಲ' 'ರಕ್ತಸರೋವರ' 'ಅನ್ನಪೂರ್ಣಾ' 'ಕೊನೆಯ ಗಿರಾಕಿ' ಮತ್ತಿತರ ಕಥಾಸಂಕಲನಗಳು; 'ವಿಮೋಚನೆ', ಬನಶಂಕರಿ' ಕಾದಂಬರಿಗಳು; 'ಜನಪ್ರಗತಿ', 'ಚಿತ್ರಗುಪ್ತ' ವಾರಪತ್ರಿಕೆಗಳಲ್ಲಿ ಅವರು ಬರೆದ ಸ್ಥಿರ ಶೀರ್ಷಿಕೆಗಳು; ಇವುಗಳ ಮೂಲಕ **ನಿರಂಜನರು** ಕನ್ನಡ ಓದುಗರಿಗೆಲ್ಲಾ ಪರಿಚಿತರಾಗಿದ್ದಾರೆ.

★ ವಸ್ತುವಿನ ಆಯ್ಕೆಯಲ್ಲಿ ತೋರುವ ಪ್ರಗತಿಪರದೃಷ್ಟಿ, ಆ ವಸ್ತುವಿಗೆ ಅನುಗುಣವಾದ ತಂತ್ರ-ಶೈಲಿ, ಬರವಣಿಗೆಯ ಉದ್ದಕ್ಕೂ ಕಾಣುವ ಮಾನವೀಯತೆಯ ಪ್ರತಿಪಾದನೆ, ಪ್ರತಿಯೊಂದು ಕೃತಿಯೂ ಉದ್ದೇಶಿಸುವ ವಿಚಾರ ಪ್ರಚೋದನೆ-ಈ ಗುಣಗಳಿಗಾಗಿ **ನಿರಂಜನರ** ಕೃತಿಗಳು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಸ್ಥಾನವನ್ನು ಸಂಪಾದಿಸಿಕೊಂಡಿವೆ.

★ ಕಳೆದ ಹತ್ತು ವರ್ಷಗಳಿಂದ **ನಿರಂಜನರು** ಪ್ರಗತಿಶೀಲ ಸಾಹಿತ್ಯ ಚಳವಳಿಯಲ್ಲಿ ಗಮನಾರ್ಹವಾದ ಪಾತ್ರವನ್ನು ವಹಿಸುತ್ತಿದ್ದಾರೆ.